# ಫಲಪ್ರಾಪ್ತಿ

ಧಾರ್ಮಿಕ ಕಾದಂಬರಿ

ಲೇಖಕರು :

ಪಿ. ಎಸ್. ರಾಮಸ್ವಾಮಿ ಐಯ್ಯಂಗಾರ್, ಬಿ.ಎ.

ಶ್ರೀ ವಾಣೀ ಪ್ರಕಾಶನ

ಚಿಕ್ಕಪೇಟೆ : ಬೆಂಗಳೂರು-2.

★

## — ಫಲಪ್ರಾಪ್ತಿ —


ಮೊದಲನೆಯ ಮುದ್ರಣ — — 1955

ಪ್ರಕಾಶಕರು : — ಶ್ರೀವಾಣಿ ಪ್ರಕಾಶನ

ಮುದ್ರಕರು : — ಕಲಾಸಿಧಿ ಮುದ್ರಣಾಲಯ

ಮುಖ ಚಿತ್ರ : — ಶ್ರೀ ಪುರುಷೋತ್ತಮರಾವ್

ಪಡಿಯಚ್ಚು : — ಸೂಪರ್ ಪ್ರೋಸೆಸ್ ಸ್ಟುಡಿಯೊ

ಚಿತ್ರಮೇಳನ : — ಟಿ. ಎ. ಪ್ರಭಾಕರ್

ಪ್ರಕಾಶನಾ ಹಕ್ಕು : — ಶ್ರೀ ವಾಣಿ ಪ್ರಕಾಶನ





**— ಬೆಲೆ : ಒಂದೂವರೆ ರೂಪಾಯಿ —**


★

## — ಅರಿಕೆ —

ಇದು ನಮ್ಮ ಚೊಚ್ಚಲು ಕಾದಂಬರಿ. ಈ ಧಾರ್ಮಿಕ ಕಾದಂಬರಿಯನ್ನು ಕರ್ಣಾಟಕದ ಸುಪ್ರಸಿದ್ಧ ಲೇಖಕರೂ, ಕಥೆಗಾರರೂ, ನಾಟಕಕಾರರೂ ಆದ ಶ್ರೀ ಬಿ. ಎಸ್. ರಾಮಸ್ವಾಮಿ ಐಯ್ಯಂಗಾರ್, ಬಿ.ಎ. ರವರು ತಿಳಿಶೈಲಿಯಲ್ಲಿ ಮುದ್ದಾಗಿ ರಚಿಸಿ, ಆನಂದ ಅಭಿಮಾನದಿಂದ ಪ್ರಕಟಿಸಲು ನಮಗಿತ್ತಿರುವರು. ಅವರಿಗೆ ನಮ್ಮ ನೆನಕೆ ಸಲ್ಲುತ್ತದೆ.

ರಸವತ್ತಾಗಿ ರಚಿಸಿರುವ ಈ ಧಾರ್ಮಿಕ ಕಾದಂಬರಿಯು ಪ್ರತಿಪುಟದಲ್ಲೂ ಕುತೂಹಲ ಕೆರಳಿಸಿ ರಮ್ಯಾಂತ್ಯದೊಂದಿಗೆ ರಂಜನೆಯನ್ನುಂಟುಮಾಡುವುದರಲ್ಲಿ ನಿಸ್ಸಂದೇಹ. ಓದುಗರಿಗೂ ಹಾಗೆನಿಸಿದರೆ ನಮ್ಮ ಶ್ರಮ ಸಾರ್ಥಕವಾದಂತೆ.

ಪ್ರಕಾಶನ ಕಾರ್ಯದಲ್ಲಿ ಕೈಗೂಡಿಸಿದ ಮಿತ್ರರೆಲ್ಲರಿಗೂ ನಮ್ಮ ಹಾರ್ದಿಕ ವಂದನೆಗಳು.

**—ಶ್ರೀ ವಾಣಿ ಪ್ರಕಾಶನ.**

— ಮನ್ಮಥ —
ವಸಂತ ಚತುರ್ದಶಿ.

# — ಪ್ರಸ್ತಾವನೆ —

ಪುರಾತನ ಪರ್ಷಿಯಾ ದೇಶದ "ಭಾಗ್–ಓ–ಬಹಾರ್" ಮೂಲದಿಂದ ಸಂಗ್ರಹಿಸಿ ಸೂಕ್ತ ಮಾರ್ಪಾಡುಗಳೊಂದಿಗೆ ಅಚ್ಚಿಗೆ ಸಿದ್ಧಗೊಳಿಸಿದ ಕಥೆಯಿದು. ಎಷ್ಟೋ ಸಹಸ್ರವರ್ಷಗಳ ಮುನ್ನ ಆ ದೇಶದ ಆಚಾರ–ವ್ಯವಹಾರ, ನಡೆನುಡಿ, ಸಂಪತ್ತು–ಸಮೃದ್ಧಿ, ಇತ್ಯಾದಿ ವಿಷಯಗಳ ಸೂಕ್ಷ್ಮ ಪರಿಚಯವನ್ನು ಪಡೆಯಲು ಕನ್ನಡಿಗರ ಕೈಗನ್ನಡಿಯಾಗಿರಲೆಂದೆಣಿಸಿ ಈ ಕಥೆಯನ್ನು ಪ್ರಕಟಣಗೊಳಿಸಲಾಯಿತು. ಹದಿನಾರು ವರ್ಷಗಳ ಹಿಂದೆ ನಾನು ಬೆಜವಾಡದಲ್ಲಿ ಹದಿನೈದು ದಿವಸಗಳು ತಂಗಿದ್ದ ಕಾಲದಲ್ಲಿ ನನ್ನ ಮಾನ್ಯ ಮಿತ್ರರಾದ ಅಜೀಜ್–ಉಲ್ಲಾ–ಖಾನರು ಉರುದುವಿನಿಂದ ತೆಲುಗು ಭಾಷೆಯಲ್ಲಿ ಭಾಷಾಂತರಮಾಡಿ ಹೇಳಿದ ಕಥೆಯೇ ಪ್ರಕೃತ ಚಿತ್ರದ ಹೊರ ಆವರಣ. ಅದರೊಳಗೆ ಆಗಿಂದಾಗ್ಗೆ ಹೊಳೆದ ಅನೇಕಾನೇಕ ಹೊಸ ಸಮಂಜಸ ವಿಷಯಗಳನ್ನು ನಾನು ತುಂಬಿದ್ದೇನೆ. ವಾಚಕ ಮಹಾಶಯರು ಇದರೊಳಗಿನ ರಸವನ್ನು ಸವಿದು ಸಂತೃಪ್ತಿಹೊಂದಿದಲ್ಲಿ ಕೃತಿರಚನೆಯ ಶ್ರಮ ವ್ಯಯಗಳು ಸಾರ್ಥಕವಾದಂತೆಯೇ ನನ್ನ ಎಣಿಕೆ.

ಈ ಗ್ರಂಥವನ್ನು ಪ್ರಕಾಶಗೊಳಿಸಿದ ಶ್ರೀ ವಾಣಿ ಪ್ರಕಾಶನದಲ್ಲಿನ ತರುಣ ಉತ್ಸಾಹಿಗಳಿಗೂ ಮತ್ತು ಅಂದವಾಗಿ ಮುದ್ರಿಸಿದ ಕಲಾನಿಧಿ ಮುದ್ರಣಾಲಯದವರಿಗೂ ನನ್ನ ವಂದನೆಗಳು ಸಲ್ಲತಕ್ಕವು.

ಇತಿ ತಮ್ಮ ಸೇವಕ

**ಬಿ. ಎಸ್. ರಾಮಸ್ವಾಮಿ ಐಯ್ಯಂಗಾರ್.**

# ೧

ಇಸ್ತಾನ್‌ಬುಲ್ ಅರೇಬಿಯಾದಲ್ಲಿ ರೂಮ್‌ದೇಶದ ರಾಜಧಾನಿ. ಆಜಾದ್ ಭಕ್ತನೇ ರೂಮ್‌ದೇಶದ ಸುಲ್ತಾನ. ಆಗ ಅವನಿಗೆ ನಲವತ್ತಕ್ಕೆ ಮೇಲೆ ವಯಸ್ಸಾಗಿದೆ. ಅಜಾದನು ಸಿಂಹಾಸನಕ್ಕೆ ಬಂದ ದಿನದಿಂದ ಇಂದಿನವರೆಗೆ ಅವನು ಸಕಲತೆರನಾದ ಸತ್ಕಾರ್ಯಗಳಲ್ಲಿಯೂ ನಿರತನಾಗಿದ್ದನು. ಪ್ರಜೆಗಳ ಕ್ಷೇಮವೇ ಅವನ ಸಂತೋಷ ಸಮಾಧಾನಗಳೇ–ಆಜಾದನ ಮಹದಾಶಯವಾಗಿದ್ದಿತು. ಇಂತಹ ಪ್ರಭುವು ತನ್ನ ಪ್ರಜೆಗಳ ಪ್ರೀತ್ಯಾದರ ಗೌರವಗಳಿಗೆ ಅತಿಶಯ ಪ್ರಮಾಣದಲ್ಲಿ ಪಾತ್ರನಾಗಿ ಇದ್ದುದೇನಾಶ್ಚರ್ಯ! ಆಜಾದನ ನ್ಯಾಯಸಮ್ಮತ—ಧರ್ಮಸಂಯುಕ್ತ ಆಳ್ವಿಕೆಯಲ್ಲಿ ಜನರೆಲ್ಲ ತುಂಬಿದ ಆನಂದದಿಂದ ಬಾಳನ್ನು ಸಾಗಿಸುತ್ತಿದ್ದರು. "ಆಜಾದ್ ಭಕ್ತನ ಆಳ್ವಿಕೆಯ ಕಾಲದಲ್ಲಿ ರೈತರು, ತೃಪ್ತರಾಗಿದ್ದರು; ರಾಜ್ಯದ ಕೋಶವು ಧನಸಮೃದ್ಧಿಯಿಂದ ತುಂಬಿದ್ದಿತು. ಸೈನಿಕರು ಸಂತುಷ್ಟರಾಗಿದ್ದರು. ಬಡವರು ಅಂದಂದಿನ ಜೀವನಕ್ಕೆ ಬಾಡಿಬಳಲದೆ ನೆಮ್ಮದಿಯಿಂದ ಕಾಲ ದೂಡುತ್ತಿದ್ದರು ; ಕಳ್ಳರು, ಕೊಲೆಪಾತಕರು, ಕೃತ್ರಿಮಿಗಳು, ಕೊಳ್ಳೆಗಾರರು, ಕಪಟಿಗಳು, ದ್ರೋಹಿಗಳು, ಪುಂಡರು, ಮುಂತಾದ್ದೆಲ್ಲ ದುರಾಚಾರಿಗಳನ್ನು ದಯಾದಾಕ್ಷಿಣ್ಯಗಳಿಲ್ಲದೆ ದೊರೆಯು ತನ್ನ ರಾಜ್ಯದಿಂದ ಹೊಡೆದಟ್ಟಿಸಿದ್ದನು. ಸುಳ್ಳಾಡಿಗರು—ಸುಲಿಗೆಗಾರರು, ಸೋಮಾರಿಗಳು ಇವರನ್ನೂ ರಾಜ್ಯಭ್ರಷ್ಟರನ್ನಾಗಿಮಾಡಿ ಸನ್ನಡತೆಯುಳ್ಳ ಪ್ರಜೆಗಳಿಗೆ ಸಂಕಟಕರವಾಗಿ ಪರಿಣಮಿಸಬಲ್ಲ ಎಲ್ಲ ಕಂಟಕಗಳನ್ನೂ ಕಂಡಕಂಡಕಡೆ ಕಿತ್ತೊಗೆಯುತ್ತಿದ್ದನು : ಇಂತಹ ಪರಿಷ್ಕರಣಕಾರ್ಯದಿಂದ ರೂಮ್ ರಾಷ್ಟ್ರವು ಭಯ ಭೀತಿಗಳಿಂದ ಬಿಡುಗಡೆ ಹೊಂದಿ ಎಲ್ಲೆಲ್ಲೂ ಸುಖಶಾಂತಿ ಕ್ಷೇಮ ಸಮಾಧಾನಗಳು ನಲಿಯತೊಡಗಿದುವು. ರಾಜ್ಯದಲ್ಲಿ ಸರ್ವಪ್ರಕಾರದ ಸುಭಿಕ್ಷವು ತಲೆದೋರಿತು. ಕಳ್ಳಕಾಕರರ ಭಯವನ್ನು ತೊಡೆದು ಹಾಕಿದುದರಿಂದ ಹಗಲಿರುಳೂ ಮನೆಬಾಗಿಲನ್ನು

ತೆರೆದು ಹಾಕಿ—ಪ್ರಜೆಗಳು ನೆಮ್ಮದಿಯಿಂದಿರುತ್ತಿದ್ದರು. ಅಂಗಡಿ ಬಾಗಿಲುಗಳನ್ನು ಸಹ ಮುಚ್ಚಿ ಬೀಗಹಾಕಿ ಭದ್ರಗೊಳಿಸಬೇಕಾದ ಅವಶ್ಯಕತೆ ಇರಲಿಲ್ಲ. ರೂಮ್ ರಾಷ್ಟ್ರದ ನೂರಾರು—ಸಾವಿರಾರು—ನಗರಗಳಲ್ಲಿ ತಲೆಯೆತ್ತಿ ತಾಂಡವವಾಡುತ್ತಿದ್ದ ಇಂತಹ ಸುಭದ್ರಸುಸ್ಥಿತಿಯನ್ನು—ಸುಖಶಾಂತಿ ಸೌಹಾರ್ದ ಸ್ವರೂಪವನ್ನು–ಕಂಡು ನೆರೆರಾಜರು ಆಜಾದ್‌ಭಕ್ತನನ್ನು ಬಹುವಾಗಿ ಅಭಿನಂದಿಸಿದರು."

ಆದರೆ ಇದಿಷ್ಟು ಸುಖಸಂತೋಷಗಳಿಂದ ಕೂಡಿದ್ದ ರಾಜ್ಯದಲ್ಲಿ, ಯಾವುದಕ್ಕೂ ಏನೂ ಕೊರತೆಯಿಲ್ಲದ ರಾಜನಿಗೆ ಮಾತ್ರ ಹಿರಿಯ ಚಿಂತೆಯೊಂದಿದ್ದಿತು. ಅದು ಯಾವುದು ?

"ನಲವತ್ತು ದಾಟಿದೆ; ನಾನು ಮುದಿತನದ ಬಾಳಲ್ಲಿ ಕಾಲಿಟ್ಟಂತೆ. ಇಷ್ಟಾದರೂ ಏನು ಪ್ರಯೋಜನ? ಸಕಲ ತೆರನಾದ ಸುಖ ಸೌಭಾಗ್ಯ ಸಂಪತ್ತುಗಳನ್ನು–ನನ್ನಲ್ಲಿ ಪರಮ ಪ್ರೀತಿಯಿಂದ ನಡೆದುಕೊಳ್ಳುವ ಪ್ರಜೆಗಳನ್ನು—ಅತಿಶಯ ಅನುರಾಗದಿಂದ ವರ್ತಿಸುವ ರಾಣಿಯರನ್ನು—ಅಂತನುರಿತ ಅಸಮ ರಾಜಕೀಯ ನಿಪುಣರಾದ ಪ್ರಧಾನಿ—ಪರಿವಾರವರ್ಗದವರನ್ನು—ಪ್ರೀತ್ಯಾದರ ಸೌಹಾರ್ದಗಳಿಂದ ಕೂಡಿದ ನೆರೆರಾಜರ ಸಹವಾಸವನ್ನು— ಅಳವಿಲ್ಲದ ಅಮೂಲ್ಯ ವಸ್ತ್ರಾಭರಣ ನಿಧಿನಿಕ್ಷೇಪವನ್ನು—ಕರುಣಿಸಿದ ಕರುಣಾಳು ಪರಮಾತ್ಮ! ನಿನ್ನ ಕೃಪೆಗಾಗಿ ನನ್ನ ಅನಂತ ವಂದನೆಗಳು. ಆದರೂ ನನ್ನ ರಾಜ್ಯಕ್ಕೆ ಉತ್ತರಾಧಿಕಾರಿಯಾಗಬಲ್ಲ ಒಂದು ಗಂಡು ಶಿಶು! ಕುಲವರ್ಧಕ, ಕೀರ್ತಿವರ್ಧಕ ಒಂದೇ ಒಂದು ಶಿಶುವನ್ನು ಕರುಣಿಸದೆ ಹೋದೆ. ದೇವ! ದಯೆಮಾಡಲಾರೆಯಾ? ನನ್ನ ಸಕಲ ಭೋಗಭಾಗ್ಯಗಳನ್ನೂ, ಕೊನೆಗೆ ಪ್ರಾಣವನ್ನಾದರೂ ಒಪ್ಪಿಸಬಲ್ಲೆ. ನಾನು ಜೀವಂತನಾಗಿರುವಾಗ ಪುತ್ರಸಂತಾನ ಭಾಗ್ಯವನ್ನು ಕರುಣಿಸಿ ಕಾಪಾಡು ದಯಾಳು! ನನ್ನ ಹೆಸರು ಮರೆತುಹೋಗದಂತೆ, ನನ್ನ ರಾಜ್ಯವು ಅನಾಯಕವಾಗದಂತೆ ನನಗೊಬ್ಬ ಪುತ್ರನನ್ನು ಕರುಣಿಸು ದಯಾಮಯಾ! ಅಲ್ಲಿಗೆ ನನ್ನ ಬಯಕೆಯು ಈಡೇರಿ ನನ್ನ ಕೊನೆಯ ದಿನಗಳನ್ನು ನಿನ್ನ ಮಹಿಮೆಯನ್ನು ಕೊಂಡಾಡುತ್ತ ಕಳೆಯುವೆನು ಪ್ರಭು!"

ಹೀಗೆಂದು ಸುಲ್ತಾನನು ಕರುಣಾಳು ಸೃಷ್ಟಿನಾಯಕನಲ್ಲಿ ಅನುದಿನವೂ ಪರಿಪರಿಯಾಗಿ ಮೊರೆಯಿಡುತ್ತ ಬಂದನು.

# ೨

ಕೆಲದಿನಗಳು ಪ್ರಾರ್ಥನೆಯಲ್ಲೇ ಕಳೆದುವು. ದಿನಗಳು ಉರುಳಿದಂತೆಲ್ಲ, ಸುಲ್ತಾನನ ಬಯಕೆಯು ತೀವ್ರಗೊಳ್ಳತೊಡಗಿತು. 'ನಾನು ಪಾಪಿ! ಆದುದರಿಂದಲೇ ನಾನು ಸಂತಾನ ಶೂನ್ಯನಾದೆ. ನನ್ನ ಹೃನ್ಮಂದಿರವನ್ನು ಆನಂದಗೊಳಿಸುವ ಶಿಶುವನ್ನು ಪಡೆದು ಎತ್ತಿಮುದ್ದಾಡುವ ಯೋಗವಿಲ್ಲದ ನಾನು ಮಂದಭಾಗ್ಯನೇ ಸರಿ. ವಿಸ್ತಾರವಾದ ಅಸದೃಶ ಅಧಿಕಾರ, ಅಪಾರವಾದ ಸಂಪತ್ತು, ಅತಿಶಯವಾದ ವೈಭವ, ಆದರಭರಿತ ಅರಸಿಯರು, ಮನಾಹ್ಲಾದಕರ ಉದ್ಯಾನವನಗಳು, ಜಗನ್ಮೋಹನ ಭವನಗಳು, ಜಾಜ್ವಲ್ಯಮಾನವಾದ ನವರತ್ನಖಚಿತ ಆಭರಣಗಳು, ಕಣ್ಣುಕುಕ್ಕುವ ವಸ್ತ್ರಭೂಷಣಗಳು, ಅಸದೃಶ ಅಸ್ತ್ರಶಸ್ತ್ರಗಳು, ಅಸಂಖ್ಯಾತ ಸೈನಿಕರು, ಅಗಣಿತ ದಿವ್ಯಾಶ್ವಗಳು, ಪ್ರಭುಚಿತ್ತವನ್ನರಿತು ವರ್ತಿಸುವ ಪ್ರಧಾನಿ ಪುರಜನರು, ಇವೆಲ್ಲವನ್ನೂ ಒಂದೆಡೆ ಇಟ್ಟು ಮತ್ತೊಂದೆಡೆ ಪುತ್ರಭಾಗ್ಯವನ್ನಿಟ್ಟು ತುಲನಮಾಡಿದರೆ....ಹಾಯ್! ಅದು ಕೈಗೂಡದ ಇಚ್ಛೆ! ನನ್ನದು ವ್ಯರ್ಥಾಲಾಪ! ನಾನು ಜಯಿಸಿದ ರಾಜ್ಯ! ಶೇಖರಿಸಿದ ಸಂಪತ್ತು! ಇವೆಲ್ಲವೂ ಪರಹಸ್ತಗತವಾಗುವಂತಾಯಿತು. ಆಗಲಿ; ನಾನು ಎಂದಾದರೊಂದು ದಿನ ಮರಣಕ್ಕೆ ಗುರಿಯಾಗತಕ್ಕವನೇ. ಅಂದು ನಾನು ಗಳಿಸಿ ಗುಡ್ಡೆಹಾಕಿದ್ದ ಸಕಲ ಸಂಪತ್ಸೌಭಾಗ್ಯಗಳನ್ನೂ ಬಿಟ್ಟು ನಡೆಯತಕ್ಕವನೇ ಅಲ್ಲವೇ? ಮರಣವು ಸ್ಥಿರವಾದುದು; ಜೀವಿಸಿರುವುದು ಅಸ್ಥಿರ. ಜೀವವಿದ್ದಾಗಲೆ ಜೀವದಾತನ ಸ್ಮರಣೆಯಲ್ಲಿ ಉದ್ಯುಕ್ತನಾಗುತ್ತೇನೆ. ಎಡೆಬಿಡದೆ ಒಡೆಯನಿಗೆ ವಂದನೆಗಳನ್ನು ಸಲ್ಲಿಸುತ್ತೇನೆ. ಮರಣಕಾಲ ಒದಗಿದಾಗ ನೆಮ್ಮದಿಯಿಂದ ಕಣ್ಣುಮುಚ್ಚಿಗೊಳ್ಳುವಂತಾಗಲಿ. ಸೃಷ್ಟಿಕರ್ತನ ಸೇವೆ! ಅಹುದು; ಅದೇ ನನಗೆ ಆದ್ಯಕರ್ತವ್ಯ! ಅದೇ ಸತ್ಯ! ಉಳಿದುದೆಲ್ಲ ಸುಳ್ಳಿನ ಕಂತೆ!'

ಸುಲ್ತಾನನು ಈ ತೆರನಾದ ನಿರ್ಧಾರಕ್ಕೆ ಬಂದ, ರಾಜ್ಯಾಡಳಿತದಲ್ಲಿ ಅವನಿಗೆ ವಿರಕ್ತಿಯುಂಟಾಯಿತು. ತನ್ನ ಪ್ರಧಾನಿಯನ್ನು ಕರೆದು ಹೇಳಿದ:

"ಪ್ರಧಾನಿ! ಇಂದಿನಿಂದ ನಾನು ದರ್ಬಾರಿಗೆ ಬರುವುದಿಲ್ಲ. ಅಧಿಕಾರ ನಿರ್ವಹಣೆಯಲ್ಲಿ ನೀನು ಪರಮ ಮೇಧಾವಿ. ರಾಜ್ಯಾಡಳಿತ ಸೂತ್ರಗಳನ್ನು ನಿನ್ನ ವಶಕ್ಕೆ ಒಪ್ಪಿಸಿರುವೆನು. ರಾಷ್ಟ್ರದ ನಾನಾಭಾಗಗಳಲ್ಲಿ ನಿನ್ನ ಅಧೀನದಲ್ಲಿರುವ ಎಲ್ಲಾ ಉನ್ನತ ಅಧಿಕಾರಿಗಳಿಗೂ ನಿರೂಪವನ್ನು ಕಳುಹಿಸಿಕೊಡು. ರಾಜಕಾರ್ಯ ನಿರ್ವಹಣಕ್ಕೆ ಇನ್ನುಮುಂದೆ ನೀನು ಹೊಣೆಯಾಗಿರತಕ್ಕದ್ದು. ಇದು ನನ್ನ ಆಜ್ಞೆ. ಸಕಲ ಅಧಿಕಾರಿಗಳಿಗೂ ಸೂಕ್ತರೀತಿಯಲ್ಲಿ ಸಲಹೆಯನ್ನು ಕೊಡುತ್ತಲಿರು. ನನ್ನ ಅಧಿಕಾರಕ್ಕೆ ಒಳಪಟ್ಟ ಪ್ರದೇಶದಲ್ಲಿ ಪ್ರಜೆಗಳ ಕ್ಷೇಮಸಮಾಧಾನಗಳು ಸಡಿಲವಾಗದಂತೆ ಎಚ್ಚರಿತ್ತು ನಡೆಯುವುದು ಪ್ರತಿಪ್ರಾಂತ್ಯಾಧಿಕಾರಿಯ ಹಗಲಮೇಲೆ ಹೊತ್ತ ಹಿರಿಯಭಾರ. ಯಾರೊಬ್ಬರೂ ತಂತಮ್ಮ ಅಧಿಕಾರ ನಿರ್ವಹಣೆಯಲ್ಲಿ ಎಳ್ಳಷ್ಟೂ ಲೋಪಬಾರದಂತೆ ನಡೆದುಕೊಳ್ಳತಕ್ಕದ್ದು ಎಂದು ಸ್ಪಷ್ಟಗೊಳಿಸು. ನಾನು ಇಂದಿನಿಂದ ರಾಜ್ಯಾಧಿಕಾರದಿಂದ ನಿವೃತ್ತನಾಗಿ, ಏಕಾಂತದಲ್ಲಿ ಶಾಂತತೆಯಿಂದ ಧ್ಯಾನಮೌನಾಸಕ್ತನಾಗಿರಬೇಕೆಂದು ನಿರ್ಧರಿಸಿರುವೆನು. ನನ್ನ ಸಂಕಲ್ಪಕ್ಕೆ ಯಾವ ತೆರನಾಗಿಯೂ ಭಂಗಬಾರದಂತೆ ನೋಡಿಕೊಳ್ಳುವುದು ನಿನ್ನ ಪವಿತ್ರ ಕರ್ತವ್ಯವೆಂದು ತಿಳಿ. ಇಂದಿನಿಂದ ಯಾರೂ ಯಾವಾಗಲೂ, ಯಾವ ಕಾರಣದಿಂದಲೂ, ನನ್ನ ದರ್ಶನಾಕಾಂಕ್ಷಿಗಳಾಗಿ ನನ್ನ ಪ್ರಾರ್ಥನೆಗೆ ಭಂಗ ತರಕೂಡದು. ತಿಳಿಯಿತೇ ಪ್ರಧಾನಿ?" ಎಂದನು.

ಸುಲ್ತಾನನ ಆಜ್ಞೆಯನ್ನು ಕೇಳಿ ಪ್ರಧಾನಿ ಚಿಂತಾಕ್ರಾಂತನಾದ. ಇದ್ದಕ್ಕಿದ್ದಂತೆ ಅರಸನ ಮನಸ್ಸಿಗೆ ಮುಸುಕಿದ ಈ ಅಪಾರ ಚಿಂತೆಯನ್ನು ಕುರಿತು ಯೋಚಿಸಿ ಅವನು ಕಂಗೆಟ್ಟ. ಅತಿಬುದ್ಧಿಕುಶಲನಾದ ಪ್ರಧಾನಿಗೂ ಏನೊಂದು ಕೇಳಲೂ ಹೇಳಲೂ ಸಾಧ್ಯವಿಲ್ಲದಂತಾಯಿತು. ಅವನು ತಗ್ಗಿಸಿದ ತಲೆಯನ್ನು ಮೇಲೆತ್ತಲಿಲ್ಲ. ಅರಸನಲ್ಲಿ ಅವನಿಗೆ ಅಪಾರ ಗೌರವ. ಅವನ ಆಜ್ಞೆಗೆ ಪ್ರತಿ ನುಡಿಯಲು ಅವನಿಗೆ ಧೈರ್ಯವೆಲ್ಲಿಂದ ಬರಬೇಕು? 'ಪ್ರಭುಚಿತ್ತ ಪರಿಪಾಲಿಸಬೇಕಾದುದೇ ಸರಿ' ಎಂದ ಪ್ರಧಾನಿ.

## ೨

ಎರಡು ವರ್ಷಗಳು ಉರುಳಿದುವು. ಸುಲ್ತಾನನ ವಿರಕ್ತಿ ದಿನೇ ದಿನೇ ಹೆಚ್ಚುತ್ತ ಬಂದಿತು. ಅಂತೆಯೇ ಅವನಿಗೆ ರಾಜ್ಯಾಡಳಿತದಲ್ಲಿ ಆಸಕ್ತಿ ಕಡಿಮೆಯಾಯಿತು. ಇದರಿಂದಾಗಿ ದೇಶದ ನಾನಾಭಾಗದಲ್ಲಿ ಅನಾಯಕತ್ವವು ತಲೆಯೆತ್ತಿತು. ಇದನ್ನು ಕಂಡು ವಜೀರನು ವಿಚಾರ ವಾರಿಧಿಯಲ್ಲಿ ಮುಳುಗಿದ. ಕ್ಷಣಕಾಲ ತನ್ನಲ್ಲೇ ಯೋಚಿಸಿ ಸುಲ್ತಾನನ ಬಳಿಹೋಗಿ ಬಿನ್ನವಿಸಿಕೊಂಡ:

"ಖಾವಂದ್! ಅರಸರಿಗೆ ವಯಸ್ಸೇ ಪ್ರಧಾನವಲ್ಲ. ಈ ಲೋಕದಲ್ಲಿ ಅವರು ಖುದಾನ ಪ್ರತಿನಿಧಿಗಳು. ಕೀರ್ತಿ, ಗೌರವ, ಪ್ರತಿಷ್ಠೆ, ಐಶ್ವರ್ಯ, ಅಧಿಕಾರ, ಇತ್ಯಾದಿ ಪರಿಪೂರ್ಣಪ್ರಶಸ್ತ ಸೌಭಾಗ್ಯಗಳು ಎಲ್ಲರಿಗೂ ಪ್ರಾಪ್ತವಾಗತಕ್ಕವಲ್ಲ. ಪರಮಾತ್ಮನ ಅಪಾರ ಕರುಣೆಗೆ ಪಾತ್ರರಾದವರು ಮಾತ್ರ ಪ್ರಭುಗಳಾಗಿ ಜನ್ಮತಾಳಬಲ್ಲರು. ಅವರಲ್ಲಿಯೂ ತಾವು ಕಲ್ಯಾಣಗುಣಸಂಪನ್ನರು. ತಾವು ಈಶ್ವರನ ಮಹಿಮೆಯಲ್ಲಿ ನಂಬಿಕೆಯನ್ನು ಸಡಿಲಮಾಡಿಕೊಳ್ಳುವುದು ಅನುಚಿತ ಎಂಬುದೇ ನನ್ನ ಬಿನ್ನಹ. ಗುಲಾಮನ ನಾಲ್ಕುಮಾತುಗಳನ್ನು ಪ್ರಭುಗಳು ಸಾವಧಾನಚಿತ್ತದಿಂದ ಲಾಲಿಸಬೇಕೆಂಬುದೇ ನನ್ನ ಪ್ರಾರ್ಥನೆ. ದೇವರ ಕರುಣೆ, ದೇವರಶಕ್ತಿ ಇವುಗಳನ್ನು ಅರಿಯಬಲ್ಲ ಮಾನವನಾರು? ಹದಿನೆಂಟು ಸಹಸ್ರ ಜೀವರಾಶಿಗಳಿಗೆ ಜನ್ಮದಾತನಾದ ಜಗದೊಡೆಯ ತನ್ನ ಪವಿತ್ರ ಮುಖದಿಂದ ಒಂದು ಕಿರುಮಾತು ಉಚ್ಚರಿಸಿದರೆ ಸಾಕು—ಮಾನವಕೋಟಿಯು ಉದ್ಧಾರವಾದೀತು. ಇಂತಹ ಪರಮಕರುಣಾಳುವಿನ ಕೃಪಾಕಟಾಕ್ಷಪ್ರೇರಿತ ಸಂಕಲ್ಪವು ತಮಗೆ ಒಂದಲ್ಲ ನೂರುಮಕ್ಕಳನ್ನಾದರೂ ದಯಪಾಲಿಸಬಹುದು. ಹೀಗಿರುವಲ್ಲಿ ಪ್ರಭುಗಳು ನಿರಾಶೆಯನ್ನು ಇದೀಗಲೇ ತೊರೆದು ಬಿಡುವುದೊಳಿತು.

"ಜಗತ್ಕಾರಣನಿಗೆ ತಮ್ಮ ದೀನವಾದ ಮೊರೆಯು ಕೇಳಿಸಲಿಲ್ಲವೆಂದು ತಾವು ಹೇಗೆ ನಿರೂಪಿಸಬಲ್ಲಿರಿ? ಈ ಸಂತಾಪವನ್ನು ಮರೆತು ತಮ್ಮ ಹೆಗಲಮೇಲೆ

ಹೊತ್ತ ಪ್ರಜಾರಕ್ಷಣ ಕರ್ತವ್ಯದಕಡೆ ತಮ್ಮ ಗಮನವನ್ನು ಸಲ್ಲಿಸುವುದವಶ್ಯ. ತಾವು ವಿರಕ್ತರಾದರೆ ತಮ್ಮ ಪ್ರಜೆಗಳ ಗತಿಯೇನು? ತಮ್ಮ ಅಭಯಹಸ್ತದ ಪ್ರಭಾವದಿಂದ ಇದುವರೆಗೂ ನೆಮ್ಮದಿಯಾಗಿ ಬಾಳನ್ನು ಸಾಗಿಸುತ್ತಿದ್ದ ಪ್ರಜೆಗಳು ಎಷ್ಟು ಪ್ರಾಂತ್ಯಗಳಲ್ಲಿ ಎಂತೆಂತಹ ಕಷ್ಟನಷ್ಟಗಳಿಗೆ ಗುರಿಯಾಗಿ ನೊಂದು ನರಳುತ್ತಿರುವರು? ಸಿಂಹಸ್ವರೂಪರಾದ ತಾವು ಕ್ಷಣಕಾಲ ಅನ್ಯಮನಸ್ಕರಾಗಿರುವಾಗ ಎಷ್ಟೊಂದು ನರಿಗಳು ಪ್ರಾಂತ್ಯಗಳನ್ನು ಸದ್ದಿಲ್ಲದೆ ಹೊಕ್ಕು ಅವುಗಳ ಸರ್ವನಾಶಕ್ಕೆ ಕಾರಣವಾಗಿವೆ ಬಲ್ಲಿರಾ? ತಮ್ಮ ಹಿರಿಯರೂ ತಾವೂ ಇವಕ್ಕಾಗಿಯೇನೇ ತಮ್ಮ ತನುಮನಧನಗಳಿಂದ ಈ ಸಾಂರಾಜ್ಯವನ್ನು ಸ್ಥಾಪಿಸಿ ಅಭಿವೃದ್ಧಿಹೊಂದಿಸಿದ್ದು? ತಮ್ಮ ಅಮೋಘ ಸಂಕಲ್ಪಕ್ಕೆ ಅನುಸಾರವಾಗಿ ಪ್ರಜಾರಕ್ಷಣಶಿಕ್ಷಣ ಕರ್ತವ್ಯಭಾರವನ್ನು ತಮ್ಮ ಹೆಗಲಮೇಲೆ ಹೊರಿಸಿದ ಪರಮಾತ್ಮನಿಗೆ ತಾವಾದರೂ ಈ ಸಾಂರಾಜ್ಯದಾದ್ಯಂತ ಉಳ್ಳ ಪ್ರಜೆಗಳ ಆಗು ಹೋಗುಗಳ—ನೋವು ನುಡಿಗಳ—ಸುಖದುಃಖಗಳ ವಿಚಾರವಾಗಿ ಕಾಲಾನುಕಾಲವಲ್ಲಿ ವರದಿ ಒಪ್ಪಿಸದಿರಲು ಸಾಧ್ಯವಾದೀತೇ? ಇಂತಹ ಕರ್ತವ್ಯನಿಷ್ಠೆಯನ್ನು ಒದರಿಬಿಡಲು ಸಹಜವೇ? ಸಮಂಜಸವೇ? ಸಾಧ್ಯವೇ? ಕೇವಲ ಭಕ್ತಿ ಧ್ಯಾನ ಮೌನಗಳೇ ಇಂತಹ ಕಠಿಣ ಪ್ರಶ್ನೆಗಳಿಗೆ ಉತ್ತರಕೊಟ್ಟು ದೇವೇಶನನ್ನು ಸಮಾಧಾನಗೊಳಿಸಲಾರವು ಎಂಬುದು ನನ್ನ ಅರಿಕೆ. ಸರ್ವಸಂಗ ಪರಿತ್ಯಾಗಮಾಡಿ, ಮನೆಮಠಗಳನ್ನು ತೊರೆದು ಪದವಿ ಐಶ್ವರ್ಯ ಅಧಿಕಾರಗಳನ್ನು ಕಡೆಗೊತ್ತಿ, ಅಡವಿಗಳಲ್ಲಿ ಸಂಚರಿಸಿ, ಗೆಡ್ಡೆಗೆಣಸುಗಳನ್ನು ತಿಂದು, ಯಾವುದಕ್ಕೂ ಹೆದರದೆ ನಿರ್ಭೀತರಾಗಿ, ದೈವಧ್ಯಾನದಲ್ಲಿ ಆಸಕ್ತರಾಗಿರುವುದು ಸಾಧುಸಂತರಿಗೆ ಒಪ್ಪತಕ್ಕ ನಡತೆ—ಅದು ರಾಜರಿಗೆ ತಕ್ಕುದೆನಿಸದು. ಅಷ್ಟಕ್ಕೂ ಸೃಷ್ಟಿಕರ್ತನನ್ನು ಸ್ಮರಿಸುವುದಕ್ಕೆ ಏಕಾಂತವಾಸವೇ ಆಗಬೇಕೆಂದಿಲ್ಲ. ಕಾಡುಗುಡ್ಡಗಳಲ್ಲೇ ವಾಸಮಾಡಬೇಕೆಂದಿಲ್ಲ. ಯಾರು ಯಾವ ಸಮಯದಲ್ಲಿ ಬೇಕಾದರೂ ಅವರವರು ಇದ್ದಲ್ಲೆ ಭಗವಂತನನ್ನು ಸ್ಮರಿಸಬಹುದು. ಅಷ್ಟೇಕೆ? ಅವರವರಿಗೆ ಭಗವಂತನಿಂದ ವಿದಿತವಾದ ಕರ್ತವ್ಯವನ್ನು ನೆರವೇರಿಸಬೇಕಾದುದು ಪ್ರತಿಯೊಬ್ಬ ಮಾನವನ ಕರ್ತವ್ಯ. ರಾಜನಾಗಲಿ—ರಾಯಭಾರಿಯಾಗಲಿ; ಶಿಲ್ಪಿಯಾಗಲಿ—ಚಿಪ್ಪಿಗನಾಗಲಿ; ಕಮ್ಮಾರನಾಗಲಿ—ಕಾವಲುಗಾರನಾಗಲಿ; ಪ್ರಭುವಾಗಲಿ—ಕಿಂಕರನಾಗಲಿ; ಅಧಿಕಾರಿ

ಯಾಗಲಿ—ಅಧೀನನಾಗಲಿ; ಬೆಸ್ತರವನಾಗಲಿ—ಬೋಯಿಯಾಗಲಿ; ಕಟುಕನಾಗಲಿ—ಕಲ್ಕುಟಿಗನಾಗಲಿ; ಗುರುವಾಗಲಿ—ಗೊಲ್ಲನಾಗಲಿ; ಪುರುಷನಾಗಲಿ–ಸ್ತ್ರೀಯಾಗಲಿ; ಆವರವರ ಸ್ಥಾನಕ್ಕೆ ಸಂಬಂಧಿಸಿದಂತೆ ಅವರವರಿಗೆ ನಿಯಮಿತವಾದ ಕರ್ತವ್ಯಗಳನ್ನು ಸಮರ್ಪಕರೀತಿಯಲ್ಲಿ ನೆರವೇರಿಸಲೇ ಬೇಕು. ಇಲ್ಲದಿದ್ದರೆ ಸೃಷ್ಟಿಕರ್ತನಿಗೆ ದ್ರೋಹಮಾಡಿದಂತಾಗುತ್ತದೆ. ಆಗ ಅವನ ದಯೆಯು ನಮ್ಮಿಂದ ದೂರವಾಗುತ್ತದೆ. ಅಷ್ಟಕ್ಕೆ ನಿಲ್ಲದೆ ಕರ್ತವ್ಯಲೋಪದಿಂದ ಅವನ ಕೋಪಕ್ಕೆ ಪಾತ್ರರಾಗಿ ಶಿಕ್ಷೆಯನ್ನೂ ಅನುಭವಿಸಬೇಕಾದೀತು. ಪ್ರಭು! ನನ್ನ ಅಲ್ಪಮತಿಗೆ ಹೊಳೆದಷ್ಟು ಅರಿಕೆಮಾಡಿಕೊಂಡಿದ್ದೇನೆ. ಇದರಮೇಲೆ ತಮ್ಮ ಚಿತ್ತ. ಎಷ್ಟಾದರೂ ನಾನು ತಮ್ಮ ಸೇವಕನೇ ಅಲ್ಲವೇ?"

ವಜೀರನ ಮಾತುಗಳು ಒಂದೊಂದೂ ಸುಲ್ತಾನನ ಅಂತರಂಗವನ್ನು ಪ್ರವೇಶಮಾಡಿದುವು. ಅಲ್ಲೊಂದು ತರಂಗಸಮುದಾಯವನ್ನು ಹೊಡೆದೆಬ್ಬಿಸಿದುವು. ವಿಚಾರ ಪ್ರವಾಹದಲ್ಲಿ ಕ್ಷಣಕಾಲ ಮುಳುಗಿದ್ದು ಬಳಿಕ ಸುಲ್ತಾನನು ವಜೀರನನ್ನು ಕುರಿತು ಹೇಳಿದ—

"ವಜೀರ! ನಿನ್ನ ಮಾತುಗಳು ಧರ್ಮಸಮ್ಮತವಾದುವು. ಮಾನವರ ಆದ್ಯಕರ್ತವ್ಯಗಳನ್ನು ಕುರಿತು ನೀನು ಪ್ರಸ್ತಾಪಿಸಿದ ಒಂದೊಂದು ಮಾತೂ, ದೈವ ಮಹಿಮೆಯನ್ನು ಕುರಿತು ನೀನು ಉದ್ಘೋಷಿಸಿದ ಸತ್ಯ ತತ್ತ್ವಗಳೂ ಅತ್ಯಂತ ವಿಹಿತವಾದುವು. ಇರಲಿ; ನಿನ್ನ ಮಾತಿನಿಂದ ನನಗೆ ಆನಂದ ಉಂಟಾಯಿತೇ ಹೊರತು ಆಕ್ರೋಶವಿಲ್ಲ. ಸೃಷ್ಟಿಕರ್ತನೇ ನನ್ನೆದುರಿಗೆ ನಿಂತು ಪ್ರಕೃತವಿಷಯಗಳನ್ನು ಪ್ರಸ್ತಾಪಿಸಿದರೆ. ಬೇರೆತೆರನಾಗಿ ಹೇಳುತ್ತಿರಲಿಲ್ಲ. ಈಗ ರಾಜ್ಯಾಡಳಿತ ವಿಚಾರದಲ್ಲಿ ನೀನು ಸೂಚಿಸಬೇಕೆಂದಿರುವ ಸಲಹೆಗಳೇನು ವಜೀರ?"

"ಪ್ರಭುಗಳ ಚಿತ್ತಕ್ಕೆ ವೇದ್ಯವಾಗಲಿ! ಹಗಲುವೇಳೆಯಲ್ಲಿ ತಾವು ರಾಜ್ಯಭಾರ ಕ್ರಮದಲ್ಲಿ ಆಸಕ್ತರಾಗಿರಬಹುದು. ಅತಿ ಮುಖ್ಯ ರಾಜಕಾರಣ ವಿಷಯಗಳನ್ನು ನಿರ್ಧರಿಸಬಹುದು. ದೀನದಲಿತರ ಮನವಿಗಳನ್ನು ಸ್ವೀಕರಿಸಿ ಅವರ

ಕಷ್ಟನಷ್ಟಗಳನ್ನು ಪರಿಹರಿಸಬಹುದು. ರಾತ್ರಿಕಾಲದಲ್ಲಿ ತಮ್ಮ ಮನಸ್ಸು ಒಪ್ಪು ವಷ್ಟು ಬಗೆಯಲ್ಲಿ ಸೃಷ್ಟಿಕರ್ತನಿಗೆ ಪ್ರಾರ್ಥನೆಯನ್ನು ಸಲ್ಲಿಸಬಹುದು. ಅವಕಾಶ ವಿದ್ದಂತೆಲ್ಲ ಸಾಧು ಫಕೀರರೊಂದಿಗೆ ಬೆರೆತು ಪಾರಮಾರ್ಥಿಕ ವಿಚಾರಗಳ ಕುರಿತು ಪ್ರಸ್ತಾಪಿಸಬಹುದು. ಇದರಿಂದ ಪ್ರಜಾಹಿತವೂ, ಪಾರಮಾರ್ಥಿಕ ಧ್ಯೇಯವೂ, ಒಂದೊಕ್ಕೊಂದು ವಿರೋಧವಾಗದೆ ಎರಡೂ ಸಮರ್ಪಕವಾಗಿ ಸಾಧಿಸಲ್ಪಡ ಬಹುದು. ಅಲ್ಲದೆ ಪುತ್ರಫಲಪ್ರಾಪ್ತಿಗಾಗಿ ತಾವು ಇಷ್ಟೊಂದು ಕಾತುರಗೊಂಡಿರು ವುದರಿಂದ ಅನುದಿನವೂ, ಅನಾಥರಿಗೆ, ಬಂಧಿತರಿಗೆ, ಬಹುಕುಟುಂಬಿಗಳಿಗೆ ಆಶ್ರಯರಹಿತ ಅಬಲೆಯರಿಗೆ, ದೀನದಲಿತರಿಗೆ, ಸದಯ ದೃಷ್ಟಿಯಿಂದ ಸಹಾಯ ವನ್ನು ಅನುಗ್ರಹಿಸುತ್ತಬಂದಲ್ಲಿ ಸೃಷ್ಟಿಕರ್ತನು ತಮ್ಮನ್ನು ಅನುಗ್ರಹಿಸಿ ಪುತ್ರಭಾಗ್ಯವನ್ನು ಕರುಣಿಸಿಯಾನು."

ಆಗ ಸುಲ್ತಾನನು "ವಜೀರ! ನಿನ್ನ ಮಾತುಗಳು ಅನುಭವಯುಕ್ತ ವಾದುವು; ಅಭಿನಂದನೀಯವಾದುವು. ಅದುದರಿಂದ ನಾನವುಗಳನ್ನು ಅಂಗೀ ಕರಿಸುತ್ತೇನೆ" ಎಂದ:

ತನ್ನ ಪ್ರಭುವಿನ ಈ ಮಾತನ್ನು ಕೇಳಿ ವಜೀರನಿಗಾದ ಆನಂದಾತಿಶಯವು ವರ್ಣನಾತೀತವಾದುದು ; ಅವನೆಂದ.

"ಇಂತಹ ಪ್ರಭುಗಳ ಸೇವೆ ನನಗೆ ಲಭಿಸಿದ್ದು ನನ್ನ ಪುಣ್ಯ."

"ಒಳ್ಳೆಯದು ವಜೀರ! ನಾಳೆಯಿಂದ ನಾನು ಪ್ರಾತಃಕಾಲ ದರ್ಬಾರು ನಡೆಸುತ್ತೇನೆ. ಮಧ್ಯಾಹ್ನ ಕಾಲವನ್ನು ಸದ್ಗ್ರಂಥಗಳ ಪಠಣೆ ಮತ್ತು ಪ್ರಾರ್ಥನೆ ಗಾಗಿ ಮೀಸಲಾಗಿರಿಸುತ್ತೇನೆ. ರಾತ್ರಿಕಾಲ ಸಾಧು ಫಕೀರರೊಂದಿಗೆ ಪಾರ ಮಾರ್ಥಿಕ ವಿಚಾರಗಳ ವಿಮರ್ಶೆಗಾಗಿ ಶ್ರಮಿಸುತ್ತೇನೆ. ಇನ್ನು ಮುಂದೆ ಇದೇ ನನ್ನ ಕಾರ್ಯಕ್ರಮ. ಹಾಗೆಂದು ನೀನು ಎಲ್ಲರಿಗೂ ತಿಳುಹಿಸಬಹುದು."

"ಪ್ರಭುಗಳಿಗೆ ಮಂಗಳವಾಗಲಿ!" ಎನ್ನುತ್ತ ವಜೀರನು ಸುಲ್ತಾನನಿಂದ ಬೀಳ್ಕೊಂಡನು.

## ೪

ಪ್ರಾಜ್ಞನಾದ ಪ್ರಧಾನಿ ಪ್ರಭುವಿನ ಬಳಿ ನಡೆಸಿದ ತನ್ನ ಪ್ರಯತ್ನದಲ್ಲಿ ಫಲಸಿದ್ಧಿ ಪಡೆದುದನ್ನು ಕೇಳಿ ರಾಷ್ಟ್ರದ ಉನ್ನತಾಧಿಕಾರಿಗಳು ಪರಮಾನಂದ ಭರಿತರಾದರು. ಮರುದಿನವೇ ವಜೀರನಿಗೆ ತಾನಿತ್ತ ವಚನಕ್ಕನುಸಾರವಾಗಿ ಸುಲ್ತಾನ ಆಜಾದಭಕ್ತನು ನೆರೆದ ಸಭೆಗೆ ಆಗಮಿಸಿ ಸಭಿಕರ ಉತ್ಸಾಹಭರಿತ ಕೋಲಾಹಲವನ್ನು ಕಂಡು ಸಂತುಷ್ಟನಾದನು. ಸಿಂಹಾಸನವಲ್ಲಿ ಮಂಡಿಸಿ, ಬಡಬಗ್ಗರ–ನೊಂದು ನರಳಿದವರ–ವಿಚಾರವನ್ನು ಪರಿಶೀಲಿಸಿ, ಪರಿಹಾರಗಳನ್ನು ಕೊಟ್ಟು, ಪ್ರಜೆಗಳನೇಕರನ್ನು ಸಂತೋಷಗೊಳಿಸಿದನು. ಅದುವರೆಗೆ, ಎಂದರೆ ತನ್ನ ಧ್ಯಾನಮೌನಕಾಲದಲ್ಲಿ, ರಾಜ್ಯದಲ್ಲಿ ಅನಾಯಕತ್ವದ ವಿಷಬೀಜಗಳನ್ನು ಚೆಲ್ಲಿದ ದ್ರೋಹಿಗಳಿಗೆ ದಂಡನೆಯನ್ನು ವಿಧಿಸಿದನು. ಮರುದಿನವೂ ಅದರ ನಂತರವೂ ದಿನಂಪ್ರತಿ ಪ್ರಾತಃಕಾಲ ಅನೇಕ ತಿಂಗಳುಗಳು ದರ್ಬಾರ್ ನಡೆಸಿ ಸುಲ್ತಾನನು ಸಡಿಲವಾಗಿದ್ದ ಪ್ರಭುತ್ವವನ್ನು ಸುಭದ್ರಗೊಳಿಸುತ್ತ ಬಂದನು. ಕಳ್ಳಕಾಕರರನ್ನು, ಕೊಲೆಗಾರರನ್ನು, ದೊಂಬಿಕೋರರನ್ನು, ದಂಗೆಕಾರರನ್ನು, ಸುಲಿಗೆಗಾರರನ್ನು, ಅವಿಶ್ವಾಸದಿಂದ ಅಸಂತುಷ್ಟಿಯನ್ನು ಹುಟ್ಟಿಸಿದ ಆಶ್ರಿತರಾಜರನ್ನು ಒಬ್ಬೊಬ್ಬರನ್ನೂ ಸೆರೆಹಿಡಿಸಿ ಅವರವರ ಅಪರಾಧಕ್ಕೆ ತಕ್ಕಂತೆ ಶಿಕ್ಷೆಗಳನ್ನು ವಿಧಿಸಿದನು. ಕಲಹಗಳಿಂದಲೂ ಕ್ರಾಂತಿಗಳಿಂದಲೂ ಉಂಟಾದ ಚರಸ್ಥಿರ ಸ್ವತ್ತುಗಳ ನಷ್ಟವನ್ನು ಸರಿಹೊಂದಿಸಲು ತನ್ನ ಸ್ವಂತ ಭಂಡಾರವನ್ನು ತೆರೆದಿಟ್ಟನು. ಕ್ಷಾಮಪೀಡಿತ ಪ್ರದೇಶಗಳುಳ್ಳ ಪ್ರಜೆಗಳಿಗೆ ಸಾಕಷ್ಟು ದವಸಧಾನ್ಯಗಳು ಮುಟ್ಟುವಂತೆ ವ್ಯವಸ್ಥೆಗೊಳಿಸಿದನು. ತನ್ನ ಸ್ವಂತ ಬೊಕ್ಕಸದಿಂದ ಹಣವನ್ನು ನೀರಿನಂತೆ ವ್ಯಯಮಾಡಿ ಸಂದಾಯವಾಗದೆ ನಿಂತಿದ್ದ ಸೈನಿಕರ ಮತ್ತು ತದಿತರ ಅಧಿಕಾರಿಗಳ ಸಂಬಳಗಳನ್ನು ಸಲ್ಲಿಸಿ ಎಲ್ಲರ ತೃಪ್ತಿಸಮಾಧಾನಗಳಿಗೆ ಪಾತ್ರನಾದನು. ಕೆಲವಾರು ವೇಳೆ ತಾನೇ ಅಶ್ವಾರೂಢನಾಗಿ ಸೈನ್ಯದ ಮುಂಭಾಗದಲ್ಲಿ ತೆರಳಿ ಅಕ್ರಮಣ

ಕಾರರಾದ ಶತ್ರುಗಳನ್ನು ಹಿಮ್ಮೆಟ್ಟಿ ರಾಜ್ಯದಲ್ಲೆಲ್ಲ ಸುಖಶಾಂತಿ ಕ್ಷೇಮಸಮಾಧಾನ ಗಳನ್ನು ನೆಲೆಗೊಳಿಸಿದನು. ಅತಿಕ್ಷಿಪ್ರದಲ್ಲಿಯೇ ರೂಮ್ ರಾಜ್ಯವು ಎಂದಿನಂತೆ ಸಮೃದ್ಧಿ ಸಂತೋಷಗಳಿಂದ ನಲಿದಾಡಿತು.

ಹೀಗಿರುವಲ್ಲಿ ಸುಲ್ತಾನನು ವಜೀರನ ಸಲಹೆಯಂತೆ ಪೂರ್ವಾಹ್ನದಲ್ಲಿ ರಾಜ್ಯಭಾರ ಕ್ರಮಗಳಲ್ಲಿ ಆಸಕ್ತಿಯುಳ್ಳವನಾದನು. ಮಧ್ಯಾಹ್ನ ಪ್ರಾರ್ಥನೆಯನ್ನು ನಡೆಸುತ್ತ ಮಧ್ಯೆ ಮಧ್ಯೆ ಉತ್ತಮ ಆತ್ಮಿಕಗ್ರಂಥಗಳನ್ನು ಪಠಿಸುತ್ತ ಬಂದನು. ರಾತ್ರಿವೇಳೆಯಲ್ಲಿ ಫಕೀರರೊಂದಿಗೆ ಆಧ್ಯಾತ್ಮಿಕ ವಿಚಾರಗಳನ್ನು ಪ್ರಸ್ತಾಪಿಸುತ್ತ ಇಹಪರಸಾಧಕ ಕಾರ್ಯಕ್ರಮಗಳನ್ನು ಕ್ರಮಬದ್ಧವಾಗಿ ರಚಿಸುತ್ತ ಬಂದನು. ಒಮ್ಮೆ ಸುಲ್ತಾನನು ಓದುತ್ತಿದ್ದ ಒಂದು ಮತಗ್ರಂಥದಲ್ಲಿ ಕೆಲವು ವಾಕ್ಯಗಳು ಅವನ ಚಿತ್ತವನ್ನು ಆಕರ್ಷಿಸಿದುವು—

"ಪ್ರತಿಯೊಬ್ಬ ಮಾನವನೂ ತನ್ನ ದೇಹ ಪೋಷಣೆಗಾಗಿ ಬೇಕಾದ ಅನ್ನ, ಬಟ್ಟೆ, ನಿದ್ರೆ, ವಿಶ್ರಾಂತಿ, ಇವುಗಳೊಂದಿಗೆ ಬೇಸರ ಕಳೆಯುವುದಕ್ಕೆ ಉಲ್ಲಾಸ ವಿಹಾರಗಳನ್ನು ಬಯಸುವಂತೆಯೇ—ಆತ್ಮಿಕ ಉದ್ಧಾರಕ್ಕೆ ಉತ್ತಮ ಆಧ್ಯಾತ್ಮಿಕ ಗ್ರಂಥಗಳನ್ನು ಪಠಿಸಬೇಕು. ಅದರಲ್ಲಿ ಅಡಕವಾದ ಪ್ರತಿಯೊಂದು ಮೂಲ ತತ್ತ್ವವನ್ನೂ ನಿಧಾನವಾಗಿ ವಿಮರ್ಶೆಮಾಡಿ ಮನನಮಾಡಿಕೊಳ್ಳಬೇಕು. ಬಾಳಕಡಲಲ್ಲಿ ಮುಳುಗಿ ತೇಲಿ, ನೊಂದು ನರಳುವ ಪ್ರತಿಯೊಬ್ಬ ಮಾನವನೂ ಸಾಧು ಸಂತರ ಸಹವಾಸಗಳನ್ನು ಪಡೆದು ತಮತಮಗಿರುವ ಸಂಕಟಗಳನ್ನು ಪರಿಹರಿಸಿಕೊಳ್ಳಬೇಕು. ವಿಷಯೇಂದ್ರಿಯ ಭೋಗಗಳನ್ನು ಸುಟ್ಟು ಭಸ್ಮಮಾಡಿ, ಮನೆಮಠಗಳನ್ನು ತೊರೆದು, ಪರಮಾತ್ಮನ ಕರುಣೆಗಾಗಿಯೇ ಹಾತೊರೆಯುತ್ತ ಊರೂರು ಸುತ್ತಿ ಭಿಕ್ಷೆಬೇಡಿ ದೇಹಧಾರಣೆ ಮಾಡುವ ಆತ್ಮಿಕ ಪ್ರವೃತ್ತಿಗಳಾದ ಫಕೀರರು ಪರಮಾತ್ಮನಲ್ಲಿ ಮೊರೆಯಿಟ್ಟು ನೊಂದವರ ನೋವನ್ನು ನಿವಾರಿಸಬಲ್ಲರು."

ಸುಲ್ತಾನನು ಯೋಚಿಸಿದ; ವಿಮರ್ಶೆಮಾಡಿದ :

"ಅಹುದು; ಸಕಲ ಸಂಪತ್ತಿನಿಂದ ಕೂಡಿದ ನನಗೆ ಸಂತಾನಸಂಪತ್ತು ಇಲ್ಲದಂತಾಗಿ ನನ್ನ ಮನಸ್ಸು ಸಂಕಟಕ್ಕೊಳಗಾಗಿದೆ. ನಾನು ಸಾಧುಸಂತರ

ಸಹವಾಸ ಮಾಡಬೇಕು. ಅವರ ಸಲಹೆಯನ್ನು ಪಡೆಯಬೇಕು. ನನಗಾಗಿ ಅವರು ಸೃಷ್ಟಿನಾಯಕನಲ್ಲಿ ಬೇಡಿಯಾರು. ನನ್ನ ಸಂಕಟವು ಬಗೆಹರಿದೀತು."

ಅಂದು ರಾತ್ರಿ ಅರಮನೆಯಲ್ಲೆಲ್ಲ ನಿಶ್ಶಬ್ದ. ಸುಲ್ತಾನನು ಯೋಚಿಸಿದ: ನಿಶಿರಾತ್ರಿಯಲ್ಲಿ ಗೋರಿಗಳಬಳಿ ಪ್ರಾರ್ಥನೆಯನ್ನು ಸಲ್ಲಿಸಲು ಫಕೀರರು ದೂರ ದೂರಗಳಿಂದ ಬರುವುದುಂಟು. ನಾನವರನ್ನು ಕಂಡು ಅವರ ಸಲಹೆಗಳನ್ನು ಪಡೆಯಬೇಕು.

"ಆದರೆ ಪರಿವಾರದವರನ್ನು ಜತೆಯಲ್ಲಿ ಕರೆದುಕೊಂಡು ಹೋದರೆ ಶಾಂತಿ ಭಂಗವಾಗಿ ಫಕೀರರು ಪರಾರಿಯಾದಾರು. ರಾಜಯೋಗ್ಯವಾದ ಅಸ್ತ್ರಶಸ್ತ್ರ ವಸ್ತ್ರಾಲಂಕಾರಭೂಷಿತನಾಗಿ ಹೋದರೆ ಫಕೀರರು ನನ್ನೊಡನೆ ಸರಸವಾಗಿ ಬೆರೆತು ತಮ್ಮ ಮನಸಿನಲ್ಲಿದ್ದದ್ದನ್ನು ಬಿಚ್ಚಿ ಹೇಳಲಾರರು. ಆದುದರಿಂದ ಹಳೆಯದಾದ, ಒರಟೊರಟಾದ, ಮಲಿನವಾದ ಚಿಂದಿಬಟ್ಟೆಯನ್ನು ತೊಟ್ಟು ನನ್ನ ವೇಷವನ್ನು ಮರೆಸಿಕೊಂಡು ಹೋಗಬೇಕು." ಹೀಗೆಂದು ಯೋಚಿಸುತ್ತಾ ಸುಲ್ತಾನನು ಮಲಿನವಸ್ತ್ರವನ್ನು ಧರಿಸಿ ಏಕಾಂಗಿಯಾಗಿ ಕಾಲುನಡಿಗೆಯಲ್ಲಿ ನಗರದಾಚೆಯಿರುವ ಗೋರಿಗಳ ಬಳಿ ಆ ನಿಶಿರಾತ್ರಿಯಲ್ಲಿ ಬಂದು ಸೇರಿದನು. ಯಾರ ದೃಷ್ಟಿಗೂ ಬೀಳಬಾರದೆಂದು ನಿರ್ಧರಿಸಿದ ಅವನು ಅಲ್ಲೊಂದು ಗೋರಿಯ ಬಳಿಯಲ್ಲಿ ಇದ್ದ ಒಂದು ಪೊದರ ಮರೆಯಲ್ಲಿ ತಲೆ ಮರೆಸಿಕೊಂಡಿದ್ದ.

ಸುಲ್ತಾನನೇನೂ ಹೆಚ್ಚುಕಾಲ ಕಾದಿರಬೇಕಾಗಿರಲಿಲ್ಲ.

ಗೋರಿಯಬಳಿ ಒಂದು ವಿಶಾಲವಾದ ಬಂಡೆ ಇದ್ದಿತು. ನಾಲ್ಕು ಜನ ಫಕೀರರು ಬಂದು ಆ ಬಂಡೆಯಮೇಲೆ ಕುಳಿತರು. ಇದ್ದಕ್ಕಿದ್ದಂತೆ ಬಂಡೆಯ ಮೇಲೆ ಮಿಂಚಿನಂತೆ ಮಿನುಗುವ ಪ್ರಕಾಶವೊಂದು ಹೊರ ಹೊಮ್ಮಿತು. ಸುಲ್ತಾನನು ಕಣ್ಣು ಬಿಟ್ಟು ನೋಡಿದ. ಅದೊಂದು ಅಪೂರ್ವವಾದ ದೀಪ ;ಅದರಜ್ಯೋತಿ ಆ ಸುತ್ತಿನಲ್ಲೆಲ್ಲ ಹರಡಿತು ; ಬಿರುಗಾಳಿ ಎದ್ದರೂ ಆರಿಹೋಗದ ದೀಪ ಅದು. ಅದನ್ನು ಕಂಡು ಸುಲ್ತಾನನು 'ಇದು ಸ್ವಚ್ಛಮಾನಸರ ಆತ್ಮಜ್ಯೋತಿ' ಎಂದುಕೊಂಡ. ಕ್ಷಣಕಾಲ ಕಳೆಯಿತು. ಫಕೀರರಲ್ಲಿ ಒಬ್ಬನು ಉಳಿದ ಮೂವರನ್ನು ಕುರಿತು ಮಾತನಾಡತೊಡಗಿದ—

"ಸಹೋದರ ಫಕೀರರೇ! ನನ್ನಂತೆಯೇ ನೀವೂ ಬಾಳಲ್ಲಿ ನೊಂದು ಬೆಂದವರು. ನಮಗಾದ ಆಶಾಭಂಗವು ಕ್ಷಿಪ್ರದಲ್ಲಿಯೇ ನಶಿಸಿ ನಮ್ಮ ಇಷ್ಟಾರ್ಥಗಳು ನೆರವೇರುವಂತೆ ಪರಮಾತ್ಮನು ಕರುಣಿಸಿಯಾನು. ನಾವೊಬ್ಬೊಬ್ಬರೂ ದೇಶದೇಶಾಂತರಗಳಲ್ಲಿ ಹುಚ್ಚರಂತೆ ಅಲೆದು, ವರ್ಷಾಂತರಗಳು ಭಿಕ್ಷೆಬೇಡಿ ಹೊಟ್ಟೆಹೊರೆದು, ಹೊರಲಾರದ ಸಂಕಟದ ಹೊರೆಯನ್ನು ಹೆಗಲಮೇಲೆ ಹೊತ್ತು, ದೈವಕೃಪೆಯಿಂದ ಮತ್ತೆ ಇಲ್ಲಿ ಸಂಧಿಸಿದ್ದೇವೆ. ಸರ್ವಶಕ್ತನಾದ ಸೃಷ್ಟಿನಾಯಕನು ನಮ್ಮ ನಮ್ಮ ಸಂಕಟಗಳನ್ನು ಪರಿಹರಿಸಿ ಕಾಪಾಡಲೆಂದು ಪ್ರಾರ್ಥಿಸೋಣ.

ಸುಲ್ತಾನನು ಫಕೀರರ ಮಾತನ್ನು ಕೇಳಿದ. ಏನು? ಸರ್ವಸಂಗ ಪರಿತ್ಯಾಗಿಗಳಾದ ಫಕೀರರಿಗೂ ಸಂಕಟವೇ? ವರ್ಷಾಂತರಗಳಿಂದ ಈಡೇರದ ಇವರ ಇಷ್ಟಾರ್ಥಗಳು ಧನಾಪೇಕ್ಷೆಯಿಂದ ಕೂಡಿರಬಹುದೇ? ಛೇ! ಫಕೀರರಿಗೇಕೆ ಧನ? ಇಲ್ಲ; ಅದೋ ದೀಪದಜ್ಯೋತಿಯಲ್ಲಿ ಅವರ ಮುಖಗಳು ಈಗ ಸ್ಪಷ್ಟವಾಗಿ ಕಾಣುತ್ತಿವೆ. ಇವರೇನೂ ಅಷ್ಟಾಗಿ ವಯಸ್ಸಾದವರಲ್ಲ. ಆದರೂ ಇವರ ಅಭೀಷ್ಟವೇನಿರಬಹುದು? ಅದೋ, ಅವರ ಮುಖಗಳಲ್ಲಿ ತೇಜಸ್ಸು ತುಂಬಿದೆ. ನಿಜ; ಇವರು ದೈವಜ್ಞರು; ಪರಮಾತ್ಮನ ಕೃಪೆಗೆ ಪಾತ್ರರಾದವರು. ಇವರನ್ನು ಅನುಸರಿಸಿ ಇವರ ಸಲಹೆಯನ್ನು ಪಡೆಯಬೇಕು. ಇವರು ನನಗಾಗಿ ಪರಮಾತ್ಮನಲ್ಲಿ ಮೊರೆಯಿಡಲು ಸಮರ್ಥರು. ಪರಹಿತಕ್ಕಾಗಿ ಇವರು ಸಲ್ಲಿಸುವ ಪ್ರಾರ್ಥನೆಯನ್ನು ಪರಮಾತ್ಮನು ಲಾಲಿಸಿಯಾನು; ಲಾಲಿಸಿ, ನನ್ನ ಬಯಕೆಯನ್ನು ಸಲ್ಲಿಸಿಯಾನು. ಏನಿದು? ಈ ಭ್ರಾಂತಿ! ಇವರೊಂದುವೇಳೆ ಮಾನುಷವೇಷವನ್ನು ತಾಳಿದ ಭೂತಪ್ರೇತಗಳಾಗಿದ್ದರೆ ಆಗ ಕೆಡುಕು ಸಿದ್ಧ. ಇರಲಿ; ನಾನು ಮರೆಯಲ್ಲಿಯೇ ಇದ್ದು ಇವರಾಡುವ ಮಾತುಗಳನ್ನು ಕೇಳುತ್ತೇನೆ. ಅನಂತರ ಯೋಗ್ಯರೀತಿಯಲ್ಲಿ ಇತ್ಯರ್ಥಮಾಡಬಹುದು.

ಆಗ ದೀಪದ ಸುತ್ತಲೂ ಕುಳಿತಿದ್ದ ನಾಲ್ವರು ಫಕೀರರೂ ಮಾತಿಗೆ ಮೊದಲುಮಾಡಿದರು. ಮೊದಲನೆಯ ಫಕೀರನನ್ನು ಕಂಡು ಎರಡನೆಯವನು "ನಿಜ, ನಾವೆಲ್ಲ ನೊಂದು ಬೆಂದಿರುವೆವು. ಪರಮಾತ್ಮನ ಕರುಣೆಯು ಒದಗುವವರೆಗೆ ನಾವು ಹೀಗೆಯೇ ನೆಲೆಯಿಲ್ಲದೆ ಅಲೆಯುತ್ತಿರುಬೇಕು. ದೈವಕೃಪೆಯಿಂದ

ನಾವು ನಾಲ್ವರೂ ಇಂದು ಇಲ್ಲಿ ಮತ್ತೊಮ್ಮೆ ಸಂಧಿಸಿದ್ದೇವೆ. ರಾತ್ರಿ ಕಳೆದು ಬೆಳಗಾಗುವುದಕ್ಕೆ ಇನ್ನೂ ಬಹಳಹೊತ್ತು ಉಳಿದಿದೆ. ಅಷ್ಟರಲ್ಲಿ ನಮ್ಮಲ್ಲಿ ಒಬ್ಬೊಬ್ಬರೂ ಇದುವರೆಗೆ ಅವರವರು ಅನುಭವಿಸಿದ ಕಷ್ಟನಷ್ಟಗಳನ್ನು ಕುರಿತು ಕಥೆಗಳನ್ನು ಪರಸ್ಪರ ಹೇಳಿ ಕೇಳಬಾರದೇತಕ್ಕೆ? ನಮ್ಮ ಕಥೆಗಳು ಮುಗಿಯುವ ವೇಳೆಗೆ ರಾತ್ರಿಯು ಹೆಚ್ಚಿನ ಭಾಗವು ಕಳೆದುಹೋದೀತು. ಅನಂತರ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡರಾಯಿತು." ಎಂದನು.

"ಅದು ಸರಿ" ಎನ್ನುತ್ತ ಮೊದಲನೆಯ ಫಕೀರನು ತನ್ನ ವೃತ್ತಾಂತವನ್ನು ಹೇಳತೊಡಗಿದನು. ಉಳಿದ ಮೂವರೂ ಕಿವಿಗೊಟ್ಟು ಕೇಳತೊಡಗಿದರು. ಸುಲ್ತಾನನೂ ಕಿವಿಗೊಟ್ಟು ಕೇಳಿದನು.

## ೫

ಮೊದಲನೆಯ ಫಕೀರ ತಾನು ಹುಟ್ಟಿಬೆಳೆದುದು; ನೋಡಿ ನಲಿದುದು; ಆಡಿಹಾಡಿದುದು; ಉಂಡದ್ದು, ಉಟ್ಟದ್ದು, ಕೊಟ್ಟದ್ದು, ಕಳೆದದ್ದು, ಮುಂತಾದ ಎಲ್ಲ ವಿಚಾರಗಳನ್ನೊಳಗೊಂಡ ತನ್ನ ಕಥೆಯನ್ನು ಆದ್ಯಂತವಾಗಿ ಹೇಳ ತೊಡಗಿದ. ಅವನ ಒಡನಾಡಿಗಳಾದ ಉಳಿದ ಮೂವರು ಫಕೀರರೂ ಅವನ ಕಥೆಯನ್ನು ಕಿವಿಗೊಟ್ಟು ಕೇಳುತ್ತಿರುವರು. ಸುಲ್ತಾನನ ಕುತೂಹಲವು ಕೆರಳಿ ಅವನೂ ಮರೆಯಲ್ಲಿ ಅವಿತು ಕುಳಿತು ಕಥೆಯನ್ನು ಕೇಳುತ್ತಿದ್ದಾನೆ.

ಸಹೋದರ ಫಕೀರರೇ! ನಾನು ಹುಟ್ಟಿದ್ದು ಅರೇಬಿಯಾದ ಏರ್ಮಾ ರಾಜ್ಯದಲ್ಲಿ! ಖಾಜಾ ಅಹಮ್ಮದ್ ಎಂಬಾತನೇ ನಮ್ಮ ತಂದೆ. ಆತ ಅರಿತು ನುರಿತ ಹಿರಿಯ ವ್ಯಾಪಾರಿ. ನಮ್ಮ ತಂದೆಗೆ ನಾವಿಬ್ಬರು ಮಕ್ಕಳು—ನಾನು ಮತ್ತು ನನ್ನ ಅಕ್ಕ. ನನ್ನ ಅಕ್ಕನನ್ನು ನೆರೆಯೂರಿನಲ್ಲಿ ಒಬ್ಬ ಶ್ರೀಮಂತ ವರ್ತಕನ ಮಗನಿಗೆ ಕೊಟ್ಟು ಮದುವೆ ಮಾಡಿತ್ತು. ನನ್ನ ತಾಯ್ತಂದೆಯರಿಗೆ ನನ್ನನ್ನು ಕಂಡರೆ ಅಪಾರ ಪ್ರೀತಿ. ಅವರನ್ನು ಬಿಟ್ಟು ನಾನೊಂದು ಅರಕ್ಷಣವೂ ಕಣ್ಮರೆಯಾಗುವಂತಿರಲಿಲ್ಲ. ನನ್ನ ತಂದೆ ಚಿಕ್ಕಂದಿನಲ್ಲೆ ನನಗೆ ಒಬ್ಬ ಮುನ್ಷಿಯ ಮೂಲಕ ವಿದ್ಯೆ ಹೇಳಿಸಿಕೊಟ್ಟಿದ್ದನು. ಅಂತೆಯೇ ಅಸ್ತ್ರಶಸ್ತ್ರ ಪ್ರಯೋಗ ಗಳಲ್ಲಿಯೂ ವಾಣಿಜ್ಯ ವ್ಯವಹಾರಗಳ ವಿಚಾರದಲ್ಲಿಯೂ ತಕ್ಕ ಶಿಕ್ಷಣದೊರೆತು ನಾನು ಉತ್ತೀರ್ಣನಾದೆ. ನನಗೆ ಹದಿನಾಲ್ಕು ತುಂಬುವುದರೊಳಗೆ ನಾಗರಿಕ ಮಾನವನು ಕಲಿಯಬೇಕಾದುದನ್ನೆಲ್ಲ ನಾನು ಸಾಕಷ್ಟು ಕಲಿತು ಪ್ರವೀಣನಾದೆ. ಆ ವಯಸ್ಸಿನಲ್ಲಿ ನಾನು ಅನುಭವಿಸದ ಆನಂದವಿಲ್ಲ. ನಮ್ಮ ಮನೆಯಲ್ಲಿ ಯಾವುದಕ್ಕೂ ಕೊರತೆ ಇರಲಿಲ್ಲ. ಚಿಂತೆಯೆಂಬುದೇನೋ ನನಗಾಗ ತಿಳಿಯದು. ನಾನು ಆಗ ಕಷ್ಟವನ್ನು ನೋಡಿರಲೇ ಇಲ್ಲ. ನನ್ನ ತಾಯ್ತಂದೆಯರು ಕಷ್ಟವನ್ನು ನೋಡಗೊಡಗಿಸುತ್ತಲೂ ಇರಲಿಲ್ಲ. ಅಷ್ಟೊಂದು ಸುಖಸಂತೋಷ

ಸಮೃದ್ಧಿಗಳಿಂದ ನಿಬಿಡವಾಗಿತ್ತು—ನನ್ನ ಬಾಲ್ಯದ ಬಾಳು. ಇನ್ನೇನು? ತಮ್ಮ ಕಣ್ಣ ಆಲಿಗಳಂತೆ ನನ್ನನ್ನು ಸದಾ ಸಂರಕ್ಷಿಸಿ ಸಂತೋಷಗೊಳಿಸುವ ತಾಯ್ತಂದೆಯರಿರಬೇಕಾದರೆ ನನಗೆಂತಹ ಕಷ್ಟ? ಆದರೆ........ಸ್ನೇಹಿತರೇ! ಈಗ ನೆನೆಸಿಕೊಂಡರೆ ನನ್ನ ಎದೆಯೊಡೆದು ಛಿನ್ನವಾಗುವಂತಿದೆ. ನನ್ನ ಹದಿನೈದನೆಯ ವಯಸ್ಸು ತುಂಬುವುದರೊಳಗೆ ನನ್ನ ಪ್ರೀತಿಸರ್ವಸ್ವರಾದ ನನ್ನ ತಾಯ್ತಂದೆಯರಿಬ್ಬರೂ ತೀರಿಕೊಂಡರು. ನಾನು ತಬ್ಬಲಿಯಾದೆ. ದೇವರ ಇಚ್ಛೆಗೆ ವಿರೋಧವಾಗಿ ನಡೆಯಲು ಯಾರಿಗೆ ಸಾಧ್ಯ?

ಹುಡುಗನಾದರೂ ಆಗಿನ ನನ್ನ ಶೋಕಪರಿಸ್ಥಿತಿಯು ನನಗೆ ಅರಿವಾಗದೆ ಇರಲಿಲ್ಲ. ತಲೆಯಮೇಲೆ ಪ್ರಪಂಚವೇ ಕಳಚಿಬಿದ್ದಂತಾಯಿತು. ಹೆದ್ದಾರಿಯಲ್ಲಿ ನಡೆದು ಹೋಗುತ್ತಿದ್ದವನಿಗೆ ಇದ್ದಕ್ಕಿದ್ದಂತೆ ಕಲ್ಲುಮುಳ್ಳಿನ ಕಾಡುದಾರಿ ಸಿಕ್ಕಿದಂತಾಗಿ ನಾನು ನರಳಿದೆ. ಸಂಧ್ಯಾಸೂರ್ಯನ ಶಾಂತವಾದ ಪ್ರಕಾಶವನ್ನು ನೋಡಿನೋಡಿ ಹಿಗ್ಗುತ್ತ, ಶೀತಲವಾದ ಮಂದಮಾರುತವನ್ನು ಆನಂದದಿಂದ ಅನುಭವಿಸುತ್ತ ದಾರಿನಡೆವವನ ಸುತ್ತಲೂ ಕಗ್ಗತ್ತಲುಕವಿದು ಗಾಢಾಂಧಕಾರದಲ್ಲಿ ದಾರಿತಪ್ಪಿ ಹೆಬ್ಬುಲಿಯ ಗವಿಯನ್ನು ಹೊಕ್ಕರೆ ನಿಸ್ಸಹಾಯಕನಾದ ಆ ದಾರಿಗನಿಗೆ ಯಾವ ಭಯ ಭೀತಿಗಳು ಅಂಕುರಿಸಿ ಅವನು ತತ್ತರಿಸುವಂತಾಗುತ್ತದೋ ಅಂತಹ ಒಂದು ಭೀಕರ ಪರಿಸ್ಥಿತಿಯಲ್ಲಿ ನಾನು ಸಿಲುಕಿ ಸಂಕಟಪಟ್ಟೆ. ಹೆಚ್ಚೇಕೆ? ಹೊಸದಾಗಿ ದೋಣಿಯನ್ನು ನಡೆಸಲು ಅಭ್ಯಾಸಕ್ಕೆ ಆರಂಭಿಸಿದ ನನ್ನ ಬಾಳನೌಕೆಯು ನಡುನೀರಲ್ಲಿ, ತಿರುಗಣಿ ಪ್ರವಾಹದಲ್ಲಿ ಸಿಲುಕಿ ಅಲೆಗಳ ಅಲ್ಲೋಲಕಲ್ಲೋಲವಾದ ತಾಡಣಕ್ಕೆ ತಡೆಯಲಾರದೆ ತಲೆಕೆಳಕಾಗಿ ಮುಗುಚಿಕೊಂಡಂತಾಯಿತು. ನಾನು ಅತ್ತೆ, ಅರಚಿದೆ, ಅಂಗಲಾಚಿದೆ; ದಿಕ್ಕುತೋರದೆ ದಿಗ್ಭ್ರಾಂತನಾದೆ. ಆದರೇನು? ಸತ್ತ ನನ್ನ ತಾಯ್‌ತಂದೆಯರಿಗೆ ಕಿವಿ ಕೇಳಿಸುತ್ತದೆಯೇ?

ಹೇಗೂ ನಾನು ಅನಾಥನಾದೆ. ತಾಯ್ತಂದೆಯರಿಗೆ ಸರಿಸಮಾನವಾದ ವಸ್ತುವನ್ನು ಈ ಪ್ರಪಂಚದಲ್ಲೇ ಕಾಣಲಾಗದು. ದುಃಖವು ಅಧಿಕರಿಸಿ ನಾನು ಹಗಲಿರುಳೆನ್ನದೆ ಅತ್ತು ಕೊರಗಿದೆ; ಕೊರಗಿ, ಕೃಶನಾದೆ. ಅನ್ನಪಾನಾದಿಗಳು ನನಗೆ ಬೇಡವಾದುವು. ನಲವತ್ತು ದಿವಸಗಳು ಹೀಗೆಯೇ ಕಳೆದುವು. ನನ್ನ

ತಂದೆಯು ಕಾಲವಾದ ನಲವತ್ತನೆಯ ದಿನ ನನ್ನ ಹತ್ತಿರದ—ದೂರದ ಸಂಬಂಧಿಗಳೆಲ್ಲ ನನ್ನ ಬಳಿ ಬಂದು 'ಇಂದಿಗೆ ನಿನ್ನ ಶೋಕವು ಮುಕ್ತಾಯವಾಯಿತು ಮಗು! ಗತಿಸಿದ ನಿನ್ನ ತಂದೆಯ ಆತ್ಮವು ನಿನ್ನನ್ನು ಹರಸಿ ಕಾಪಾಡಲಪ್ಪ!' ಎಂದು ಶುಭಾಶಯವನ್ನು ಕೋರಿದರು. ತರುವಾಯ ನನ್ನ ತಂದೆ ವಾಡಿಕೆಯಾಗಿ ಕಟ್ಟಿಕೊಳ್ಳುತ್ತಿದ್ದ ರುಮಾಲನ್ನು ನನ್ನ ತಲೆಗೆ ಸುತ್ತಿ ನನಗೆ ನೀತಿ ಬೋಧೆ ಮಾಡಿದರು :—

"ಕುಮಾರಾ! ಇಷ್ಟು ದಿವಸ ಶೋಕಿಸಿದ್ದು ಸಾಕು. ಇನ್ನು ಶೋಕವನ್ನು ಬಿಟ್ಟು ನಿನ್ನ ತಂದೆಯ ವರ್ತಕತನವನ್ನು ಮುಂದುವರಿಸು. ಈ ಪ್ರಪಂಚದಲ್ಲಿ ಎಲ್ಲ ಮಕ್ಕಳೂ ತಮ್ಮ ಜನನೀಜನಕರನ್ನು ಎಂದಾದರೊಂದು ದಿನ ಕಳೆದು ಕೊಳ್ಳಲೇ ಬೇಕು. ನೀನೂ ಸಹ ಅಷ್ಟೇ. ಎಂದಾದರೊಂದು ದಿನ ನೀನೂ ನಿನ್ನ ಮಕ್ಕಳನ್ನು ಬಿಟ್ಟು ನಡೆಯತಕ್ಕವನೇ. ಇದಕ್ಕಾಗಿ ಮಿತಿಮಿಂಚಿ ದುಃಖಿಸಿ ಫಲವಿಲ್ಲ. ಖುದಾನ ಅಪ್ಪಣೆಯಂತೆ ಎಲ್ಲವೂ ನಡೆಯುತ್ತೆ. ಅದನ್ನು ನಿರ್ಲಕ್ಷಿಸಬಾರದು. ತಂದೆತಾಯಿಗಳ ಭಾಗ್ಯ ನೀನು ಕೇಳಿ ಬಂದದ್ದು ಇಷ್ಟೇ. ಮನಸ್ಸನ್ನು ಸ್ಥಿಮಿತಕ್ಕೆ ತಂದುಕೋ ಮಗು! ಇದೋ ನಿನ್ನ ತಂದೆಯ ವರ್ತಕತನ ಅತ್ಯಾಪಾರವಾದುದು. ಅದಕ್ಕೆಲ್ಲ ಈಗ ನೀನೇ ಒಡೆಯ. ಅದನ್ನು ವಹಿಸಿಕೋ. ಜಾಣ್ಮೆಯಿಂದ ವರ್ತಕತನವನ್ನು ನಡೆಸು. ಲಭಿಸಿದ ಸಂಪತ್ತನ್ನು ಕುಶಲತೆಯಿಂದ ರಕ್ಷಿಸಿಕೋ. ನ್ಯಾಯದಿಂದ ನಡೆಸಿ ನೆಮ್ಮದಿಯಿಂದ ಬಾಳು, ಇದಕ್ಕೆ ಹೆಚ್ಚಿನದನ್ನು ಹೇಳಲು ನಮಗೆ ತೋರದಪ್ಪ! ಇನ್ನು ನಾವು ಬರುತ್ತೇವೆ."

ಹೀಗೆಂದು ಹಿತವಾದವನ್ನು ಹೇಳಿ ನನ್ನ ಸಂಬಂಧೀಕರು ಅವರವರ ಊರಿಗೆ ಅವರವರು ಹೊರಟುಹೋದರು. ಮತ್ತೆ ನನಗೆ ಮಂಕು ಮುಸುಕಿತು. ಅರಮನೆಯಂತಹ ನಮ್ಮ ದಿವ್ಯವಾದ ಭವನದಲ್ಲಿ ಯಾವುದನ್ನು ನೋಡಿದರೂ ನನಗೆ ಒಬ್ಬರಹಿಂದೊಬ್ಬರು ಗತಿಸಿದ ನನ್ನ ತಂದೆತಾಯಿಗಳ ನೆನಪೇ ಬರುತ್ತಿತ್ತು. ಆಗ ನಾನು ಅನುಭವಿಸಿದ ಅಗಲಿಕೆಯ ದುಃಖವನ್ನು ವರ್ಣಿಸಲಾರೆ. ಹಲವಾರು ದಿವಸ ಹೀಗೆಯೇ ನಾನು ನೊಂದುಬೆಂದು ಯಾತನೆಗೊಳಗಾದೆ. ಆದರೆ ಎಷ್ಟು ದಿವಸ ನಾನು ಹೀಗಿರಲು ಸಾಧ್ಯವಾದೀತು? ನಮ್ಮ ತಂದೆಯು ನಡೆಸು

ತ್ತಿದ್ದ ಹಡಗಿನ ವ್ಯಾಪಾರ, ಅಪಾರವಾದ ಲೇವಾದೇವಿ, ಆತನ ಆಡಳಿತಕ್ಕೆ ಒಳಪಟ್ಟ ಕಾರ್ಖಾನೆಗಳು, ಗಡಂಗುಗಳು, ಅಂಗಡಿಗಳು ಇವುಗಳ ಮೇಲ್ವಿಚಾರಣೆ ಈಗ ನನ್ನ ತಲೆಯಮೇಲೆ ಹೊತ್ತಭಾರವಲ್ಲವೇ ?

ಒಂದು ದಿನ ಪ್ರಾತಃಕಾಲ ನನ್ನ ತಂದೆಯ ಕಾರ್ಯದರ್ಶಿ ನನ್ನನ್ನು ಕಾಣಬಂದ. ನಾನವನನ್ನು ಮರ್ಯಾದೆಯಿಂದ ಬರಮಾಡಿಕೊಂಡೆ. ಅವನು ದುಃಖಪಡಕೂಡದೆಂದು ಸಂತೈಸಿ ನನ್ನ ಮುಂದೆ ಲೆಕ್ಕಪುಸ್ತಕಗಳನ್ನು ಹರಡಿ ಇದೋ ನೋಡಿ;' ಇದು ಇಂದು ನಿಮ್ಮ ಲೆಕ್ಕವಲ್ಲಿರುವ ನಗದು ಹಣ ; ಇದು ವ್ಯಾಪಾರದಲ್ಲಿರುವ ಸರಕುಗಳ ಬೆಲೆ; ಇದು ಹಡಗಿನಲ್ಲಿ ಮಾರಾಟಕ್ಕೆ ಹೋಗಿರುವ ಸಾಮಗ್ರಿಗಳ ಬೆಲೆ; ಇದು ನಾವು ಇತರರಿಗೆ ಕೊಡಬೇಕಾದ ಬಾಕಿ ; ಇದು ನಮಗೆ ಇತರರಿಂದ ಬರಬೇಕಾದ ಹಣ; ಇದು ಲಾಭ ; ಇದು ನಷ್ಟ ; ಇದು ಅಸುಲು ; ಇದು ಬಡ್ಡಿ ; ಇದು ನಮ್ಮ ನೌಕರರ ಪಟ್ಟಿ ; ಇದು ಅವರಿಗೆ ಸಂದಾಯವಾಗಬೇಕಾದ ಸಂಬಳ ; ಇದು ಧರ್ಮದ ಲೆಕ್ಕ ; ಅದು ನಿಮ್ಮ ಸ್ವಂತ ಕರ್ಚಿನ ಲೆಕ್ಕ ; ಅದು ಬಾಡಿಗೆ ಲೆಕ್ಕ ; ಇದು ಕಟ್ಟಡದ ಲೆಕ್ಕ ;' ಇತ್ಯಾದಿಯಾಗಿ ಕಾರ್ಯದರ್ಶಿ ಬರಬರನೆ ಎಲ್ಲ ಲೆಕ್ಕಗಳನ್ನೂ ನನಗೆ ವರದಿ ಒಪ್ಪಿಸಿದ. ಅದಕ್ಕೆ ಮುನ್ನ ನಾನು ಏನನ್ನಾದರೂ ನೋಡಿದ್ದರಲ್ಲವೆ ? ಆದರೆ ಒಂದು ವಿಚಾರದಲ್ಲಿ ನನಗೆ ಉತ್ಸಾಹ ಉಂಟಾಯಿತು. ನನ್ನ ತಂದೆಯು ವಿವೇಕದಿಂದ ಗಳಿಸಿ, ಶೇಖರಿಸಿ, ನನಗಾಗಿ ಬಿಟ್ಟುಹೋದ ಸ್ವತ್ತುಗಳು ! ಎಂತಹ ಹಿರಿಯ ಸಂಪತ್ತು ! ಇದಿಷ್ಟಕ್ಕೆ ನಾನು ಒಡೆಯ ! ಅಡ್ಡಿಅಡಚಣೆಗಳಿಲ್ಲದೆ ನಾನು ವ್ಯಯಮಾಡಬಹುದು; ಬೇಕಾದ ಸುಖಸಂತೋಷಗಳನ್ನು ಅನುಭವಿಸಬಹುದು. ಈ ಅಭಿಪ್ರಾಯವು ನನ್ನಲ್ಲಿ ತಲೆದೋರಿ ಮಾತಾಪಿತೃವಿಯೋಗವನ್ನು ನಾನು ಕ್ರಮಕ್ರಮವಾಗಿ ಮರೆಯಲನುವಾದೆ.

# ೬

ಒಡನಾಡಿಗಳೇ ! ಹಣವನ್ನು ಗಳಿಸುವುದಕ್ಕಿಂತ ಉಳಿಸುವುದಕ್ಕೆ ಹೆಚ್ಚಿನ ವಿವೇಕವೂ, ಅನುಭವವೂ, ಸಾಮರ್ಥ್ಯವೂ ಬೇಕು. ಕೇವಲ ಹದಿನಾಲ್ಕು ವಯಸ್ಸಿನ ಹುಡುಗನಾದ ನನಗೆ ಆಗ ಹಣದ ಮಹತ್ತ್ವ ಅಷ್ಟಾಗಿ ತಿಳಿಯದೆ ಹೋಯಿತು. ಹಿರಿಯರ ಅಪಾರ ಸಂಪತ್ತಿಗೆ ಉತ್ತರಾಧಿಕಾರಿಗಳಾದ ಕಿರಿಯರನೇಕರು ಅರಿತುಕೊಳ್ಳುವುದೊಳಿತು. ತಿಳಿದೂತಿಳಿಯದು ಆ ವಯಸ್ಸಿನಲ್ಲಿ ಹಿರಿಯರ ಸಲಹೆಗಳನ್ನು ಪಡೆದು ಬಾಳುವುದು ಲೇಸು. ಹಾಗಲ್ಲದೆ ಹಣದಾಸೆಗೆ ಸುತ್ತುವರಿಯುವ ದುಷ್ಟ ಸ್ನೇಹಿತರ ಕುತಂತ್ರ ಮಾಯಾಜಾಲಗಳಿಗೆ ಒಳಗಾಗಿ ಹಣವನ್ನು ದುರ್ವಿನಿಯೋಗಮಾಡಿದರೆ ವಿಪತ್ತು ಒದಗುವುದು ಖಂಡಿತ. ತೂತುಮಡಿಕೆಯಲ್ಲಿ ನೀರು ಸೇದಿ ಕುಡಿಯಲೆತ್ನಿಸುವ ಮೂರ್ಖನಿಗೂ, ಅನುಭವವಿಲ್ಲದೆ ಕಂಡಕಂಡವರ ಮಾತಿಗೆ ಕಿವಿಗೊಟ್ಟು ಕೆಟ್ಟುಹಾಳಾದ ನನಗೂ ಆಗ ಯಾವ ವ್ಯತ್ಯಾಸವೂ ಇರಲಿಲ್ಲ. ಇಷ್ಟೊಂದು ಸಂಪತ್ತಿಗೆ ಒಡೆಯನಾದ ನಾನು ದುರ್ಮಂತ್ರಿಗಳ ದುರ್ಬೋಧನೆಗಳಿಗೆ ದಾಸನಾದೆ.

ಮೊಟ್ಟಮೊದಲನೆಯದಾಗಿ ನಾನು ನನ್ನ ಭವನದಲ್ಲಿದ್ದ ಎಲ್ಲ ಹಳೆಯ ಪದಾರ್ಥಗಳನ್ನೂ ಬಿಸಾಕಿದೆ. ಹೊಸದಾಗಿ ರತ್ನಗಂಬಳಿಗಳನ್ನು ತರಿಸಿ ನೆಲಕ್ಕೆಲ್ಲ ಹರಡಿದೆ. ಮನೆಯಲ್ಲಿ ಎಲ್ಲಿ ನೋಡಿದರೂ ನಿಲುಗನ್ನಡಿಗಳು. ನಗರದಲ್ಲಿದ್ದ ಚಿನ್ನಬೆಳ್ಳಿ ರತ್ನಾಭರಣಗಳನ್ನು ನಾನು ವಿಶೇಷವಾಗಿ ಕೊಂಡೆ. ಆಡಂಬರದ ಬಾಳನ್ನು ತೊಡಗಿದೆ. ಹೊಗಳಿದವರಿಗೆ ಹಿಡಿಹಿಡಿಯಾಗಿ ಹೊನ್ನು ಹೊರಿಸಿ ಕಳುಹಿಸಿದೆ. ದಿನ ತಪ್ಪಿದರೂ ಔತಣ ತಪ್ಪದು. ಆ ಔತಣಕ್ಕೆ ಅತ್ಯುತ್ತಮ ಊಟಉಪಚಾರಗಳ ಸಿದ್ಧತೆ. ಅತ್ಯುನ್ನತ ದರ್ಜೆಯ ಮದ್ಯ ಪಾನೀಯಗಳು; ಆಹ್ವಾನಿತರು ತಿಳಿದ–ತಿಳಿಯದ ನೂರಾರು ಸಾವಿರಾರು ಜನರು, ಊಳಿಗದವರು ಲೆಕ್ಕಮಾಡುವಂತಿರಲಿಲ್ಲ. ದಾನವೀರನೆಂದು ಹೊಗಳಿಸಿಕೊಂಡು

ನಾನು ದಾನಮಾಡಿದ್ದೂ ಮಾಡಿದ್ದೇ. ಅದೇನು ವಸ್ತ್ರಗಳು ! ಅದೇನು ಭೂಷಣ ಗಳು ! ಹಾಯ್ ! ಹಾಯ್ ! ಆ ದ್ರವ್ಯದಾನ ! ಅದನ್ನು ನೋಡಿ ಸುಲ್ತಾನರು ನಾಚಿಕೊಳ್ಳುತ್ತಿದ್ದರು. ಹೇಗೋ ದುಷ್ಟಸ್ನೇಹಿತರೊಂದಿಗೆ ಕಲೆತು ಮೊದಲು ಕುಡಿತವನ್ನು ಕಲಿತೆ. ಬರಬರುತ್ತ ಮಿತಿಮೀರಿ ಕುಡಿಯತೊಡಗಿದೆ.

ನಿಷಾದೇವಿಗೆ ದಾಸನಾಗಿ ಉನ್ಮತ್ತವಾಗಿ ಬಿದ್ದು ಹೊರಳಾಡುತ್ತಿರುವಾಗ ಕಪಟದಿಂದ ಒಡನಾಡಿಗಳು ನನ್ನ ಧನಕನಕಗಳನ್ನು—ವಸ್ತ್ರಾಭರಣಗಳನ್ನು ಹೊತ್ತುಹಾಕಿದ್ದೂ ಹಾಕಿದ್ದೇ ! ನನ್ನ ಗೃಹವಲ್ಲಿ ಬಂದುದು—ಹೋದುವು ಇಂತಿಷ್ಟೇ ಎಂದು ಲೆಕ್ಕಮಾಡುವವರೇ ಇರಲಿಲ್ಲ. ಯಾರಿಗೆ ಬೇಕಾಗಿತ್ತು ? ನಾನೊಬ್ಬ ಮದ್ಯಕುಡಿದ ಮಂಗನಂತಾದೆ. ನನ್ನ ಈ ದಿನವಹಿ ಮದುವೆಯಲ್ಲಿ ಉಲ್ಲಾಸದಿಂದ ಉಂಡವರು, ಸಲ್ಲಾಪದಿಂದ ನಲಿಸಿ ನನ್ನಿಂದ ಹೊಡೆದುಕೊಂಡು ಹೋದವರೇ ಜಾಣರು !

ಇಷ್ಟಾದರೂ ನಾನು ಎಚ್ಚೆತ್ತುಕೊಳ್ಳಲಿಲ್ಲ. ಕುಡಿತದಿಂದ ಹಾದರಕ್ಕೆ ಇಳಿಯಿತು. ರಾಜಮಹಾರಾಜರು ಮಾಡದ ಮಹಾದಾನವನ್ನು ನಾನು ಮೆಚ್ಚಿದ ವೇಶ್ಯೆಯರ ಪದತಲದಲ್ಲಿ ಚೆಲ್ಲಿ ನಲಿದಾಡಿದೆ. ನನ್ನ ಸ್ನೇಹಿತರು ನನ್ನನ್ನು ಹೊಸಹೊಸ ಇಕ್ಕಟ್ಟಿನಲ್ಲಿ ಸಿಲುಕಿಸಿದರು. ನನ್ನ ಯೌವನವು ಹಾಳಾಯಿತು; ನನ್ನ ಅಪಾರ ಸಂಪತ್ತು ಕರಗಿ ನೀರಾಗಿ ಹರಿದುಹೋಯಿತು. ನನ್ನ ವ್ಯಾಪಾರವು ಅಸ್ಥಿಭಾರವಳಿದು ಮುರಿದು ಬಿದ್ದಿತು. ನನ್ನ ಮನೆ ಸಾಲ ಗಾರರ ಪಾಲಾಯಿತು. ನನ್ನ ಊಳಿಗದವರು ಹೇಳದೆ ಕೇಳದೆ ಓಡಿಹೋದರು. ನನ್ನ ಕೈಬರಿದಾಯಿತು. ನನ್ನಿಂದ ಉಪಕಾರ ಹೊಂದಿದವರೆಲ್ಲ ನನ್ನನ್ನು ತ್ಯಜಿಸಿ ದೂರ ಸರಿದರು. ಅಕಸ್ಮಾತ್ತಾಗಿ ದಾರಿಯಲ್ಲಿ ಕಂಡಾಗಲಂತೂ ನನ್ನ ಹಳೆಯ ಸ್ನೇಹಿತರು ನನ್ನನ್ನು ಗುರುತಿಸದೆ ಹೋದರು. ಹಲವರು ನನ್ನನ್ನು ಹುಚ್ಚನೆಂದು ಹೀಯಾಳಿಸಿದರು. ಮತ್ತೆ ಕೆಲವರು ನನ್ನನ್ನು ಕಂಡೊಡನೆಯೇ ಪಾಷಾಣವನ್ನು ಕಂಡವರಂತೆ ಹೆದರಿ ಓಟಕಿತ್ತರು. ಅಡ್ಡಿಯಿಲ್ಲದೆ ಎತ್ತೆತ್ತಿ ಚೆಲ್ಲಾಡಿದ ನನ್ನ ಕೈಯನ್ನು ಇತರರ ಮುಂದೆ ಒಡ್ಡುವಂತಾಯಿತು. ಆಗ ಅದರಲ್ಲೊಂದು ಕವಡೆಯೂ ಬೀಳದಂತಾಯಿತು. ಸ್ನೇಹದ ಸಿಹಿಕಹಿಗಳನ್ನು

ಅಳಿಯಲು ನನ್ನಂತೆ ಪ್ರಯಮಾಡಿ ಪರೀಕ್ಷೆಗೊಳಗಾದವರೆ ವಿರಳ ಎನ್ನಬಹುದು. ನನ್ನ ದಡ್ಡತನವನ್ನು ಕಂಡು ನನ್ನನ್ನು ನಾನೇ ದಂಡಿಸಿಕೊಂಡೆ. ಆದರೇನು ಪ್ರಯೋಜನ? ಕೈಮಿಂಚಿದಮೇಲೆ ನನಗೆ ಬುದ್ಧಿಬಂದಂತಾಯಿತು. ದಡ್ಡತನವು ನನ್ನನ್ನು ದಾರಿದ್ರ್ಯದ ಮಡುವಿನಲ್ಲಿ ತಳ್ಳಿತು; ನಿಲ್ಲುವುದಕ್ಕೆ ನೆರಳಿಲ್ಲದೆ, ಉಡುವುದಕ್ಕೆ ತೊಡುವುದಕ್ಕೆ ಬಟ್ಟೆಯಿಲ್ಲದೆ ನಾನೊಬ್ಬ ತಿರುಕನಾದೆ. ನಮ್ಮ ತಂದೆ ನಮ್ಮ ನಗರದಲ್ಲಿ ಸುಪ್ರಸಿದ್ಧ ವರ್ತಕ. ಅವನ ಮಗನಾದ ನಾನು ಅವನ ನಂತರ ಕೆಲವೇ ವರ್ಷಗಳಲ್ಲಿ, ಎಲ್ಲ ಸಂಪತ್ತನ್ನೂ ತೊಲಗಿಸಿ ಅವನ ಕೀರ್ತಿಕಲಶವನ್ನು ಪಾತಾಳದಲ್ಲಿ ತಳ್ಳಿದೆ.

ಮುಂದೇನು? ಇಂತಹುವನ್ನು ಮಾಡಬೇಕೆಂಬುದೇ ನನಗೆ ತಿಳಿಯದಾಯಿತು. ಯಾರಲ್ಲಿ ಮೊರೆಯಿಡಲಿ? ಯಾರು ನನ್ನ ದೈನ್ಯಸ್ಥಿತಿಯನ್ನು ಕಂಡು ಮರುಕಗೊಳ್ಳುವರು? ಕೊನೆಗೆ ನಮ್ಮ ಅಕ್ಕನ ನೆನಪು ಬಂದಿತು ನನಗೆ. ಆದರೇನು? ನನ್ನ ತಂದೆ ತೀರಿಕೊಂಡ ಕಾಲಕ್ಕೆ ನನ್ನಲ್ಲಿ ಸ ಂತಾಪವನ್ನು ಸೂಚಿಸಿ ಆಕೆ ನನಗೆ ಅನೇಕ ಪತ್ರಗಳನ್ನು ಬರೆದಿದ್ದಳು. ಯೌವನಮದ, ಧನಮದ, ದುಸ್ಸಹವಾಸ ಇವುಗಳಲ್ಲಿ ಮುಳುಗಿಹೋಗಿದ್ದ ನಾನು ಆಕೆಯಲ್ಲಿ ತಾತ್ಸಾರ ತೋರಿ ಆಕೆಯ ಪತ್ರಗಳಿಗೆ ಪ್ರತ್ಯುತ್ತರವೇ ಬರೆಯಲಿಲ್ಲ. ನನ್ನ ದುರಹಂಕಾರವನ್ನು ಕಂಡು ನನಗೇ ಈಗ ನಾಚಿಕೆಯಾಯಿತು. ಆಕೆಯ ಬಳಿ ಹೇಗೆ ಹೋಗುವುದು? ಹೇಗೆತಾನೇ ಅವಳಿಗೆ ಮುಖತೋರಿಸುವುದು? ಎಳೆವಯಸ್ಸಿನಲ್ಲಿ ನಮ್ಮ ಅಕ್ಕನು ನನ್ನಲ್ಲಿ ತೋರುತ್ತಿದ್ದ ಅಪಾರ ಪ್ರೀತಿಯನ್ನು ನೆನೆಸಿ ನನಗೆ ಧೈರ್ಯವುಂಟಾಯಿತು. ನನ್ನ ಈ ದುಸ್ಥಿತಿಯಲ್ಲಿ ಒಡಹುಟ್ಟಿದವಳು ಕೈಬಿಡಲಾರಳೆಂದು ನನ್ನ ಮನೋದೇವತೆಯು ಪ್ರೇರಿಸಿದಳು. ಆದರೂ ಮನಸ್ಸಿನಲ್ಲೇನೋ ಸಂದೇಹ. ಅಂತೂ ಅಕ್ಕನ ಬಳಿ ಹೋಗಿ ಆಕೆಯಲ್ಲಿ ನನ್ನ ತಪ್ಪುಗಳನ್ನೆಲ್ಲ ಒಪ್ಪಿಸಿ ನನ್ನನ್ನು ಮನ್ನಿಸಿ ಕಾಪಾಡಬೇಕೆಂದು ಪ್ರಾರ್ಥಿಸಬೇಕು—ಹೀಗೆಂದು ತೀರ್ಮಾನಿಸಿಕೊಂಡೆ. ಉಟ್ಟ ಚಿಂದಿಬಟ್ಟೆಯೊಂದಿಗೆ ಕಾಲಿಗೊಂದು ಮೆಟ್ಟು ಸಹ ಇಲ್ಲದೆ, ದಾರಿ ನಡೆದು ನಡೆದು ಬೇಸತ್ತು, ಬಳಲಿ, ಕಟ್ಟಕಡೆಗೆ ಅಕ್ಕನ ಊರನ್ನು ಸೇರಿ ಅಕ್ಕನ ಮನೆಯನ್ನೂ ಹೊಕ್ಕೆ.

ನನ್ನ ಕಂಗೆಟ್ಟ ಮುಖ, ನೊಂದ ಮನಸ್ಸು, ಧೂಳಿನಿಂದ ಮುಚ್ಚಿಹೋದ ಶರೀರ, ನಾಚಿಕೆಯಿಂದ ತಗ್ಗಿದ ತಲೆ, ಇಂತಹ ದುಸ್ಥಿತಿಯಲ್ಲಿ ಬಂದ ನನ್ನನ್ನು

ಕಂಡ ನನ್ನ ಅಕ್ಕನು ನನ್ನನ್ನು ಗುರುತಿಸಿದಳು. ಬಾಗಿಲಬಳಿ ಸೇರಿದೊಡನೆಯೇ ನನ್ನನ್ನು ತಬ್ಬಿ ಮುದ್ದಾಡಿದಳು. ತಲೆಯನ್ನು ನೇವರಿಸಿ "ತಮ್ಮಾ! ಇದೇನು ನಿನ್ನ ದುರವಸ್ಥೆ ? ನಡಿ, ಒಳಗೆ. ಸ್ನಾನಮಾಡಿ ಹೊಸ ಬಟ್ಟೆಗಳನ್ನು ತೊಡು. ಹೊಟ್ಟೆತುಂಬ ಉಂಡು ಸ್ವಲ್ಪ ಹೊತ್ತು ವಿಶ್ರಮಿಸಿಕೋ" ಎಂದಳು.

ನನ್ನ ತಾಯ್ತಂದೆಯರ ಪ್ರೀತಿಗೆ ಸರಿಸಮಾನವಾಗಿದ್ದಿತು ನನ್ನ ಅಕ್ಕನ ಪ್ರೀತಿ. ಗಂಡನ ಮತ್ತು ಮಾವನ ಆಶ್ರಯದಲ್ಲಿದ್ದ ಆಕೆಯು ನನ್ನನ್ನು ಸ್ವಾಗತಿಸಿ ಸತ್ಕರಿಸುವಷ್ಟು ಸ್ವತಂತ್ರಳೇ ಎಂದು ನಾನು ಅನುಮಾನಿಸುತ್ತಿದ್ದೆ. ಆದರೂ ನನ್ನ ಅಕ್ಕನ ಅಪಾರ ಆದರದಿಂದ ನಾನು ಸಂತಸಗೊಂಡೆ, ಸಕಲರಿಂದಲೂ ತಿರಸ್ಕೃತನಾದ ನಾನು ಮತ್ತೆ ಒಡಹುಟ್ಟಿದವಳ ಆದರ ಪುರಸ್ಕಾರಗಳಿಗೆ ಪಾತ್ರನಾದುದನ್ನು ಕಂಡು ಹಿರಿಹಿಗ್ಗಿದೆ. ಆನಂದಾತಿಶಯದಿಂದ ನನ್ನ ಕಣ್ಣುಗಳಿಂದ ಫಳಫಳನೆ ನೀರು ಸುರಿಯಿತು. "ಅಳಬೇಡ ತಮ್ಮಾ! ನಿನ್ನ ಕಷ್ಟಗಳು ಏನೇ ಇರಲಿ; ಅವುಗಳನ್ನು ನಾನು ಪರಿಹರಿಸುತ್ತೇನೆ" ಎಂದು ಭರವಸೆ ನೀಡಿದಳು ನಮ್ಮ ಅಕ್ಕ. ಆ ನಾಲ್ಕು ಮೃದು ಮಾತುಗಳಿಂದ ನನ್ನ ಎದೆಯ ಹುಣ್ಣುಗಳಿಗೆ ದಿವ್ಯಾಂಜನವು ಲೇಪಿತವಾಗಿ ಅವು ಮಾಯಗೊಂಡಂತಾಯಿತು. ಇದ್ದಕಿದ್ದಂತೆ ನನ್ನಲ್ಲಿ ನವವಿವೇಕ, ನವಧ್ಯೇಯ, ನವಸ್ಫೂರ್ತಿ, ನವೋತ್ಸಾಹಗಳು, ಜನಿಸಿ, ನನ್ನಲ್ಲಿ ನವಚೇತನವು ತುಂಬಿತು. ನಾನು ನೂತನ ಬಾಳ ಹೊಸ ಹೊಸಲನ್ನೂ ಹೊಕ್ಕೆ.

ಸ್ನಾನಮಾಡಿ ಹೊಸಬಟ್ಟೆಗಳನ್ನುಟ್ಟು ಊಟಕ್ಕೆ ಕುಳಿತೆ. ನನ್ನ ಅಕ್ಕನೇ ನನಗೆ ಬಡಸತೊಡಗಿದಳು, ಶುಚಿರುಚಿಯಾದ ಊಟವನ್ನುಂಡು ಎಷ್ಟೋ ಕಾಲ ಕಳೆದಿದ್ದಿತು. ಅಡಿಗೆಯು ಅಮೃತದಂತಿದ್ದಿತು—ಅದೂ ಸ್ವತೇವ, ಪ್ರೀತಿಯ ಸರ್ವಸ್ವವಾದ ಅಕ್ಕನ ಕೈಯಿಂದಲೇ ಬಡಿಸಲ್ಪಟ್ಟುದು! ಹಸಿವಿನಿಂದ ಬಳಲಿದ್ದ ನಾನು ಗಬಗಬನೆ ತಿನ್ನತೊಡಗಿದೆ. ನನ್ನ ಅಕ್ಕನು ಕ್ಷೇಮ ಸಮಾಚಾರಗಳನ್ನು ವಿಚಾರಿಸುತ್ತ"ತಮ್ಮಾ! ಸಂಕೋಚಬೇಡ; ಇನ್ನಷ್ಟು ಬಡಿಸುತ್ತೇನೆ; ಮತ್ತಷ್ಟು ಊಟಮಾಡು" ಎಂದು ಮುಂತಾಗಿ ಆದರದಿಂದ ಒತ್ತಾಯಪಡಿಸತೊಡಗಿದಳು. ನಾನು ಬಿಗಿದ ಕಂಠದಿಂದ ಮಾತು ಹೊರಡದೆ ಬಾಯಲ್ಲಿ "ಅಕ್ಕಾ! ತಾಯಿಲ್ಲದ ನನಗೆ ನೀನೇ ತಾಯಿ!" ಎಂದು ಕೃತಜ್ಞತೆಯಿಂದ ಕೊಂಡಾಡತೊಡಗಿದೆ.

"ತಮ್ಮಾ! ಇದೇನು ಪ್ರಮಾದ! ಒಡಹುಟ್ಟಿದ ನಾನು ನಿನಗೆ ಇಷ್ಟನ್ನೂ ಮಾಡ ದಿದ್ದರೆ ಆದೀತೇ? ಸಂಕೋಚಬೇಡ; ಸಂಶಯಬೇಡ. ನಾಲ್ಕಾರು ತಿಂಗಳು ಇಲ್ಲೇ ಇದ್ದು ಹೊಟ್ಟೆತುಂಬ ಊಟಮಾಡಿ—ಬೇಕಾದಷ್ಟು ವಿಶ್ರಾಂತಿ ಪಡೆ" ಎಂದಳು ನಮ್ಮ ಅಕ್ಕ.

ನನ್ನ ಅದೃಷ್ಟವಶದಿಂದ ನಾನು ಅಕ್ಕನ ಹೊಸ್ತಿಲನ್ನು ಮುಟ್ಟಿದಾಗ ನನ್ನ ಭಾವನು ಊರಲ್ಲಿರಲಿಲ್ಲ. ಹಡಗಿನ ವ್ಯಾಪಾರಕ್ಕಾಗಿ ಹೊರದೇಶಗಳಿಗೆ ಹೋದ ವನು ಇನ್ನೂ ಒಂದೆರಡು ತಿಂಗಳು ಬರುವಂತಿರಲಿಲ್ಲ. ಆತನಿದ್ದಿದ್ದರೆ ನನ್ನ ಚಿಂತಾಜನಕ ಪರಿಸ್ಥಿತಿಯನ್ನು ಕಂಡು ದುಃಖಪಡುತ್ತಿದ್ದನೋ ಅಥವಾ ದೌರ್ಜನ್ಯದಿಂದಲೂ ತಾತ್ಸಾರದಿಂದಲೂ ನನ್ನನ್ನುಹೊರಗೆ ದೂಡಿಬಿಡುತ್ತಿದ್ದನೊ ನಾನರಿಯೆ. ಅಂತೆಯೇ ನನ್ನ ಅಕ್ಕನ ಮಾವನೂ ತನ್ನ ಮಗಳ ಊರಿಗೆ ಹೊರಟು ಹೋಗಿದ್ದನು. ಈಗ ಮನೆಯಲ್ಲಿ ಇದ್ದವರು ನಾನು, ನನ್ನ ಅಕ್ಕ ಮತ್ತು ಊಳಿಗದವರು. ಆದುದರಿಂದಲೇ ನನಗೆ ಅಳವಿಲ್ಲದ ಉಪಚಾರಗಳನ್ನು ನೀಡಲು, ನನ್ನನ್ನು ಹಗಲಿರುಳು ನಿರಾಂತಕವಾಗಿ ವಿಚಾರಿಸಿಕೊಳ್ಳಲು, ನನ್ನ ಅಕ್ಕನಿಗೆ ಸಾಧ್ಯವಾಯಿತು.

ಅಂದು ಮಧ್ಯಾಹ್ನ ಭೋಜನಾನಂತರ ನಮ್ಮ ಅಕ್ಕನು ನನ್ನನ್ನು ಪ್ರಸಿದ್ಧ ಬಟ್ಟೆ ವ್ಯಾಪಾರಿಗಳ ಬಳಿ ಕಳುಹಿಸಿ ನನಗೆ ಬೇಕಾದ ಎಲ್ಲಾ ಬಟ್ಟೆಬರೆಗಳನ್ನೂ ನೂತನವಾಗಿ ಅಣಿಮಾಡಿಕೊಟ್ಟಳು. ಬಳಿಕ ನನಗಾಗಿ ಒಂದು ಪ್ರತ್ಯೇಕವಾದ ಕೋಣೆಯನ್ನು ಸಿದ್ಧಗೊಳಿಸಿ, ವಿಶ್ರಾಂತಿಗೆ ತನ್ನ ಕೈಯಾರೆ ಮೆತ್ತನೆಯ ಹಾಸಿಗೆ ಯನ್ನು ಹಾಸಿಕೊಟ್ಟಳು ನನ್ನ ಮಂಚದ ಪಕ್ಕದಲ್ಲೇ ಕೈಗೆಟಕುವಂತೆ ಬೆಳ್ಳಿಯ ಹೂಜಿಗಳಲ್ಲಿ ತಂಪಾದ ಪಾನೀಯಗಳನ್ನು ಸಜ್ಜುಗೊಳಿಸಿ ಇಟ್ಟಳು. ಆ ಅನಂತರ ನಾನು ಮಂಚದಮೇಲೆ ಮಲಗಿದ್ದಂತೆಯೇ ನಮ್ಮ ಅಕ್ಕನು ನನ್ನ ತಲೆದಿಂಬಿನ ಬಳಿ ನೆಲದಮೇಲೆ ಹಾಸಿದ್ದ ರತ್ನಗಂಬಳಿಯಮೇಲೆ ಕುಳಿತು ಆದರ ದಿಂದ ನನ್ನ ತಲೆಯನ್ನು ನೇವರಿಸುತ್ತ 'ತಮ್ಮ! ನಿನ್ನ ದುಸ್ಥಿತಿಗೆ ಕಾರಣ ವೇನಪ್ಪ? ಮರೆಮಾಚದೆ ಹೇಳು. ನನ್ನ ಕೈಲಾದ್ದೆಲ್ಲ ಸಹಾಯವನ್ನು ನೀಡಲು

ನಾನು ಸಿದ್ಧಳಿದ್ದೇನೆ' ಎಂದಳು. ಅವಳ ಮಾತು ನನಗೆ ಅಮೃತಸದೃಶವಾಗಿದ್ದಿತು. ತಂದೆಯು ತೀರಿಕೊಂಡ ಬಳಿಕ ಅಂದಿನ ವರೆಗೆ ನಡೆದ ಎಲ್ಲ ವಿದ್ಯಮಾನಗಳನ್ನು ಒಂದನ್ನೂ ಬಿಡದೆ—ಮರೆಮಾಚದೆ—ನಾನು ಅವಳಲ್ಲಿ ಹೇಳಿಕೊಂಡೆ. ದುಃಖವನ್ನು ತಾಳಲಾರದೆ ಮರುಗಿ ನಾನು ಮಗುವಿನಂತೆ ಅತ್ತೆ. ತಾನೂ ಯಥೇಚ್ಛವಾಗಿ ಮರುಗಿ ನನ್ನ ಅಕ್ಕನು ನನ್ನ ಕಣ್ಣೀರು ಒರಸುತ್ತ "ಹೆದರದಿರು ಕಂದ ! ದೇವರು ನನಗೇನೂ ಕಡಿಮೆಮಾಡಲಿಲ್ಲ. ನಿನ್ನ ಕಷ್ಟವನ್ನು ಹರಿಸಬಲ್ಲೆ ದೇವರ ದಯದಿಂದ ನೀನು ಮತ್ತೆ ನಾಲ್ಕುಜನರ ನಡುವಿನಲ್ಲಿ ಗೌರವ ಪ್ರತಿಷ್ಠೆಗಳಿಂದ ತಲೆಯೆತ್ತಿ ತಿರುಗಾಡಬಹುದು." ಎಂದು ಧೈರ್ಯವನ್ನು ಹೇಳಿ ಸಂತೈಸಿದಳು.

ಯಾವುದಕ್ಕೂ ಏನೂ ಕೊರತೆಇಲ್ಲ ಎಂಬಂತೆ ಮೂರು ನಾಲ್ಕು ತಿಂಗಳುಗಳು ಆನಂದದಿಂದ ಉರುಳಿ ಹೋದುವು. ಹೊರದೇಶಕ್ಕೆ ಹೋಗಿದ್ದ ನನ್ನ ಭಾವನೂ ಹಿಂತಿರುಗಿ ಬಂದನು. ನನ್ನನ್ನು ಕಂಡು ಅತ್ಯಂತ ಪ್ರೀತಿಯಿಂದ ಆದರಿಸಿದನು. ನನ್ನ ಸಂತೋಷ ಕೃತಜ್ಞತೆಗಳಿಗೆ ಮಿತಿಮೀರೆಗಳಿರಲಿಲ್ಲ.

ಅಲ್ಲಗೆಳೆಯುವ ಆಧಮರ ದೃಷ್ಟಿಯಿಂದ ತಪ್ಪಿಸಿಕೊಂಡು ಓಡಿಹೋಗಿ ಕಣ್ಮರೆಯಾಗಿರಲು ನನಗೇನು ಮನೆಯೋ ಮಠವೇ ? ಇಂತಹ ದುಸ್ಥಿತಿಯಲ್ಲಿದ್ದ ನನಗೆ ಪ್ರೀತಿಸರ್ವಸ್ವಳಾದ ನನ್ನ ಅಕ್ಕನ ಆದರ ಅಮೃತಸಂಜೀವಿನಿಯಂತಿದ್ದಿತು. ಆಕೆಯ ಆಶ್ರಯದಲ್ಲಿ ಆನಂದದಿಂದ ನಾನು ಕಳೆದ ಕಾಲವನ್ನು ನನ್ನ ಉಸಿರಿರುವವರೆಗೆ ಮರೆಯುವಂತಿಲ್ಲ. ದಿಕ್ಕೆಟ್ಟು ಪರಿತಪಿಸುತ್ತಿದ್ದ ನನಗೆ ನನ್ನ ಅಕ್ಕನು ಇಲ್ಲದಿದ್ದರೆ ನನ್ನ ಪರಿಣಾಮವೇನಾಗುತ್ತಿತ್ತು ? ಒಡನಾಡಿಗಳೇ ! ಇಂತಹ ಒಂದು ಸುಭದ್ರ ಆಧಾರಸ್ಥಂಭವನ್ನು ಅಕ್ಕನರೂಪದಲ್ಲಿ ಕರುಣಿಸಿದ ದೇವರಿಗೆ ನಾನು ಸದಾಕೃತಜ್ಞನೇ. ಹೇಗೋ ಅಯೋಗ್ಯನಾದ ನನಗೆ ನನ್ನ ಅಕ್ಕನು ತೋರಿದ ಪ್ರೀತಿ, ಮಾಡಿದ ಉಪಚಾರ, ನೀಡಿದ ಸಹಾಯ ಇವುಗಳನ್ನು ನೆನೆಸಿ ನೆನೆಸಿ ಇಂದಿಗೂ ನಾನು ನಾಚಿಕೆಯಿಂದ ತಲೆ ತಗ್ಗಿಸುತ್ತೇನೆ. ಆಕೆಯನ್ನು ನಾನು ಬಿಟ್ಟು ಬಂದು ಎಷ್ಟೋ ಕಾಲವಾಯಿತು ಕರುಣಾಳು ಪರಮಾತ್ಮನು ಅವಳನ್ನು ಸುಖಸಂತೋಷಗಳಿಂದ ಇಟ್ಟಿರುವನೆಂದೇ ನನ್ನ ನಂಬಿಕೆ.

ಅಕ್ಕನ ಮನೆಯಲ್ಲಿ ಆನಂದದಿಂದ ತಿಂಗಳುಗಳು ಉರುಳಿದುವು. ಇಷ್ಟಾದರೂ ನನ್ನ ಪೂರ್ವಸ್ಥಿತಿಯನ್ನು ನೆನೆಸಿ, ನಾಚಿ, ನಾನು ಹೊರಗಡೆ ತಲೆಯಿಡುತ್ತಿರಲಿಲ್ಲ. ಜನರೊಂದಿಗೆ ಬೆರೆಯುತ್ತಿರಲಿಲ್ಲ. ಯಾರಲ್ಲಿಯೂ ಮಾತನಾಡುತ್ತಿರಲಿಲ್ಲ. ನಾನಾಯಿತು; ಅಕ್ಕನಾಯಿತು; ಊಳಿಗದವರಾಯಿತು. ಸಾಕಷ್ಟು ಶಾಂತಿ ವಿಶ್ರಾಂತಿಗಳನ್ನು ಪಡೆದದ್ದೂ ಆಯಿತು.

ಒಂದಾನೊಂದು ದಿವಸ ನಾನು ಸಂತೃಪ್ತಿಯಾಗಿ ಊಟಮಾಡಿ ಸುಖವಾಗಿ ಮಂಚದ ಮೇಲೆ ಪವಡಿಸಿದ್ದೆ. ಆಗ ನನ್ನ ಅಕ್ಕನು ಬಂದು ನನ್ನನ್ನು ಮಾತನಾಡಿಸಿದಳು. ಹಲವಾರು ಹಿತವಾಕ್ಯಗಳನ್ನು ನನಗೆ ನುಡಿದಳು. ಎಚ್ಚರಿಕೆಯ ಮಾತುಗಳನ್ನು ಹೇಳಿದಳು :

"ನನ್ನ ನಚ್ಚಿನ ಸಹೋದರ! ನಾನಾಡಬಯುಸಿರುವ ಯಾವ ಮಾತನ್ನೂ ನೀನು ತಪ್ಪಾಗಿ ಎಣಿಸದಿರು. ಎಷ್ಟೋ ವರ್ಷಗಳನಂತರ ಅಗಲಿದ ನಾವಿಬ್ಬರೂ ದೇವರ ಕೃಪೆಯಿಂದ ಮತ್ತೆ ಸಂಧಿಸಿದೆವು. ನೀನು ನನ್ನಲ್ಲಿ ಬಂದು ನಾಲ್ಕಾರು ತಿಂಗಳು ನಿಂತುದು; ನನ್ನ ಅಲ್ಪ ಉಪಚಾರದಿಂದಲೇ ತೃಪ್ತಿಹೊಂದಿದುದು; ಇವೆಲ್ಲ ನನಗೆ ಬಹಳ ಆನಂದ ತಮ್ಮಾ! ನಿನ್ನನ್ನು ನೋಡಿದಾಗಲೆಲ್ಲ ಗತಿಸಿದ ನಮ್ಮ ತಾಯ್ತಂದೆಯರ ನೆನಪೇ ನನಗುಂಟಾಗುತ್ತಿದೆ. ನೀನೆಷ್ಟು ದಿವಸ ನನ್ನ ಬಳಿಯಲ್ಲೇ ಉಳಿದರೂ ನನಗೆ ಬೇಸರಬಾರದು. ಆದರೆ ಮಗು! ಈ ಪ್ರಪಂಚದ ರೀತಿನೀತಿಗಳೇ ಬೇರೆ. ಅವುಗಳನ್ನು ತಕ್ಕಷ್ಟು ಗ್ರಹಿಸಬಹುದಾದ ಬುದ್ಧಿಯೂ ವಯಸ್ಸೂ ನಿನಗೆ ಪ್ರಾಪ್ತವಾಗಿದೆ. ನೋಡು ತಮ್ಮಾ! ದೇವರು ಮನುಷ್ಯರನ್ನು ಸೃಷ್ಟಿಸಿದಂತೆಯೇ ಕೆಲಸವನ್ನೂ ಸೃಷ್ಟಿಸಿದ್ದಾನೆ. ಪ್ರತಿಯೊಬ್ಬ ಸ್ತ್ರೀಪುರುಷರೂ ಜೀವದೊಂದಿಗಿರುವಾಗ ತಮತಮಗೆ ಸಾಧ್ಯವಾದ ನ್ಯಾಯಸಮ್ಮತವಾದ ಯಾವುದಾದರೂ ಕೆಲಸವನ್ನು ಮಾಡುತ್ತಿರಬೇಕು. ಅದರಲ್ಲಿಯೂ ಪುರುಷರು ಸೋಮಾರಿಗಳಾಗಿ ಮನೆಯಲ್ಲಿ ಕುಳಿತು ಕಾಲಹರಣ ಮಾಡಬಾರದು. ಕೈಲಾದ ಕೆಲಸವನ್ನು ಸಾಮರ್ಥ್ಯದಿಂದ ಮಾಡಿ ಸಿದ್ಧಿ ಹೊಂದಬೇಕು. ಮಾನವರು ಹೊಟ್ಟೆಯನ್ನು ಹೊರೆದುಕೊಳ್ಳಲೆಂದೇ ದೇವರು ಎಷ್ಟೋ ಬಗೆ ಯುಕ್ತವಾದ ಕೆಲಸಗಳನ್ನೂ ಸೃಷ್ಟಿಸಿದ್ದಾನೆ. ಅವರವರ ಶಕ್ತಿಯುಕ್ತಿ ಸಾಮರ್ಥ್ಯಗಳಿಗೆ ಅನುಗುಣವಾಗಿ ಪ್ರತಿಯೊಬ್ಬರೂ ಕೆಲಸ ಮಾಡಲೇ ಬೇಕು. ಹದಿನೆಂಟು ಸಹಸ್ರ ಜೀವರಾಶಿಗಳೂ ಒಂದಲ್ಲ ಒಂದು ಬಗೆಯಲ್ಲಿ ದುಡಿದು ತಿನ್ನಬೇಕೆಂದು ಸೃಷ್ಟಿಕರ್ತನ ಸಂಕಲ್ಪವಿದೆ. ದುಡಿತಕ್ಕೆ ಪಾಲುಮಾರಿ ಸೋಮಾರಿಗಳಾಗಿರುವವನನ್ನು ಕಂಡು ಮಾನವರು ತಿರಸ್ಕಾರಭಾವದಿಂದ ಕಂಡಾರು. ದೇವರೂ ಅಂತಹವರಿಗೆ ನೆರವಾಗಲಾರನು. ನೀನು ಯಾವುದಾದರೊಂದು ಕೆಲಸದಲ್ಲಿ ಉದ್ಯುಕ್ತನಾಗಿ ದುಡಿದು ಸಂಪಾದಿಸದಿದ್ದರೆ ಈ ನಗರ ನಿವಾಸಿಗಳು ನಿನ್ನನ್ನು ಕಂಡು ಅವಹೇಳನ ಮಾಡಿಯಾರು. ಅದಕ್ಕೆ ಎಡೆಗೊಡುವುದು ಸರಿಯಲ್ಲ. ನೀನು ಎಷ್ಟು ಕಾಲಕ್ಕೂ ಹೀಗೆಯೇ ಕುಳಿತಿದ್ದರೆ:

"ಅದೋ ಸೋಮಾರಿ! ಕೈಲಾಗದ ಹೇಡಿ! ಅವಿವೇಕಿ! ಪ್ರಬಲ ಪ್ರಮಾಣದ ತನ್ನ ಪಿತ್ರಾರ್ಜಿತವನ್ನೆಲ್ಲಾ ಪೋಲುಮಾಡಿ, ಭಾವನ ಕೈ ಭಿಕ್ಷೆಗೆ

ಬಾಯಿಬಾಯಿಬಿಡುವ ಭಂಡ ಇವನು!" ಎಂದು ಮುಂತಾಗಿ ಹಿಡಿತವಿಲ್ಲದೆ ಹಂಗಿಸಿಯಾರು. ಅವರ ತಾತ್ಸಾರವನ್ನು ಕಂಡು, ಕಿವಿಯೊರ ಕೇಳಿ, ನಾನು ಅಳಲಿನ ಕಡಲಿನಲ್ಲಿ ಮುಳುಗಬೇಕಾದೀತು. ಬೇಡ, ತಮ್ಮಾ! ಇದರಿಂದ ನಾವಿಬ್ಬರೂ ಅವಮಾನವನ್ನು ಅನುಭವಿಸುವ ಮಾತಂತಿರಲಿ. ನಮ್ಮನ್ನು ಹೆತ್ತವರ ಕೀರ್ತಿಗೆ ಕಳಂಕವು ತಟ್ಟೀತೆಂಬುದನ್ನು ಮರೆಯದಿರು. ನಿನ್ನನ್ನು ಕಂಡರೆ ನನಗೆ ಬೇಸರವಾಯಿತೆಂದಾಗಲಿ, ಹೇಗಾದರೂ ನನ್ನ ಮನೆಯಿಂದ ನಿನ್ನನ್ನು ಅಟ್ಟಿಬಿಡಬೇಕೆಂದು ನಾನು ಬಯಸುವೆನೆಂದಾಗಲಿ, ನೀನು ಭಾವಿಸ ಬಾರದು. ಪ್ರತಿಯಾಗಿ ನಿನ್ನಲ್ಲಿ ನನಗೆ ಅಪಾರ ಪ್ರೇಮವುಂಟು. ಆ ಪ್ರೇಮವೇ ನನ್ನಿಂದ ಈ ಮಾತುಗಳನ್ನಾಡಿಸುತ್ತಿರುವುದು. ನೀನು ಸದಾ ನನ್ನ ಹೃದಯ ಮಂಟಪದ ಸಮೀಪದಲ್ಲೆ ಇರುವೆ. ನನ್ನ ಚರ್ಮವನ್ನು ಬೇಕಾದರೂ ಸುಲಿದು ನಿನ್ನ ಕಾಲಿಗೆ ಚಡಾವು ಹೊಲಿಸಿಕೊಡಲು ನಾನು ಸಿದ್ಧಳಿದ್ದೇನೆ. ಏಳು ತಮ್ಮಾ! ಎದ್ದೇಳು. ಯಾವುದಾದರೂ ಒಂದು ವ್ಯಾಪಾರ ಮಾಡಲು ಮನಸ್ಸು ಮಾಡು. ವರ್ತಕ ವಂಶದಲ್ಲಿ ಹುಟ್ಟಿ ಬೆಳೆದ ನಿನಗೇನೂ ಬುದ್ಧಿಗೆ ಕಡಿಮೆ ಇಲ್ಲ. ಕಾಲವು ಎಂದಿಗೂ ಹೀಗೆಯೇ ಇರಲಾರದು. ಹುಟ್ಟಿಸಿದ ದೇವರು ಎಷ್ಟು ಕಾಲಕ್ಕೂ ಕಣ್ಣುಮುಚ್ಚಿಕೊಂಡಿರಲಾರ. ಸುಯೋಗವು ಲಭಿಸಿ ನೀನು ಮತ್ತೆ ಸುದಿನಗಳನ್ನು ಕಾಣಲಾದೀತು. ಶ್ರೀಮಂತನಾಗಿ ಸುಖಸಂತೋಷ ಸಮಾಧಾನ ಗಳನ್ನು ಪಡೆಯಲೂ ಬಹುದು."

ನಿರ್ಮಲಾಂತಃಕರಣದಿಂದ ಈ ಮಾತುಗಳನ್ನು ಆಡುತ್ತಿದ್ದಂತೆ ನನ್ನ ಹಿತೈಕಾಂಕ್ಷಿಯಾದ ನನ್ನ ಅಕ್ಕನು ಧಾರಾಕಾರವಾಗಿ ಕಂಬನಿಗರೆಯುತ್ತ "ಏನು ಹೇಳುವೆ? ಹೇಳಿ ಬಿಡು; ಆಗಬಹುದೇ?" ಎಂದು ಕೇಳಿದಳು. ಅಕ್ಕನ ಕಣ್ಣೀರನ್ನು ನನ್ನ ಕರವಸ್ತ್ರದಿಂದೊರೆಸುತ್ತ ನಾನು ಹೇಳಿದೆ:

"ನನ್ನಪ್ರಾಣಸರ್ವಸ್ವಳಾದ ಪ್ರಿಯಸಹೋದರಿ! ನಿನ್ನ ಮಾತುಗಳನ್ನು ತಪ್ಪಾಗಿ ಅರ್ಥಮಾಡಿಕೊಳ್ಳುವ ಮೂಢನೇ ನಾನು? ಜಗತ್ತೇ ನನ್ನನ್ನು ತ್ಯಜಿಸಿ ತಾತ್ಸಾರ ತೋರಿದಾಗ ನೀನಲ್ಲವೆ ನನ್ನನ್ನು ಇರುಕೈಗಳಿಂದಲೂ ಸ್ವಾಗತಿಸಿ, ತಬ್ಬಿ, ಮುದ್ದಾಡಿ, ಸಂತಸವನ್ನು ನೀಡಿದ್ದು? ನಿನ್ನ ಮಾತನ್ನು ಧಿಕ್ಕರಿಸಿ

ಧೂರ್ತನಾಗಲೇ? ಬೇಡ, ಬೇಡ; ತಾಯಿ! ನೀನು ನನ್ನ ಸಹೋದರಿ ಮಾತ್ರ ವಲ್ಲ! ತಾಯಸಮಾನ! ಹೆಚ್ಚು ಹೇಳಲೇನಿರುವುದು? ನೀನಾಡಿದಂತೆ ನಡೆದು ಕೊಳ್ಳುವುದೇ ನನ್ನ ಉದ್ದೇಶವಾಗಿದೆ. ಹೇಳಮ್ಮಾ, ಹೇಳು. ನಿನ್ನ ಆಣತಿ ಯನ್ನು ನಾನು ತಲೆಯಮೇಲೆ ಹೊತ್ತು ನಿರ್ವಹಿಸುವೆನು."

ನನ್ನ ಮಾತುಗಳನ್ನು ಕೇಳಿ ನನ್ನ ಅಕ್ಕನಿಗೆ ಅತುಳಾನಂದವಾಯಿತು. ಆಕೆ ನನ್ನನ್ನು ಪರಮ ಪ್ರೀತಿಯಿಂದ ತಬ್ಬಿ ಮುದ್ದಾಡಿದಳು. ಬಳಿಕ ತನ್ನ ಆಪ್ತಸೇವಕನನ್ನು ಕರೆದಳು. ನೂರಾರು ಚಿನ್ನದ ಮೊಹರುಗಳುಳ್ಳ ನೂರು ಹೊನ್ನಿನ ಚೀಲಗಳನ್ನು ತರಿಸಿ ನನ್ನೆದುರಿಗೆ ಇರಿಸಿ ಹೇಳಿದಳು. "ಮಗು! ಹಿಡಿ; ಇದೆಲ್ಲ ನಿನಗೆ ಸೇರಿದುದು. ಇದನ್ನು ಕೊಂಡುಹೋಗಿ ಬಜಾರಿನಲ್ಲಿ ನಿನಗೆ ಬೇಕಾದ ಯಾವ ವ್ಯಾಪಾರದ ವಸ್ತುವನ್ನಾದರೂ ಕೊಂಡುಕೋ. ಇಷ್ಟರಲ್ಲೇ ಒಂಟೆಮೇಲೆ ಸರಕುಗಳನ್ನು ಹೇರಿ ವ್ಯಾಪಾರಿಗಳು ಡಮಾಸ್ಕಸ್ ಕಡೆ ಹೊರಡುವರೆಂದು ನನಗೆ ಸಮಾಚಾರವು ತಿಳಿಯಿತು. ನೀನೂ ಅವರನ್ನು ಹಿಂಬಾಲಿಸು. ನಿನ್ನ ಸರಕುಗಳನ್ನು ಅವರಲ್ಲಿ ಯಾರಾದರೊಬ್ಬ ನಂಬಿಕಸ್ಥರಿಗೆ ಒಪ್ಪಿಸಿ ಲಾಭಕ್ಕೆ ಮಾರಿಸು. ಅಥವಾ ನೀನೇ ಮಾರಿ ಲಾಭ ಸಂಪಾದಿಸಿಕೋ. ಮೂಲಧನವನ್ನು ಮಾತ್ರ ಎಚ್ಚರಿಕೆಯಿಂದ ಕಾಪಾಡಿಕೋ. ಬೇಕಾದರೆ ನೀನು ಹಡಗು ಹತ್ತಿ ನಿನ್ನ ಸಾಮಾನುಗಳೊಂದಿಗೆ ಹೋಗು. ಇಲ್ಲದಿದ್ದರೆ ಅತ್ಯುತ್ತಮ ಅರಬ್ಬಿ ಕುದುರೆಯನ್ನು ಕೊಡಿಸುತ್ತೇನೆ. ಅದನ್ನು ಹತ್ತಿ ದಾರಿಪ್ರಯಾಣ ಮಾಡು" ಎಂದಳು.

ನನ್ನ ಸಂತೋಷವನ್ನು ಹೇಳತೀರದು. ನಾನಾಗಿ ನನ್ನ ಅಕ್ಕನನ್ನು ಹಣ ಕೇಳುವುದಕ್ಕೆ ನನಗೆ ಒಡಂಬಡದೆ ಕೆಲಕಾಲ ಒದ್ದಾಡುತ್ತಿದ್ದೆ. ಈಗ ಅವಳಾಗಿ ನನ್ನ ಇಚ್ಛೆಗೆ ಒಂದಕ್ಕೆ ಹತ್ತುಪಾಲು ಹೆಚ್ಚಾಗಿ ಹಣವನ್ನು ತಂದು ನನ್ನ ಮುಂದಿರಿ ಸಿದುದು ದೈವಮಾಯೆಯಲ್ಲದೆ ಮತ್ತೇನು? ನಾನು ಹಿಗ್ಗಿದೆ. ಕೊನೆಗೂ ದೈವಕ್ಕೆ ಕರುಣೆಯುಂಟೆಂದರಿತು ಕರುಣಾಳು ಪರಮಾತ್ಮನನ್ನು ಪರಿಪರಿಯಾಗಿ ಕೊಂಡಾಡಿದೆ. ನನ್ನ ಅಕ್ಕನು ನನಗೆ ಉತ್ತಮವಾದ ಉಡುಪುಗಳನ್ನು ಸಿದ್ಧಪಡಿಸಿ ಕೊಟ್ಟಳು.

ಅಕ್ಕನು ಆದರಿಂದ ಅನುಗ್ರಹಿಸಿಕೊಟ್ಟ ಧನವೊತ್ತದಲ್ಲಿ ಸ್ವಲ್ಪಭಾಗವನ್ನು ದಾರಿವೆಚ್ಚಕ್ಕೆ—ಕೈಕಾವಲಿಗೆ ಉಳಿಸಿಕೊಂಡೆ. ಉಳಿದ ಭಾಗದಲ್ಲಿ ಬಜಾರಿನ

ಉತ್ತಮ ಸರಕುಗಳನ್ನು ಕೊಂಡೆ. ಒಂಟೆಗಳೊಂದಿಗೆ ಹೊರಟ ವರ್ತಕರಲ್ಲಿ ನಂಬಿಕೆಗೆ ಪಾತ್ರನಾದ ಒಬ್ಬ ವರ್ತಕನಿಗೆ ನಾನು ಕೊಂಡ ಸರಕುಗಳನ್ನು ಮಾರಾಟಕ್ಕೆಒಪ್ಪಿಸಿದೆ ಹೆಚ್ಚಿನ ಲಾಭಕ್ಕೆ ಸರಕನ್ನು ಮಾರಿ ತನ್ನ ಭಾಗದ ಪಾಲನ್ನು ಉಳಿಸಿಕೊಂಡು ಉಳಿದ ಅಸಲು ಲಾಭಗಳನ್ನು ನನಗೆ ಡಮಾಸ್ಕಸ್ಸಿನಲ್ಲಿ ಕೊಡಬೇಕೆಂದು ಒಪ್ಪಿಸಿದೆ. ನಾನು ಕುದುರೆ ಹತ್ತಿ ಭೂಮಾರ್ಗವಾಗಿ ಡಮಾಸ್ಕಸ್ಸನ್ನು ಸೇರುವುದಾಗಿ ಅವನಲ್ಲಿ ಹೇಳಿದೆ.

ನಾನು ಹೊರಡುವದಿನವು ಸಮೀಪಿಸಿದಂತೆಲ್ಲ ಅಕ್ಕನನ್ನು ಬಿಟ್ಟು ಅಗಲ ಬೇಕಲ್ಲ ಎಂಬ ಚಿಂತೆ ನನಗೆ ಅಧಿಕರಿಸುತ್ತ ಬಂದಿತು. ಅಂತೆಯೇ ನನ್ನನ್ನು ಅಗಲುವ ಕಾಲವು ಸಮೀಪಿಸಿತಲ್ಲ ಎಂದು ನಮ್ಮ ಅಕ್ಕನಿಗೆ ಚಿಂತೆ. ಆದರೂ ಆಕೆ ತನ್ನ ಚಿಂತೆಯನ್ನು ಹೃದಯದಲ್ಲೇ ಅನುಭವಿಸಿದಳು. ಹೊರಗೆ ಸಂತೋಷ ವಾಗಿದ್ದಂತೆ ನಟಿಸುತ್ತಿದ್ದಳು. ನಾನು ಆಕೆಯಿಂದ ಅಗಲಿ ಹೋಗುವುದರಿಂದ ಅಕೆಗೆ ದುಃಖವೆಂಬುದನ್ನು ಹೊರಗೆ ತೋರ್ಪಡಿಸಿಕೊಂಡರೆ ಎಲ್ಲಿ ನಾನು ನನ್ನ ಕರ್ತವ್ಯದಿಂದ ವಿಮುಖನಾದೇನೋ ಎಂಬ ಭಯ ಆಕೆಗೆ. ಆದುದರಿಂದಲೇ ತನ್ನ ದುಃಖವನ್ನು ಆಕೆ ಒಳಗೇ ಅಡಗಿಸಿ ಇಟ್ಟುಕೊಂಡಳು.

ಅಂತೂ ನಾನು ಡಮಾಸ್ಕಸ್ಸಿಗೆ ಹೊರಡ ಬೇಕಾದ ದಿನವೂ ಬಂದಿತು. ನನ್ನ ಅಕ್ಕನು ಅಂದು ನನ್ನಮೇಲೆ ವರ್ಷಿಸಿದ ಪ್ರೇಮನ್ನು ಅಳೆಯಲಾಗದು. ಸಿಹಿಸಿಹಿ ಯಾದ ಊಟಗಳನ್ನು ಮಾಡಿ ಬಡಿಸಿದಳು. ತಾನೆ ಉತ್ತಮವೂ ಶುಭ್ರವೂ ಆದ ಬಟ್ಟೆಗಳನ್ನು ನನಗೆ ಉಡಿಸಿತೊಡಿಸಿದಳು. ನನ್ನ ಕಾಲಿಗೆ ವೈಜೋಡನ್ನು ಕೈಯಾರೆ ಹಾಕಿದಳು. ನನ್ನನ್ನು ಮುತ್ತಿಟ್ಟು ಕಂಬನಿ ಸುರಿಸಿದಳು. ಕುದುರೆಯ ಜೀನಿನ ಒಂದುಕಡೆ ನೀರಿನ ಹೂಜಿಯನ್ನೂ ಇನ್ನೊಂದುಕಡೆ ದ್ರಾಕ್ಷಿ, ಖರ್ಜೂರ ಮುಂತಾದುವುಗಳನ್ನೊಳಗೊಂಡ ಹಣ್ಣಿನ ಚೀಲವನ್ನೂ ಕಟ್ಟಿದಳು. ಕೊನೆಯ ದಾಗಿ ನನ್ನನ್ನು ತಬ್ಬಿಕೊಂಡು, ತಲೆಗೂದಲನ್ನು ನೇವರಿಸಿ ಕುದುರೆಯ ಮೇಲೆ ಹತ್ತಿಸಿದಳು. ಕಡೆಗೆ ಗದ್ಗದ ಸ್ವರದಲ್ಲಿ "ಹೋಗಿ ಬಾ ನನ್ನ ಕಂದ! ದೇವರು ನಿನಗೆ ನೆರವಾಗಿರಲಿ!" ಎನ್ನುತ್ತ ಕಂಬನಿಗರೆದು ಮನೆಯೊಳಕ್ಕೆ ಓಡಿದಳು.

ಇಂತಹ ಪ್ರೇಮಮಯ ಸಹೋದರಿಯಿಂದ ಬೀಳ್ಕೊಂಡು ನಾನು ಕುದುರೆ ಸವಾರಿ ಮಾಡುತ್ತ, ಆಯಾಸವಾದಾಗ ಅಲ್ಲಲ್ಲಿ ನಿಂತು ವಿಶ್ರಮಿಸಿಕೊಳ್ಳುತ್ತ, ಕೊನೆಗೆ ಡಮಾಸ್ಕಸ್ ನಗರವನ್ನು ಸೇರಿದೆ.

## ೮

ನನ್ನ ಕುದುರೆ ಅತ್ಯುತ್ತಮವಾದದ್ದು ಎಂದು ಮೊದಲೇ ಹೇಳಿದೆನಲ್ಲವೇ ? ಅದು ನಾಗಾಲೋಟದಿಂದ ಓಡಿತು. ಎರಡೆರಡು ದಿವಸದ ಪ್ರಯಾಣವನ್ನು ಒಂದೊಂದೇ ದಿವಸದಲ್ಲಿ ಮುಗಿಸಿ ನಾನು ಡಮಾಸ್ಕಸ್ಸನ್ನು ಅತಿಶೀಘ್ರವಾಗಿ ತಲಪಿದೆ. ನಗರದ್ವಾರಕ್ಕೆ ನಾನು ಬಂದು ಸೇರಿದಾಗ ನಿಶಿರಾತ್ರಿಯಾಗಿತ್ತು ಆ ಅಪರವೇಳೆಯಲ್ಲಿ 'ಅಪರಚಿತರನ್ನು ನಗರದೊಳಕ್ಕೆ ಬಿಡಲಾಗದು' ಎಂದು ದ್ವಾರಪಾಲಕರು ನನ್ನನ್ನು ತಡೆಗಟ್ಟಿದರು. 'ಕುದುರೆಗೆ ಹುಲ್ಲುಬೇಕು, ಹುರುಳಿಬೇಕು;' ಎಂದು ಮುಂತಾಗಿ ಏನೇನೋ ಹೇಳಿಕೊಂಡಿದೆ, ಆ ಮೂರ್ಖರು ಒಪ್ಪಲಿಲ್ಲ. ಕಡೆಗೆ ವಿಧಿಯಿಲ್ಲದೆ ಆರಾತ್ರಿಯೆಲ್ಲ ನಾನು ಕೋಟೆಯ ಹೊರಗೆ ನಿಲ್ಲಬೇಕಾಯಿತು. ಕುದುರೆಯನ್ನು ಕಟ್ಟಿಹಾಕಿ ನಿದ್ರೆಮಾಡೋಣವೆಂದರೆ ಕಳ್ಳ ಕಾಕರದ ಭೀತಿಬೇರೆ. ಸರಿ; ಮಲಗಿದರೆ ನಿದ್ರೆಹತ್ತೀತೆಂಬ ಭಯದಿಂದ ಅತ್ತಿತ್ತ ಥಳಾಯಿಸುತ್ತಿದ್ದೆ. ಆಗ ನಾಕಂಡುದೇನು ?

ನಿಶಿರಾತ್ರಿ ಕಳೆದು ಒಂದುಝಾಮವಾಗಿದ್ದ ಆ ವೇಳೆಯಲ್ಲಿ ಕೋಟೆಯ ಮೇಲಿನಿಂದ ನಾನು ನಿಂತಿದ್ದ ಭಾಗದಲ್ಲಿ ಒಂದು ಪೆಟ್ಟಿಗೆ, ಇಳಿದು ಬಂದಿತು. ನನ್ನ ಆಶ್ಚರ್ಯಕ್ಕೆ ಕೊನೆಮಿತಿಯಿರಲಿಲ್ಲ. 'ಪೆಟ್ಟಿಗೆಯೊಳಗೆ ಏನಿರಬಹುದು?' ಎಂದು ನನಗೆ ಕುತೂಹಲ, ನನ್ನ ಪರಿಸ್ಥಿತಿಯನ್ನು ಕಂಡು ಕರುಣೆಯಿಂದ ಪರಮಾತ್ಮನು ಚಿನ್ನದ ಮೊಹರುಗಳನ್ನೇನಾದರೂ ಆ ಪೆಟ್ಟಿಗೆಯಲ್ಲಿ ತುಂಬಿ ಕಳುಹಿಸಿರುವನೋ ? ಇದು ನನಗೆ ಲಭಿಸುವಯೋಗವಿದ್ದುದರಿಂದಲೇ ದ್ವಾರಪಾಲಕರು ನನ್ನನ್ನು ಒಳಗೆ ಬಿಡದೆ ತಡೆದಿರಬಹುದೇ? ಆತುರಾತುರದಿಂದ ನಾನು ಪೆಟ್ಟಿಗೆ ಇಳಿಸಲ್ಪಟ್ಟ ಸ್ಥಳಕ್ಕೆ ಓಡಿದೆ ಧೈರ್ಯವನ್ನುಎರಡು ಕೈಗಳಲ್ಲೂ ಅಪ್ಪಿಹಿಡಿದು ನಾನು ಪೆಟ್ಟಿಗೆಯ ಮುಚ್ಚಳವನ್ನು ಬಿಚ್ಚಿದೆ. ಒಳಗಿದ್ದುದೇನು ? ಒಬ್ಬ ಸುಂದರ ನವ ಮೋಹನ ತರುಣಿಯ ಶರೀರ. ಮುಖಕ್ಕೆ ಬೆಳಕನ್ನು ಹಿಡಿದು ನೋಡಿದೆ.

ಆ ಸುಂದರವನಿತೆಯ ಎದೆಯಲ್ಲಿ ಅಲ್ಲಲ್ಲಿ ಗಾಯ—ಕತ್ತಿಯ ಗಾಯ! ರಕ್ತವು ಚಿಮ್ಮುತ್ತಿದ್ದಿತು. ಸುಂದರಿಯ ಮೂಗಿಗೆ ಬೆರಳು ಹಿಡಿದು ನೋಡಿದೆ. ಇನ್ನೂ ಉಸಿರಾಡುತ್ತಿತ್ತು. ಆದರೆ ಅವಳ ಶರೀರವು ರಕ್ತದಲ್ಲಿ ತೊಯ್ದಿತ್ತು.

ಆ ಮನಮೋಹಕ ತರುಣಿ ಆಗ ಹೇಳಿದಳು:

"ಪಾಪಿ! ನಂಬಕದ್ರೋಹಿ! ನರರಾಕ್ಷಸ! ನನ್ನ ಅಸಾಧಾರಣ ಉಪಕೃತಿಗಳಿಗೆ ಇದೇನೇ ಕೃತಜ್ಞತೆ! ಆಯಿತಾಯಿತು; ಇನ್ನೊಂದುಸಲ ಇರಿದು ನನ್ನನ್ನು ಕೊಂದೇ ಬಿಡು. ನಿನ್ನ ಪಾಪದ ಹೊರೆ ತುಂಬಿ ಹೋಗಲಿ. ನೀನೂ ಒಂದು ದಿನ ದೇವರ ದಯದಿಂದ ನಿನ್ನ ನೀಚಕೃತ್ಯಕ್ಕೆ ತಕ್ಕಪ್ರಾಯಶ್ಚಿತ್ತ ಪಡೆಯದೆ ಇರಲಾರೆ" ನವಮೋಹನಾಂಗಿಯ ಪರಸ್ಥಿತಿಯು ಚಿಂತಾಜನಕವಾಗಿದ್ದಿತು. ಇಂತಹ ಸುಕೋಮಲ ಶರೀರಿವನ್ನು ಕೂರಲಗಿನ ಕತ್ತಿಯಿಂದ ಘಾಯಗೊಳಿಸಿದ ದುರಾತ್ಮನು ಸಿಕ್ಕುವನೆ ಅವನ ಎದೆಯನ್ನು ಬಗಿದು ಬಿಸಿನೆತ್ತರನ್ನು ಸುರಿಸಿಬಿಟ್ಟೇನು ಎನ್ನುವಷ್ಟು ಕೋಪವು ನನಗೆ ಉಕ್ಕಿಬಂತು. ಆದರೆ ಈಗ ಅವಸರವಾದ ಕರ್ತವ್ಯ ವೆಂದರೆ ಕೋಮಲಾಂಗಿಗೆ ಏನಾದರೂ ಚಿಕಿತ್ಸೆ ಮಾಡುವುದು. ದೂರದ ಪ್ರಯಾಣಮಾಡಿ ದಣಿದು ಬಂದಿದ್ದೇನೆ. ಅದೋ ಅವೇಳೆ ಅಪರಿಚಿತ ನಗರ. ದ್ವಾರಪಾಲಕರು ಊರೊಳಗೆ ಬಿಡದಾದರು. ಏನುಮಾಡಲಿ?

ಅಷ್ಟರಲ್ಲಿ ಆ ಸುಮನೋಹರ ಸುಂದರಿಯು ಆಡಲಾರದೆ ನಿಶ್ಶಕ್ತಿಯಿಂದ ನಾಲ್ಕು ಮಾತಾಡಿದಳು: ಅವಳು ಮರಣಶಯ್ಯೆಯಲ್ಲಿರುವಂತೆ ತೋರಿತಾದರೂ ಅಂತಹ ಉತ್ಕ್ರಮಣಕಾಲದಲ್ಲಿಯೂ ಅವಳು ಪರಪುರುಷನಾದ ನನ್ನೆದುರಿನಲ್ಲಿ ಲಜ್ಜಾಭರಿತಳಾಗಿಯೇ ವರ್ತಿಸಿದಳು. ಇದನ್ನು ಕಂಡ ನನಗೆ ಆಕೆ ಕುಲಸ್ತ್ರೀ ಯಾಗಿರಬೇಕು; ಉತ್ತಮ ವಂಶಕ್ಕೆ ಸೇರಿದವಳಾಗಿರಬೇಕು ಎಂದನ್ನಿಸಿತು. ಅವಳ ಧ್ವನಿಯು ಉಡುಗಿ ಹೋಗಿದ್ದರೂ ಅದು ಗಾಂಭೀರ್ಯದಿಂದ ಕೂಡಿತ್ತು. ಅವಳು ಹೇಳಿದಳು:

"ಇನ್ನೊಂದರ ಘಳಿಗೆಯಲ್ಲಿ ನನ್ನ ಕುಟುಕು ಜೀವವು ಹಾರಿಹೋಗಬಹುದು. ದೈವವಶಾತ್ತಾಗಿ ನೀನಿಲ್ಲಿಗೆ ಬಂದು ಸೇರಿರುವೆ. ನನ್ನಸುವಳಿದ ಬಳಿಕ ನನ್ನನು

ಶಾಂತವಾದ ಒಂದೆಡೆಯಲ್ಲಿ ಈ ಪೆಟ್ಟಿಗೆಯೊಂದಿಗೆ ಹೂತುಬಿಡು. ನಿನ್ನ ಉಪಕಾರಕ್ಕೆ ದೇವರು ನಿನಗೆ ಕರುಣೆ ತೋರಿಯಾನು."

ಇಷ್ಟರೊಂದಿಗೆ ನನಗೆ ಸಮಾಧಾನವಾಗಲಿಲ್ಲ. ನಾನು ಮತ್ತೆ ಆ ಕೋಮಲೆಯನ್ನು ಕಂಡು

"ಸುಂದರಿ! ನಿನಗೆ ಈ ದುರವಸ್ಥೆ ಬರಲು ಕಾರಣವೇನು? ನಿನ್ನ ಹಂತಕರು ಯಾರು ? ಅವರೆಲ್ಲಿರುವರು ಹೇಳು. ನಿನ್ನಮೇಲೆ ಆಣೆಯಿಟ್ಟು ನಾನವರಮೇಲೆ ಸೇಡು ತೀರಿಸಿಕೊಳ್ಳುತ್ತೇನೆ." ಎಂದೆ.

"ಅಪರಿಚಿತನೇ ! ನನ್ನ ಪರಿಸ್ಥಿತಿಯನ್ನು ಕಂಡೆಯಷ್ಟೆ. ನನ್ನ ಕಂಠವು ಬಿಗಿಯುತ್ತಿದೆ. ಮಾತೂ ಹೊರಡದು. ನಾನು ಹೇಳಿದಂತೆ ನನ್ನನ್ನು ಹೂತುಬಿಡು. ಅಷ್ಟಕ್ಕೆ ನಾನು ನಿನಗೆ ಋಣಿ."

ಮೋಹನಾಂಗಿಯ ಮಾತನ್ನು ಕೇಳಿ ನಾನು ಮರುಗಿದೆ ! ಮನಗುಂದಿದೆ. ಏನುಮಾಡುವುದಕ್ಕೂ ತೋರದೆ ಪೆಟ್ಟಿಯಬಳಿಯೇ ಕುಳಿತೆ. ಸುಂದರಿಯು ಕಣ್ಣುಮುಚ್ಚಿ ಶಾಂತಳಾದಳು. ಉಳಿದ ಆ ರಾತ್ರಿಯೆಲ್ಲ ನಾನು ಕಾವಲು ಕಾದೆ; ತರುಣಿಯು ಜೀವಿಸಿದ್ದಳೋ ಸತ್ತಿದ್ದಳೋ ನನಗೆ ತಿಳಿಯದು. ಅರುಣೋದಯ ವಾಯಿತು. ಪೆಟ್ಟಿಗೆಯೊಳಗೆ ಇಣಿಕಿನೋಡಿದೆ. ಸುಂದರಿಯು ನಿದ್ರಿಸುತ್ತಿದ್ದಳು. ಉಸಿರಾಡುವುದನ್ನುಕೇಳಿ ಸಂತೋಷಗೊಂಡೆ. ಪೆಟ್ಟಿಗೆಗೆ ಒಂದು ಕಂಬಳವನ್ನು ಸುತ್ತಿದೆ; ಕುದುರೆಯಮೇಲೆ ಇರಿಸಿದೆ. ಆವೇಳೆಗೆ ಕೋಟೆ ಬಾಗಿಲು ತೆರೆಯಿತು. ಕುದುರೆ ಹತ್ತಿ ನಿರಾತಂಕವಾಗಿ ನಗರವನ್ನು ಪ್ರವೇಶಿಸಿದೆ.

# ೬

ಪೆಟ್ಟಿಗೆಯನ್ನು ಕುದುರೆಯಮೇಲೆ ಇರಿಸುವುದಕ್ಕೆ ಮುನ್ನ ನಾನು ದೇವೇಶನಲ್ಲಿ ನನ್ನ ಉದಯಕಾಲದ ಪ್ರಾರ್ಥನೆಯನ್ನು ಸಲ್ಲಿಸಿದೆ. "ದೇವ! ದುಸ್ಥಿತಿಯಲ್ಲಿರುವ ಈ ಸುಂದರ ರಮಣಿಯ ಪ್ರಾಣ ಸಂರಕ್ಷಣೆಯು ನಿನಗೆ ಸೇರಿದ್ದು ದಯಾಳು! ಹೇಗಾದರೂಮಾಡಿ ಇವಳ ಪ್ರಾಣವನ್ನು ಉಳಿಸಿ ಕಾಪಾಡು ಪರಮಾತ್ಮ!" ಎಂದು ಮೊರೆಯಿಟ್ಟು ನಗರವನ್ನು ಪ್ರವೇಶಿಸಿದೆ. ಆ ಮುನ್ನ ನಾನು ಡಮಾಸ್ಕಸ್ಸನ್ನು ನೋಡಿದವನಲ್ಲ ಆ ನಗರದಲ್ಲಿ ನನ್ನ ಗುರುತು ಕಂಡವರಾರೂ ಇಲ್ಲ. ಎಲ್ಲೆಲ್ಲೋ ಹುಡುಕಿ, ಏನೇನೋ ಪಾಡುಪಟ್ಟು ಕೊನೆ ಗೊಂದು ಮನೆಯನ್ನು ಬಾಡಿಗೆಗೆ ಗೊತ್ತುಮಾಡಿಕೊಂಡೆ. ಅಲ್ಲಿ ಪೆಟ್ಟಿಗೆಯನ್ನು ಇಳಿಸಿದೆ. ಸಹಾಯಕ್ಕೆ ಜನರನ್ನು ಗೊತ್ತುಮಾಡಿಕೊಂಡೆ. ಸಂದೇಹ ಬಾರ ದಿರಲೆಂದು ಪೆಟ್ಟಿಗೆಯಲ್ಲಿದ್ದವಳನ್ನು ನನ್ನ ಹೆಂಡತಿಯೆಂದು ಹೇಳಿಕೊಂಡೆ. ಪ್ರಯಾಣಕಾಲದಲ್ಲಿ ಒಡವೆಯಾಸೆಗಾಗಿ ಕಳ್ಳರು ಅವಳಮೇಲೆ ಬಿದ್ದು ಅವಳನ್ನು ಘಾಯಪಡಿಸಿದರೆಂದು ಬಣ್ಣಕಟ್ಟಿ ಹೇಳಿದೆ. ನಾನು ಗೊತ್ತುಮಾಡಿದ್ದ ಮನೆ ಯಲ್ಲಿ ನನ್ನ ಸೇವಕಳು ಅತಿ ಶೀಘ್ರದಲ್ಲೇ ಮೆತ್ತನೆಯ ಹಾಸಿಗೆಯೊಂದನ್ನು ಸಿದ್ಧಗೊಳಿಸಿದಳು. ಸುಂದರ ವನಿತೆಯನ್ನು ಪೆಟ್ಟಿಗೆಯಿಂದ ಹೊರಗೆ ತೆಗೆಸಿ ಹಾಸಿಗೆಯಮೇಲೆ ಮಲಗಿಸಿದೆ. ಚೈತನ್ಯಬರುವಂತೆ ಅವಳಿಗೆ ದ್ರಾಕ್ಷಾರಸವನ್ನು ಕುಡಿಸಿದೆ. ಊಳಿಗದ ಹೆಂಗಸು ಅವಳ ಘಾಯಗಳನ್ನು ಎಚ್ಚರಿಕೆಯಿಂದ ತೊಳೆದು ಮುಲಾಮನ್ನು ಹಚ್ಚಿದಳು.

ಆ ವೇಳೆಗೆ ತರುಣಿಯು ಒಮ್ಮೆ ಕಣ್ಣುಬಿಟ್ಟು ನೋಡಿದಳು; ಸುತ್ತಲೂ ನೋಡಿದಳು; ಎದುರಿಗಿದ್ದ ನನ್ನನ್ನೂ ನೋಡಿದಳು. ಅವಳ ವದನಾರವಿಂದವು ಕ್ಷಣಕಾಲ ಪ್ರಫುಲ್ಲಿತವಾಯಿತು. ನನ್ನ ಉಪಚಾರಗಳನ್ನೂ ವ್ಯವಸ್ಥೆಗಳನ್ನೂ ಕಂಡು ಅವಳು ಮನಸ್ಸಿನಲ್ಲಿ ಆನಂದಿಸಿರಬೇಕು. ಅಷ್ಟು ನೋವನ್ನುಂಡರೂ

ಧೈರ್ಯಗೆಡದೆ ಕ್ಷಣಕಾಲ ಹಸನ್ಮುಖಳಾದುದನ್ನು ಕಂಡು ಅವಳೋರ್ವ ರಾಜ ಪುತ್ರಿಯಾಗಿರಬೇಕೆಂದು ನನಗೆ ಭಾಸವಾಯಿತು. ಹೇಗೂ ಈಗ ಬೆಳಕಿನಲ್ಲಿ ಅವಳ ಮುಖವನ್ನು ಕಂಡೆ. ಅಲ್ಲೊಂದು ಇಲ್ಲೊಂದು ಘಾಯದ ಗುರುತು ಕಂಡು ಬಂದರೂ ಕೋಮಲೆಯು ಸರ್ವಲಕ್ಷಣಸಂಪನ್ನೆಯಾದ ಸರ್ವಾಂಗ ಸುಂದರಿ ಎಂದು ನನಗೆ ಬೋಧೆಯಾಯಿತು. ಪರಿತಾಪಕರ ಶಯ್ಯೆಯಲ್ಲಿದ್ದ ಅವಳ ಮುಖಾರ ವಿಂದವನ್ನವಲೋಕಿಸಿದ ನನಗೆ ಇದ್ದಕ್ಕಿದಂತೆ ಎದೆಯಲ್ಲಿ ಝುಗ್ಗೆಂದಿತು, ನಾನು ಮೋಹಪರವಶನಾದೆ. ಈ ಸುಂದರಿಮಣಿಯನ್ನು ಸುಖದ ಹಾದಿ ಮುಟ್ಟಿಸಿ ಅವಳನ್ನು ನನ್ನ ಹೃದಯೇಶ್ವರಿಯನ್ನಾಗಿ ಮಾಡಿಕೊಳ್ಳಬೇಕೆಂದನ್ನಿಸಿತು ನನಗೆ. ನನ್ನ ಸ್ಥಿತಿಯಲ್ಲಿ ಬೇರಾರಿದ್ದರೂ ಅವರಿಗೂ ಹಾಗೆಯೇ ಅನ್ನಿಸುತ್ತಿತ್ತು.

ಆಗ ನನ್ನ ಮನೋದೇವತೆಯು ಎಚ್ಚರಿಸಿದಳು :

"ಮೂಢ! ತರುಣಿಯು ಮರಣಾವಸ್ಥೆಯಲ್ಲಿರುವಾಗ ಪ್ರೇಮಾಸಕ್ತನಾಗಿ ಕಾಲ ಕಳೆಯಲು ನಿನಗೆ ನಾಚಿಕೆಯಾಗುವುದಿಲ್ಲವೆ? ಹೋಗು, ಹೋಗು. ಎಲ್ಲಿದ್ದರೂ ಹುಡುಕಿ ಸುಪ್ರಸಿದ್ಧ ವೈದ್ಯನನ್ನು ಕರೆದು ತಾ. ನೊಂದವಳಿಗೆ ಚಿಕಿತ್ಸೆ ಮಾಡಿಸು."

ಊಳಿಗದ ಹೆಂಗಸನ್ನು ಹೊರಗೆ ಕರೆದು ಅವಳಿಗೆ ಹೇಳಿದೆ:

"ವೈದ್ಯನನ್ನು ಕರೆತರಲು ನಾನು ಹೊರಟಿದ್ದೇನೆ. ನಾನು ಬರುವ ವರೆಗೆ ಆಕೆಯ ಬಳಿ ಕುಳಿತು ಉಪಚಾರಮಾಡು. ಎಚ್ಚರಿಕೆ ಇರಲಿ. ಹಾಲು, ದ್ರಾಕ್ಷಾರಸ, ತಂಪಾದ ಪಾನೀಯಗಳನ್ನು ಆಗಿಂದಾಗ್ಗೆ ಕುಡಿಸುತ್ತ ಧೈರ್ಯದ ಮಾತುಗಳನ್ನು ಆಡುತ್ತ ಆಕೆಯನ್ನು ಉಪಚರಿಸುತ್ತಿರು."

ನಗರದ ನಾನಾ ಭಾಗದಲ್ಲಿ ಸುತ್ತಿದೆ. ಎಲ್ಲೆಲ್ಲೂ ವಿಚಾರಿಸಿದೆ. ಕೊನೆಗೆ ಒಬ್ಬನು ಅಕಸ್ಮಾತ್ತಾಗಿ ನನಗೆದುರಾದ. ನನ್ನ ವೃತ್ತಾಂತವನ್ನು ವಿಚಾರಿಸಿಕೊಂಡ. ನಾನು ಸಾದ್ಯಂತವಾಗಿ ಎಲ್ಲ ವಿಚಾರಗಳನ್ನು ವಿವರಿಸಿದೆ. ಕೊನೆಗವನು ನನ್ನಲ್ಲಿ ಹೇಳಿದ:

"ಅಯ್ಯಾ ! ಈ ನಗರದ ಈಶಾನ್ಯಭಾಗದಲ್ಲಿ, ಮಸೀದಿಯ ಬಲಭಾಗದಲ್ಲಿ ಮಹಮ್ಮದ್ ಈಸಾ ಎಂಬೊಬ್ಬ ಸುಪ್ರಸಿದ್ಧ ಶಸ್ತ್ರ ಚಿಕಿತ್ಸಕನಿದ್ದಾನೆ. ಅವನು

ನೂರಾರು ರಣವ್ಯಾಧಿಗಳನ್ನು ಈವೇಳೆಗೆ ಚಿಕಿತ್ಸೆಗೊಳಿಸಿ ಪ್ರಸಿದ್ಧಿ ಹೊಂದಿದ್ದಾನೆ. ಅವನ ಹಸ್ತಗುಣ ಅಪೂರ್ವವಾದದ್ದು. ಶಸ್ತ್ರಚಿಕಿತ್ಸೆ ಮಾತ್ರವಲ್ಲ. ಅವನು ಮಂತ್ರ ಶಕ್ತಿಯನ್ನೂ ಬಲ್ಲವನು. ಕೊನೆಗೆ ಮೃತರಾದವರನ್ನು ಎಚ್ಚರಿಸಿ ಕುಳ್ಳಿರಿಸಬಲ್ಲ ಮಹಾ ಮೇಧಾವಿ ಅವನು. ಅವನಬಳಿ ಹೋಗು. ನಿನ್ನ ಪತ್ನಿಯನ್ನು ಅವನು ಗುಣಪಡಿಸಿಯಾನು."

ಕೋಲು ಬಯಸಿದವನಿಗೆ ಕೋದಂಡವೇ ಸಿಕ್ಕಂತಾಯಿತು. ನನ್ನ ಕುದುರೆಯನ್ನು ನಾಗಾಲೋಟದಿಂದ ಈಶಾನ್ಯದ ಕಡೆ ಓಡಿಸಿಕೊಂಡು ಹೋದೆ. ಮಸೀದಿಯು ಎದುರಾಯಿತು. ಅದರ ಬಲಭಾಗದಲ್ಲಿ ಒಂದು ಜಗುಲಿಯ ಮೇಲೆ ತಂಬಾಕು ಸೇದುತ್ತ ಓರ್ವ ಅಪರಿಚಿತನು ಕುಳಿತಿದ್ದ. ನನ್ನನ್ನು ಕಂಡು 'ಯಾರನ್ನು ಹುಡುಕುತ್ತೀರಿ?' ಎಂದು ಅವನಾಗಿ ಕೇಳಿದ. 'ಮಹಮ್ಮದ್ ಈಸಾ ಇಲ್ಲಿ ಇರುವರೇ?' ಎಂದು ಕೇಳಿದೆ.

"ನೀವು ಹುಡುಕುತ್ತಿರುವ ಆ ಗುಲಾಮ ನಾನೇ! ಏನಾಗಬೇಕು ಎಂದ.

'ಅವಸರದ ಚಿಕಿತ್ಸೆಯಾಗಬೇಕು' ಎಂದೆ ನಾನು.

'ಆದೀತು' ಎನ್ನುತ್ತ ಈಸಾ ತನ್ನ ಮಗ್ಗುಲಲ್ಲಿದ್ದ ಶಸ್ತ್ರಪೆಟ್ಟಿಗೆಯನ್ನು ಕೈಯಲ್ಲಿ ಹಿಡಿದು ಮೇಲೆದ್ದ.

'ನಿಮ್ಮ ಕುದುರೆ ನನ್ನನ್ನೂ ಹೊತ್ತೀತೇ?' ಎಂದು ಈಸಾ ಕೇಳಿದ.

'ಅದು ಅರಬ್ಬಿ ಥಾಕಣ! ಹೊರುವುದು ಮಾತ್ರವಲ್ಲ. ಹೊತ್ತು ನಾಗಾಲೋಟದಿಂದ ಓಡೀತು. ಹತ್ತಿ ನನ್ನ ಬೆನ್ನಹಿಂದೆ ಕುಳಿತುಕೊಳ್ಳಿ. ಜೀನನ್ನು ಭದ್ರವಾಗಿ ಹಿಡಿಯಿರಿ!'

'ಕುದುರೆ ಸವಾರಿ ನನಗೆ ಹೊಸದಲ್ಲ' ಎಂದ ಈಸಾ.

ಕುದುರೆಯು ಓಡಿತು. ದಾರಿಯುದ್ದಕ್ಕೂ ಧೂಳುಮುಚ್ಚಿಹೋಯಿತು. ಸವಾರನ ಆತುರವನ್ನು ಕಂಡು ದಾರಿಗರು ಬೆರಗಾದರು. ನಾನು ದಾರಿಸಾಗುತ್ತಿದ್ದಂತೆಯೇ ಮೊದಲೇ ಮನಸ್ಸಿನಲ್ಲಿ ಆಲೋಚಿಸಿ ನಿರ್ಧರಮಾಡಿಕೊಂಡಿದ್ದಂತೆ ಕಲ್ಪನೆಯ ಕಥೆಯನ್ನು ಈಸಾನಿಗೆ ಹೇಳಿದೆ:

“ವೈದ್ಯ ಮಹಾಶಯ! ನಮ್ಮದು ಈ ಊರಲ್ಲ. ನಾನು ಏಮರ್ಾ ರಾಷ್ಟ್ರಕ್ಕೆ ಸೇರಿದವನು. ವ್ಯಾಪಾರವೇ ನನ್ನ ಉದ್ಯೋಗ. ಮಾರಾಟಕ್ಕೆ ಸರಕುಗಳನ್ನು ಕಳುಹಿಸಿಕೊಟ್ಟು ಈದಿವ್ಯಾಶ್ವವನ್ನು ಹತ್ತಿ ಹೊರಟೆ. ನನ್ನ ಪತ್ನಿಗೆ ನನ್ನನ್ನು ಕಂಡರೆ ಪರಮ ಪ್ರೀತಿ. ಬೇಡ ಎಂದು ಬೇಕಾದಷ್ಟು ಬೇಡಿದೆ. ಆದರೆ ಅವಳು ಕೇಳಿಲಿಲ್ಲ. ಬಂದೇ ಬರುತ್ತೇನೆ ಎಂದು ಹಠತೊಟ್ಟಳು. ಆಗಲಿ ಎನ್ನುತ್ತ ಅವಳನ್ನೂ ಕುದುರೆಯಮೇಲೆ ಕೂಡಿಸಿಕೊಂಡು ಹೊರಟೆ. ಅಲ್ಲಲ್ಲಿ ತಂಗುತ್ತ ಆಯಾಸ ಪರಿಹಾರ ಮಾಡಿಕೊಂಡು ಬಹು ದಿನಗಳ ಪ್ರಯಾಣಮಾಡಿ ಕೊನೆಗೆ ಈ ಪ್ರಾಂತ್ಯದ ಸಮೀಪಕ್ಕೆ ನಿನ್ನೆ ಸಂಧ್ಯಾಕಾಲದಲ್ಲಿ ತಲಪಿದೆವು. ನಾನೂ ನನ್ನ ಪತ್ನಿಯೂ ನಮ್ಮ ಕುದುರೆಯೂ ಅಲ್ಲೊಂದೆಡೆ—ಕಾಡ ಅಂಚಿನಲ್ಲಿ-ದಣಿವಾರಿಸಿಕೊಳ್ಳುತ್ತಿದ್ದೆವು. ನಿಶಿರಾತ್ರಿಯಲ್ಲಿ ಇದ್ದಕ್ಕಿದ್ದಂತೆ ಎಲ್ಲಿಂದಲೋ ಕಳ್ಳರು ಕಾಣಿಸಿಕೊಂಡರು. ನಾನು ಕತ್ತಿವರಸೆಯಲ್ಲಿ ನಿಸ್ಸೀಮ! ಮೂವರನ್ನು ಹೊಡದು ಕೆಡವಿದೆ. ಆದರೆ ನಾಲ್ಕನೆಯವನು ಕಟ್ಟುಮಸ್ತಿನ ಆಳು. ಆವೇಳೆಗೆ ದಣಿದು ಹೋಗಿದ್ದ ನನಗೆ ಅವನನ್ನು ಎದುರಿಸುವಷ್ಟು ಬಲವು ಉಳಿದಿರಲಿಲ್ಲ. ಕೊನೆಗವನು ‘ಪ್ರಾಣದಿಂದುಳಿಯ ಬೇಕಾದರೆ ನಿನ್ನಲ್ಲಿರುವ ಹಣವನ್ನು ಕೊಟ್ಟುಬಿಡು’ ಎಂದು ಅರಚಿದ. ವಿಧಿಯಿಲ್ಲದೆ ನನ್ನ ಕಿಸೆಯಲ್ಲಿಯೂ ಚೀಲದಲ್ಲಿಯೂ ಇದ್ದ ಮೊಹರುಗಳನ್ನು ಅವನಿಗೆ ಕೊಟ್ಟುಬಿಟ್ಟೆ. ದೈವಾಧೀನವಾಗಿ ಜೀನಿನ ಮೆತ್ತನೆಯ ಪದರದಲ್ಲಿ ಹೊಲೆದಿದ್ದ ಮೊಹರುಗಳನ್ನು ಅವನು ಕಂಡುಕೊಳ್ಳದೆ ಹೋದುದು ಒಳಿತಾಯಿತು. ಇಲ್ಲವಿದ್ದರೆ ಅರಿಯದ ಈ ನಗರದಲ್ಲಿ ನಾನು ತಿರುಕನಾಗಿ ತಿರುಗಿ ತಿರುಗಿ ಅಲೆಯಬೇಕಾಗಿದ್ದಿತು. ನನ್ನ ಬಳಿ ಇದ್ದ ಹಣವನ್ನು ಕಸಿದುಕೊಂಡು ಅವನು ನನ್ನ ಪತ್ನಿಯಕಡೆ ನುಗ್ಗಿದ. ಅವಳು ತೊಟ್ಟಿದ್ದ ಆಭರಣಗಳನ್ನು ಕಳಚಿಕೊಡುವಂತೆ ಹೆದರಿಸಿದ. ಅಷ್ಟರಲ್ಲಿ ಅವಳು ಚಾಕುವನ್ನು ಹಿಡಿದು ಹೆಣ್ಣುಸಿಂಹದಂತೆ ಹೋರಾಟಕ್ಕೆ ನಿಂತಳು. ಒಡವೆಗಳನ್ನು ಕೊಡಲೊಪ್ಪದ ನನ್ನ ಹೆಂಡತಿಯನ್ನು ಕಂಡು ಕಡುಕೋಪಗೊಂಡು ಕಳ್ಳನು ತನ್ನ ಕತ್ತಿಯಿಂದ ತಿವಿದು ನಾಲ್ಕಾರು ಕಡೆ ಅವಳನ್ನು ಘಾಯಗೊಳಿಸಿದನು. ದೈವವಶಾತ್ ನಾನು ಸಮಯನೋಡಿ ಕಳ್ಳನನ್ನು ತಿವಿದು ಅವನನ್ನು ಕೆಳಗುರುಳಿಸಿದೆ. ನೋವನ್ನು ತಾಳಲಾರದೆ ‘ಅಯ್ಯೊ! ಅಪ್ಪಾ’ ಎಂದು ಅವನು ನೆಲದಲ್ಲಿ ಬಿದ್ದು ಹೊರ

ಳಾಡುತ್ತಿದ್ದ. ಅದೇ ಸಮಯವನ್ನು ಸಾಧಿಸಿ ನನ್ನಿಂದ ಅವನು ಕಸಿದುಕೊಂಡ ಹಣವನ್ನು ಮತ್ತೆ ನಾನವನಿಂದ ಕಸಿದುಕೊಂಡೆ. ತಡಮಾಡದೆ ನನ್ನ ಪತ್ನಿಯನ್ನು ಸಾಗಿಸಿಕೊಂಡು ನಗರಕ್ಕೆ ಬಂದೆ. ಇಲ್ಲೊಂದು ಮನೆಯನ್ನು ಬಾಡಿಗೆಗೆ ಗೊತ್ತು ಮಾಡಿ, ಉಪಚಾರಕ್ಕೆ ಊಳಿಗದವರನ್ನು ಇಟ್ಟು ನಿಮ್ಮಲ್ಲಿ ಓಡಿ ಬಂದೆ. ಅದೃಷ್ಟ ವಶಾತ್ ನೀವೂ ಸಮಯಕ್ಕೆ ಸರಿಯಾಗಿ ಸಿಕ್ಕಿರಿ. ರುಣಬಾಧೆಯಿಂದ ನರಳಿ ನಿಶ್ಯಕ್ತಳಾಗಿರುವ ನನ್ನ ಪತ್ನಿಗೆ ತಕ್ಕ ಚಿಕಿತ್ಸೆಮಾಡಿ ಅವಳ ಪ್ರಾಣವನ್ನು ಉಳಿಸಿ ಕೊಟ್ಟರೆ ನನ್ನುಸಿರಿರುವವರೆಗೂ ನಾನು ನಿಮ್ಮ ಉಪಕೃತಿಯನ್ನು ,ಮರೆಯಲಾರೆ. ನಿಮಗೂ ಇದರಿಂದ ಮಹತ್ಕೀರ್ತಿಯೂ, ದಯಾಳು ಪರಮಾತ್ಮನ ಕರುಣೆಯೂ ಲಭಿಸುವುದರಲ್ಲಿ ಸಂದೇಹವಿರದು."

"ನನ್ನ ಕೈಲಾದುದನ್ನು ನಾನು ಮಾಡುತ್ತೇನೆ" ಎಂದ ಈಸಾ. ಆ ವೇಳೆಗೆ ನಾವು ನಮ್ಮ ಗೃಹವನ್ನು ಸೇರಿದೆವು. ಈಸಾ ತರುಣಿಯನ್ನು ಪರೀಕ್ಷಿಸಿ ನೋಡಿದನು. ಅವಳ ಘಾಯಗಳನ್ನು ತೊಳೆದು ಬೇವಿನಎಣ್ಣೆಯಿಂದ ತಯಾರಿಸಿದ ಮುಲಾಮನ್ನು ಹಚ್ಚಿದನು. ಕೆಲವೆಡೆ ಕಿತ್ತಹೋದ ಚರ್ಮವನ್ನು ಒಂದುಗೂಡಿಸಿ ಹೊಲಿದನು. ಇನ್ನು ಕೆಲವು ಹುಣ್ಣುಗಳಿಗೆ ಔಷಧಿಹಚ್ಚಿಕಟ್ಟಿದನು.

"ಪ್ರಾಣ ಭಯವಿಲ್ಲವೇ ?" ನಾನು ಕೇಳಿದೆ ಆತುರದಿಂದ.

"ದೇವರು ಮಂದ್ಯನೇ ಸರಿ. ಸದ್ಯಕ್ಕೆ ಏನೂ ಇಲ್ಲ. ಇನ್ನು ನಲವತ್ತು ದಿವಸ ಈದೇ ರೀತಿಯಲ್ಲೆ ಈಕೆಯ ಹುಣ್ಣುಗಳಿಗೆ ಔಷಧಿ ಹಚ್ಚಬೇಕು. ಕೆಲವನ್ನು ತೊಳೆದು ಕಟ್ಟಬೇಕು. ನಲವತ್ತು ದಿವಸ ಪರ್ಯಂತರ ಈಕೆ ಅತ್ತಿತ್ತ ಅಲುಗದಂತೆ ನೋಡಿಕೊಳ್ಳಿ. ಹಾಕಿದ ಹೊಲಿಗೆ ಬಿಚ್ಚಿಕೊಳ್ಳಕೂಡದು. ದಿನವಹಿ ಅನೇಕಬಾರಿ ಬೇಡ—ಮಿತವಾಗಿ ಹಾಲು, ಹಣ್ಣಿನರಸ, ದ್ರಾಕ್ಷಾರಸ ಗಳನ್ನು ಕುಡಿಸಿ; ಕೋಳಿಮರಿ ಮಾಂಸವನ್ನು ತಿನ್ನಿಸುತ್ತ ಬನ್ನಿ;ಒಂದೆಡೆ ಗಾಯ ಗಳು, ವಾಸಿಯಾಗುವುದು ; ಮತ್ತೊಂದೆಡೆ ಚೆಲ್ಲಿಹೋದ ರಕ್ತವು ಮತ್ತೆ ವೃದ್ಧಿ ಯಾಗುವುದು; ಪ್ರಾಣಭಯವಿಲ್ಲ. ದಿನಂಪ್ರತಿ ಪ್ರಾತಃಕಾಲ, ಸಂಧ್ಯಾಕಾಲ ಎರಡು ಹೊತ್ತೂ ನಾನು ಬಂದು ನೋಡಿಕೊಂಡು ಹೋಗುತ್ತೇನೆ. ಹೆದರದಿರಿ. ಇನ್ನು ನಾನು ಬರಲೇ ?"

ಹೀಗೆನ್ನುತ್ತ ತನ್ನ ಶಸ್ತ್ರ ಪೆಟ್ಟಿಗೆಯನ್ನು ಹಿಡಿದು ಈಸಾ ಹೊರ ಹೊರಟ. ನಾನು ಅವನನ್ನು ಬಹಳವಾಗಿ ವಂದಿಸಿದೆ, "ಅಯ್ಯಾ! ನಿಮ್ಮ ಸಹಾಯದಿಂದ

ನಾನೂ ನನ್ನ ಪತ್ನಿಯೂ ಸತ್ತು ಬದುಕಿದಂತಾಯಿತು. ನೀವು ಸಿಕ್ಕದಿದ್ದರೆ ಆಕೆ ಖಂಡಿತವಾಗಿಯೂ ಸತ್ತುಹೋಗುತ್ತಿದ್ದಳು. ನನ್ನಲ್ಲಿ ಅತಿಶಯ ಅನುರಾಗವುಳ್ಳ ಅವಳಳಿದ ಬಳಿಕ ನಾನುಳಿಯುವುದು ನಿಜವೇ? ಆದುದರಿಂದ ನಮ್ಮ ಇಬ್ಬರಿಗೂ ಪ್ರಾಣದಾನ ಮಾಡಿದ ಮಹತ್ಪುಣ್ಯವು ನಿಮಗೆ ಲಭಿಸಿದಂತಾಯಿತು. ಪರಮ ಕರುಣಾಳುವಾದ ಪರಮಾತ್ಮನು ನಿಮಗೆ ಮಂಗಳವನ್ನು ನೀಡಲಿ" ಎಂದು ಹಾರೈಸಿದೆ.

"ಇರಲಿ; ಅಪಾಯಕಾಲದಲ್ಲಿ ಉಪಯೋಗಕ್ಕೆ ಬಾರದವಿದ್ಯೆ ಇದ್ದೇನು ಫಲ! ನಿಮ್ಮ ವಂದನೆಗಳನ್ನು ಈ ವಿದ್ಯೆಗೆ ಅಧಿಪತಿಯಾದ ಪರಮಾತ್ಮನಿಗೆ ಅರ್ಪಿಸಿ. ನಾನು ತಮ್ಮಂತಹವರ ಗುಲಾಮು" ಎನ್ನುತ್ತ ಈಸಾ ಹೊರಟು ಹೋದ.

ತನ್ನ ಮಾತಿನಂತೆ ಅವನು ಅಂದು ಸಾಯಂಕಾಲವೂ ಮರುದಿನ, ಮತ್ತು ಪ್ರತಿದಿನವೂ ಬೆಳಗ್ಗೆ ಸಾಯಂಕಾಲ ತಪ್ಪದೆ ಬಂದು ತರುಣಿಯ ರಣ ಚಿಕಿತ್ಸೆಮಾಡಿ ಹೋಗುತ್ತಿದ್ದನು. ಮರುದಿನ ನಾನವನಿಗೆ ಹತ್ತು ಮೊಹರುಗಳನ್ನು ಎತ್ತಿಕೊಟ್ಟೆ. ಬಹು ಹೆಣಗಾಡಿ ಬೇಡ ಬೇಡವೆನ್ನುತ್ತಲೇ ಕೊನೆಗೆ ಬಲಂತದಿಂದ ಸ್ವೀಕರಿಸಿದ. ಅವನು ಮತ್ತೂ ಹೇಳಿದ :

ಈ ಹತ್ತು ಮೊಹರುಗಳೇ ಯಥೇಚ್ಛವಾಯಿತು. ಇದಕ್ಕಿಂತ ಹೆಚ್ಚಾಗಿ ಕೊಡಬೇಕೆಂಬ ನಿಯಮ ಇಟ್ಟುಕೊಳ್ಳಬೇಡಿ. ನಲವತ್ತು ದಿವಸಗಳ ಚಿಕಿತ್ಸೆಗೂ ಇದೇ ಸಾಕು. ಗುಣಪಡಿಸುತ್ತೇನ. ಖುದಾನು ನಿಮ್ಮಿಬ್ಬರನ್ನೂಕಣ್ಣಿಟ್ಟು ಕಾಯಲಿ."

ನಲವತ್ತು ದಿವಸಗಳಕಾಲ ಹೆಚ್ಚುಕಮ್ಮಿ ಸುಂದರಾಂಗಿಯ ಹಾಸಿಗೆಯ ಬಳಿಯಲ್ಲೇ ಕುಳಿತು ನಾನವಳಿಗೆ ಉಪಚಾರ ಮಾಡುತ್ತಿದ್ದೆ. ನನ್ನ ಸೇವೆಯನ್ನು ಸ್ವೀಕರಿಸಲ್ಪಡುತ್ತಿದ್ದ ಆ ನವ ಮೋಹಿನಿಯು ಒಂದು ದಿನವಾದರೂ ನನ್ನೊಡನೆ ಮಾತಾಡುತ್ತಿರಲಿಲ್ಲ. ದಿನೇದಿನೇ ಶಕ್ತಿಯು ಹೆಚ್ಚುತ್ತ ಬಂದರೂ, ರಣಗಳು ಗುಣಹೊಂದಿ ಆರೋಗ್ಯದ ಹಾದಿಯನ್ನು ಹಿಡಿಯುತ್ತಿದ್ದರೂ ಆ ರಮಣೀಮಣಿಯು ನನ್ನೊಡನೆ ಸರಸ ಸಲ್ಲಾಪಗಳಿಲ್ಲದೆ ಮೌನ ವ್ರತವನ್ನು ಆಚರಿಸುತ್ತಿದ್ದಳು. ಇದನ್ನು ಕಂಡು ನನಗೆ ಪರಮಾಶ್ಚರ್ಯವಾಯಿತು, ನನ್ನ ಉಪಚಾರಗಳನ್ನು ಅವಳು ಬೇಡವೆನ್ನುತ್ತಿರಲಿಲ್ಲ. ಆದರೂ ಅವುಗಳನ್ನು ಅಂಗೀಕರಿಸಿದುದಕ್ಕಾಗಿ ಕೃತಜ್ಞತೆಯನ್ನು ತೋರಿಸುವ ಶ್ರಮಕ್ಕೆ ಅವಳು ಕೈಹಾಕಲಿಲ್ಲ. ನಾರೀ ಹೃದಯ! ಅದರಲ್ಲಡಗಿರುವ ರಹಸ್ಯಗಳನ್ನು ಹೊರಗೆಡಹ ಬಲ್ಲವರಾರು?

## ೧೦

ಈಸಾನ ಚಿಕಿತ್ಸೆಯು ತೊಡಗಿ ಹಲವು ದಿನಗಳು ಕಳೆದ ಬಳಿಕ ಒಂದಾನೊಂದು ದಿನ ನನ್ನ ಸರಕುಗಳನ್ನು ಮಾರಾಟಕ್ಕೆ ಕೊಂಡುಹೋಗಿದ್ದ ವರ್ತಕನು ನನ್ನನ್ನು ಸಂಧಿಸಿದನು. ದೇವರ ದಯದಿಂದ ನನ್ನ ಸರಕುಗಳಿಗೆ ಉತ್ತಮ ಬೆಲೆಯು ದೊರೆತು ನನ್ನ ಮೂಲಧನವು ಒಂದಕ್ಕೆ ಒಂದೂವರೆಯಾಗಿ ಹೆಚ್ಚಿತ್ತು. ವರ್ತಕನಿಗೆ ಉಚಿತ ರೀತಿಯಲ್ಲಿ ಸನ್ಮಾನಕೊಟ್ಟು ಕಳುಹಿಸಿದೆ. ಮಾರಾಟದ ಹಣವು ಆ ಸಮಯದಲ್ಲಿ ಕರಗತವಾಗದಿದ್ದರೆ ನಾನು ಬಹುವಾಗಿ ಪೇಚಾಡಬೇಕಿತ್ತು. ಹೇಗೂ ಹಣವು ಕೈಸೇರಿದೊಡನೆಯೆ ಸುಂದರ ಸ್ತ್ರೀಯಳಿಗೆ ಮನರಂಜಕವಾಗುವಂತೆ ನಾನು ಉತ್ತಮವಾದ ರತ್ನಗಂಬಳಿಗಳನ್ನು ಉನ್ನತ ಬೆಲೆಕೊಟ್ಟು ತರಿಸಿ ಮನೆಯ ನೆಲಕ್ಕೆಲ್ಲ ಹಾಸಿದೆ. ಬಾಗಿಲುಗಳಿಗೂ ಕಿಟಕಿಗಳಿಗೂ ಅತ್ಯಂತ ಬೆಲೆಬಾಳುವ ರೇಷ್ಮೆ ಪರದೆಗಳನ್ನು ತರಿಸಿ ಹಾಕಿಸಿದೆ. ಊಟ ಉಪಚಾರಗಳಿಗೆ ಚಿನ್ನಬೆಳ್ಳಿಗಳಿಂದ ತಯಾರಾದ ರತ್ನಖಚಿತ ತಟ್ಟೆಬಟ್ಟಲು ಹೂಜಿಗಳನ್ನು ತರಿಸಿದೆ. ಇಲ್ಲವೆನ್ನದಂತೆ ಮನೆಯ ಸಂಸಾರಕ್ಕೆ ಬೇಕಾದ ತದಿತರ ಸಾಮಗ್ರಿಗಳನ್ನೂ ತರಿಸಿ ತುಂಬಿಸಿದೆ. ಸುಂದರಿಗೆ ಪ್ರಿಯವಾಗುವಂತೆ—ಅವಳ ಸ್ಥಾನಕ್ಕೆ ತಕ್ಕ — ಉತ್ತಮ ಉಡುಗೆತೊಡಿಗೆಗಳನ್ನು ತರಿಸಿಕೊಟ್ಟೆ. ಈ ಎಲ್ಲ ಏರ್ಪಾಡುಗಳಿಂದ ನನ್ನ ಬಳಿ ಇದ್ದ ಹಣದಲ್ಲಿ ಹೆಚ್ಚಿನ ಭಾಗವು ವ್ರಯವಾಗಿ ಹೋಯಿತು. ಇಷ್ಟಾದರೂ ಸುಂದರ ತರುಣಿಯು ನನ್ನ ದುಂದು ವ್ರಯವನ್ನು ಕಂಡು ಒಮ್ಮೆಯಾದರೂ ಪ್ರತಿಭಟಿಸಲಿಲ್ಲ. ಅದರಿಂದ ಅವಳ ಮನಸ್ಸಿಗೆ ನಾನೆಣಿಸಿದಂತೆಯೇ ಆಹ್ಲಾದವುಂಟಾಗಿರಬೇಕು. ಅದರಿಂದಲೇ ಅವಳು ಸುಮ್ಮನೆ ಇದ್ದಿರಬೇಕು. ಅವಳು ನೆಮ್ಮದಿಯ ಹಾದಿಯನ್ನು ಹಿಡಿದು ಎದ್ದು ಓಡಾಡುವಂತಾದರೆ ಸಾಕು ಎಂಬುದೀಗ ನನ್ನ ಏಕಮಾತ್ರ ಗುರಿಯಾಗಿದ್ದಿತು.

ಹೇಗೂ ನಲವತ್ತು ದಿವಸಗಳು ಮೆಲ್ಲಮೆಲ್ಲನೆ ಕಳೆದುಹೋದುವು. ಸುಂದರಿಯ ರಣಗಳು ವಾಸಿಯಾದುವು. ಹೊಸ ಚರ್ಮವು ಬೆಳೆದು ರಣಗಳನ್ನು ಮುಚ್ಚುತ್ತಿದ್ದುವು. ಚಿಕಿತ್ಸೆಗಳು ಪೂರ್ಣಗೊಂಡವು. ಪರಿಣಾಮವೂ ಶುಭಕರ ವಾಗಿಯೇ ಆಯಿತು. ನಲವತ್ತನೆಯ ದಿವಸ ಈಸಾ ಮಾಗಿದ ರಣಗಳಿಗೆ ತೈಲವನ್ನು ಲೇಪನಮಾಡಿದನು. ಎರಡು ತಾಸಾದನಂತರ ಊಳಿಗದವರು ಅತ್ತರು ಪನ್ನೀರು ತದಿತರ ಸುಗಂಧ ದ್ರವ್ಯಗಳಿಂದ ಬೆರೆತ ನೀರಿನಲ್ಲಿ ಸಾಂಗವಾಗಿ ಸ್ನಾನಮಾಡಿಸಿದರು. ಸ್ನಾನಾನಂತರ ನಾನು ಉದ್ದೇಶಪೂರ್ವಕವಾಗಿ ತರಿಸಿದ ಉನ್ನತ ಮಟ್ಟದ ರತ್ನಾಲಂಕೃತ ನೂತನ ಉಡುಪನ್ನು ಆ ಲಾವಣ್ಯ ಮಯಿಗೆ ಊಳಿಗದವರು ಉಡಿಸಿದರು. ದಿವ್ಯಾಲಂಕಾರಭೂಷಿತಳಾಗಿ—ಅತ್ಯಂತ ಪರಿಶ್ರಮದಿಂದ ನಾನು ಸ್ವತೇವ ಸಿದ್ಧಗೊಳಿಸಿದ್ದ ಮೆತ್ತನೆಯ ಹಾಸಿಗೆಯಮೇಲೆ ಒರಗುದಿಂಬುಗಳಿಗೆ ಮೈಯ್ಯೊತ್ತಿ ಸುಂದರಾಂಗಿಯು ಕುಳಿತಳು. ಆದೃಶ್ಯವನ್ನೇ ನೆಂದು ಹೇಳಲಿ? ಅವಳ ಆಗಿನ ಹಾವಭಾವವಿಲಾಸಗಳು ಭುವನೈಕ ಮೋಹಿನಿಗೆ ಒಪ್ಪುವಂತಿದ್ದುವು!

ಇಷ್ಟಾದರೂ ಆ ಕೋಮಲಾಂಗಿಯು ನನ್ನೊಡನೆ ಸರಸದಿಂದ ಸಲ್ಲಾಪ ವನ್ನು ತೊಡಗಲಿಲ್ಲ. ಈ ಮೌನದಲ್ಲಿ ಅದೊಂದು ತೆರನಾದ ಮರ್ಮವು ಅಡಗಿದ್ದಂತೆ ನನಗೆ ಭಾಸವಾಗಿದ್ದಿತು. ರಹಸ್ಯವನ್ನು ಹೊರಗೆಡಹದಿರಲಿಕ್ಕೆಂದು ಇತರರನ್ನು ಕುರಿತು ಮಾತನಾಡುವಾಗ ಅವಶ್ಯ ಕಂಡುಬಂದಂತೆಲ್ಲ 'ಆಕೆ ನನ್ನ ಪತ್ನಿ' ಎಂದು ಹೇಳಿದುದು ಸುಂದರಿಗೆ ಕೇಳಿಸದೆ ಇಲ್ಲ. ಆದರೂ ಅವಳು ಅದಕ್ಕೆ ಅಡ್ಡಿಮಾಡಲಿಲ್ಲ. ನನಗಂತೂ ಏನೊಂದೂ ಅರ್ಥವಾಗಲಿಲ್ಲ.

ಹೇಗೋ ಕ್ಷಣಕಾಲ ಮಿಂಚಿದ್ದರೆ ಮರಣಕ್ಕೆ ತುತ್ತಾಗಿ ಹೋಗುತ್ತಿದ್ದ ತರುಣಿಯನ್ನು ಸಕಾಲದಲ್ಲಿ ಸಂಧಿಸಿ, ಶ್ರಮವ್ಯಯಗಳನ್ನು ಲೆಕ್ಕಿಸದೆ, ತಕ್ಕ ಚಿಕಿತ್ಸೆಗಳನ್ನು ತಕ್ಷಣ ಏರ್ಪಡಿಸಿ, ಎಲ್ಲವೂ ಶುಭಪ್ರದವಾಗಿ ಪರಿಣಮಿಸುವಂತೆ ಕರುಣೆಯನ್ನು ನೀಡಿದ ಪರಮಾತ್ಮನಿಗೆ ಕೃತಜ್ಞತೆಯನ್ನು ಸಲ್ಲಿಸುವುದಕ್ಕಾಗಿ ಸಾವಿರಾರು ಬಡಬಗ್ಗರನ್ನು ಬರಮಾಡಿಸಿಕೊಂಡು ಹೊಟ್ಟೆತುಂಬ ಉಣಬಡಿಸಿ ಕೈತುಂಬ ಹಣಕೊಟ್ಟು ಕಳುಹಿಸಿದೆ. 'ದೀನದಲಿತರ ಸೇವೆಯೇ ದಯಾಳು

ಪರಮಾತ್ಮನ ಸೇವೆ' ಎಂಬುದನ್ನು ನಾನು ಮರೆತಿರಲಿಲ್ಲ. ಅಂತೆಯೇ ಈಸಾನಿಗೆ ನನ್ನ ಕೃತಜ್ಞತೆ ವಂದನೆಗಳನ್ನು ಯಥೇಚ್ಛವಾಗಿ ಸಲ್ಲಿಸಿದೆ; ಆತನಿಗೆ ಹೊಸ ಉಡುಪನ್ನು ಹೊಲಿಸಿಕೊಟ್ಟೆ; ಚಿನ್ನದ ತಟ್ಟೆಯಲ್ಲಿ ನೂರು ಹೊನ್ನುಗಳನ್ನು ಇಟ್ಟು ಹಣ್ಣು ಹಂಪಲು, ಊಟಉಪಚಾರಗಳಿಂದ ಸತ್ಕರಿಸಿ ಆತನನ್ನು ಕಳುಹಿಸಿ ಕೊಟ್ಟೆ. ಮನೆಯಲ್ಲಿ ಊಳಿಗಕ್ಕೆ ನಿಂತವರಿಗೂ ಬಹುವಾಗಿ ಸನ್ಮಾನಮಾಡಿದೆ. ಇದಿಷ್ಟೂ ಯಾರಿಗಾಗಿ? ಓರ್ವ ಅಪರಿಚಿತ ಅಪ್ಸರಸಮಾನಳಾದ ಘಾಯಗೊಂಡು ಸಹಾಯಕರಿಲ್ಲದೆ, ಮರಣಕ್ಕೆ ತುತ್ತಾಗಿ ಹೋಗಲಿದ್ದ ಒಬ್ಬ ರಮಣೀ ಮಣಿಗೆ!

ನನ್ನ ಮನಸ್ಸು ಸಂತಸದಿಂದ ಉಕ್ಕಿ ಬಿರಿಯಿತು. ಏಳು ಲೋಕಗಳನ್ನು ಗೆದ್ದು ಸೂರೆಗೊಂಡವರ ಮನಸ್ಸಿಗೂ ಕೈಕೊಂಡ ಕಾರ್ಯದಲ್ಲಿ ಜಯಶಾಲಿ ಯಾದ ನನ್ನ ಮನಸ್ಸಿಗೂ ವ್ಯತ್ಯಾಸವಿರಲಿಲ್ಲ.

# ೧೧

ಸುಂದರಿಯ ರೂಪರೇಖಾಲಾವಣ್ಯ ವಿಲಾಸಗಳನ್ನು ಕಂಡು ನಾನು ಹಿಂದೆಂದೂ ಅಂದಿನಷ್ಟು ಮುಗ್ಧನಾಗಿರಲಿಲ್ಲ. ಅವಳ ಮೃದು ಕಪೋಲವರ್ಣವು ಗುಲಾಬಿ ರಂಗಿನಮೇಲೆ ಸೂರ್ಯನ ಸ್ವರ್ಣಕಾಂತಿಯ ಮೆರುಗನ್ನು ಕೊಟ್ಟಂತಿದ್ದಿತು. ಅವಳನ್ನು ನೋಡಿದಷ್ಟೂ ಇನ್ನಷ್ಟು ಮತ್ತಷ್ಟು ನೋಡುತ್ತಲೇ ಇರೋಣ ಎಂದೆನ್ನಿಸಿತು. ಹೀಗೆ ಮನಮೋಹನೆಯ ಸೌಂದರ್ಯಾತಿಶಯಾಕ್ಕೆ ಮನಸೋತ ನನಗೆ ಅವಳ ಸುಂದರಾಕೃತಿಯನ್ನು ಎವೆಯಿಕ್ಕದೆ ನೋಡುತ್ತಿರುವುದು ಅವಳ ಆಣತಿಗಳನ್ನು ನೆರವೇರಿಸಿ ಅವಳ ಸೇವೆಗಾಗಿಯೇ ಟೊಂಕ ಕಟ್ಟಿ ನಿಲ್ಲುವುದು, ಇವೆರಡನ್ನುಳಿದು ಬೇರ್ಯಾವುದೂ ಸರಿಯೆನಿಸಲಿಲ್ಲ.

ಈ ಅಪೂರ್ವ ನಾರೀರತ್ನವು ಆಗೊಮ್ಮೆ ಈಗೊಮ್ಮೆ ನನ್ನೊಡನೆ ಮಾತನಾಡಲು ಮನವೊಪ್ಪಿದಾಗ ಅವಳು ಆಡುತ್ತಿದ್ದ ಮಾತುಗಳ ಮುಖ್ಯ ಸಾರಾಂಶವಿಷ್ಟೆ :

"ನೋಡು, ನಿನ್ನಲ್ಲಿ ನನಗುಂಟಾಗಿರುವ ಸದಭಿಪ್ರಾಯವು ನೆಲೆಯಾಗಿ ನಿಲ್ಲಬೇಕಾದರೆ ನನ್ನ ಅಭೀಷ್ಟವನ್ನು ಸ್ಪಷ್ಟವಾಗಿ ತಿಳಿದುಕೋ. ನನ್ನ ವ್ಯವಹಾರಗಳನ್ನು ಕುರಿತು ಯಾರಲ್ಲಿಯಾದರೂ ಒಂದು ಕಿರುಮಾತನ್ನು ಉಚ್ಚರಿಸೀಯೆ—ಎಚ್ಚರಿಕೆ ! ನಾನು ಹೇಳಿದುದನ್ನು ನೀನು ಶಿರಸಾವಹಿಸಿ ಕೇಳಬೇಕು. ಮಾತ್ರವಲ್ಲದೆ, ನನ್ನ ಆಣತಿಗಳನ್ನು ಏನು ಎತ್ತ ಎಂದು ಮುಂತಾಗಿ ಪ್ರಶ್ನಿಸಬಾರದು. ನಾನಾಡಿದುದಕ್ಕೆ ವಿರೋಧ"ನುಡಿಯಬಾರದು; ವಿಘ್ನಗಳನ್ನು ತಂದೊಡ್ಡಬಾರದು; ತಿಳಿಯಿತೇ ?"

ತರುಣಿಯ ಕಟ್ಟಪ್ಪಣೆ ನಿರ್ದಾಕ್ಷಿಣ್ಯವಾಗಿದ್ದಿತು. ಅಂತೆಯೇ ಅದು ಸ್ಪಷ್ಟವಾಗಿಯೂ ಇದ್ದಿತು. ಆದರೆ ಅದರಲ್ಲಿ ಚುಚ್ಚುವಂತಹ ಬಾಣಗಳಿರಲಿಲ್ಲ. ನನ

ಗರಿಯದ, ನನ್ನಲ್ಲಿ ಹೇಳಬಾರದ ಯಾವುದೋ ಕಾರಣಗಳು ಇರಬಹುದು. ಅದಕ್ಕಾಗಿಯೇ ಅವಳು ನನಗೆ ಈ ಎಚ್ಚರಿಕೆಯ ಮಾತುಗಳನ್ನು ಹೇಳುತ್ತಿರವಳು ಎಂದು ನಾನು ಗ್ರಹಿಸಿದೆ. ಏಕೆ ? ಇಷ್ಟಾದರೂ ಅವಳು ನನ್ನನ್ನು ಒಮ್ಮೆ ಯಾದರೂ ಅಸಡ್ಡೆಯಿಂದ ಮಾತನಾಡಿಸಲಿಲ್ಲ. ದುರಹಂಕಾರದಿಂದ ನೋಡಲಿಲ್ಲ. ಪ್ರತಿಯಾಗಿ ಆಗಿಂದಾಗ್ಗೆ ಅವಳ ಪ್ರಸನ್ನವದನವೇ ನನ್ನಲ್ಲಿ ಅವಳಿಗೆಷ್ಟು ಕೃತಜ್ಞತೆಯಿತ್ತು ಎಂಬುದರ ಮೌನ ಮುದ್ರೆಯಂತಿತ್ತು. ಹೇಗೂ ಅವಳ ಮಾತುಗಳಿಗೆ ನಾನು ಮಾರುತ್ತರಗಳನ್ನು ಕೊಡುತ್ತಿರಲಿಲ್ಲ. ಅದರಿಂದ ಅವಳು ಸುಪ್ರೀತಳಾಗಿಯೇ ಇರಬೇಕು ಎಂದೆಣಿಸಿದೆ.

ಈ ತೆರನೆ ತರುಣಿಯು ಗುಣಮುಖಳಾದನಂತರ ಮೂರು ತಿಂಗಳುಗಳು ಉರುಳಿಹೋದುವು. ನಾನು ನನ್ನ ಬಳಿ ಇದ್ದ ಹಣವನ್ನು ನೀರಿನಂತೆ ವ್ರಯ ಮಾಡುತ್ತ ಬಂದೆ. ಕಾಲಕ್ರಮೇಣ ನನ್ನ ಕೈಬರಿದಾಯಿತು. ಅಂದಂದಿನ ಕರ್ಚಿಗೆ ಹಣವಿಲ್ಲದಂತಾಯಿತು. ಮುಂದೇನು ಮಾಡಬೇಕೆಂದು ತಿಳಿಯಲಿಲ್ಲ. ಈ ವಿಚಾರವನ್ನು ತರುಣಿಯಲ್ಲಿ ಹೇಳಿಕೊಳ್ಳಲೇ ? ಛೇ ! ಇಷ್ಟುದಿವಸ ಇಂತಹ ಹಿಡಿತವಿಲ್ಲದ ವೆಚ್ಚವನ್ನು ನಡೆಸಿ ಇಂದು ಅವಳಲ್ಲಿ ಇಲ್ಲವೆಂದು ಹೇಳಿದರೆ ನನ್ನ ಪೌರುಷವು ಉಳಿದೀತೇ ? ನಾನು ಭಿಕಾರಿಯಾದೆನೆಂದು ತಿಳಿದರೆ ನನ್ನಲ್ಲಿ ಅವಳ ಅನುಗ್ರಹವು ಲಯವಾಗಿ ಹೋಗದೆ ? ಈಗೇನು ಮಾಡುವುದು ? ಇಷ್ಟು ದಿನ ಪಟ್ಟ ಕಷ್ಟನಷ್ಟಗಳು—ಅವಳ ಅಭಿಮಾನ—ದಿವ್ಯಾನುಗ್ರಹದ—ಸಂಪಾದನೆಗಾಗಿ. ಈಗ ಹಣಕ್ಕಾಗಿ ಬಾಯಿಬಿಟ್ಟು ಇಷ್ಟುದಿನ ಗಳಿಸಿಕೊಂಡಅಭಿಮಾನವನ್ನು ಇಂದು ಇದ್ದಕ್ಕಿದ್ದಂತೆ ಕಳೆದುಕೊಳ್ಳಲೇ ? ಮೇಲಾಗಿ ಅವಳನ್ನು ನಾನು ಮೊದಲು ನೋಡಿದುದು ಅನಿರೀಕ್ಷಿತವಾಗಿ. ಇಂತಹ ಆಕಸ್ಮಿಕ ರೀತಿಯಲ್ಲಿ ನಮ್ಮಿಬ್ಬರ ಪರಿಚಯವಾಯಿತು. ಸೇವೆಯ ಕಾರಣದಿಂದ ಅನುರಾಗವು ಹುಟ್ಟಿ ಸಂತಸವಾದ ಸಹವಾಸವು ಬೆಳೆಯಿತು. ನನ್ನ ಅವಳ ನಡುವಿನಲ್ಲಿದ್ದುದು 'ಸ್ನೇಹ' ಎಂದು ನಾನು ಹೇಳಿಕೊಳ್ಳಲಾರೆ. 'ಪ್ರೇಮ' ಎಂದರೆ ಮೊದಲೇ ಒಪ್ಪದು. 'ಸಂಬಂಧ' ಅದು ಸಲ್ಲದಮಾತು. 'ಸಹವಾಸ' ! ನಿಜ; ನಾವಿಬ್ಬರೂ ಒಬ್ಬರನ್ನೊಬ್ಬರು ಅರಿತುಕೊಳ್ಳದ—ಕೇವಲ ಆಕಸ್ಮಿಕವಾಗಿ ಪರಿಚಯಗೊಂಡ ನಾವಿಬ್ಬರೂ—ಅವಶ್ಯಕತೆಯಿಂದ ಒಂದೇ ಮನೆಯಲ್ಲಿ ಎಡೆಬಿಡದೆ ವಾಸಿಸುತ್ತಿದ್ದೆವು. ಅವಳು

ನೊಂದವಳು; ನಾನು ಸ್ವಯಂಪ್ರತಿಷ್ಠಿತನಾಗಿ ಅವಳ ನೋವಿನ ನಿವಾರಣೆಗೆ ಟೊಂಕಕಟ್ಟಿ ನಿಂತವನು. ನಮ್ಮಿಬ್ಬರ ನಡುವಿನಲ್ಲಿದ್ದ ಈ ತೆರನಾದ ಬೆರೆತೂ ಬೆರೆಯದ ಸಂಬಂಧ—ಇದು ಬೆಳೆತು ಬಲಿಯುತಕ್ಕುದೋ, ಉರುಳಿ ಅಳಿಯು ತಕ್ಕುದೋ—ಅದು ನನಗೆ ಆ ಕ್ಷಣದಲ್ಲಿ ಅರಿವಾಗಲಿಲ್ಲ.

ಕೈಬರಿದಾದಮೇಲೆ ಒಂದು ದಿವಸ ನಾನು ತಲೆತಗ್ಗಿಸಿ ಆಳವಾದ ಆಲೋಚನೆಯಲ್ಲಿ ಮಗ್ನನಾಗಿ ಚಿಂತಾಕ್ರಾಂತನಾಗಿದ್ದೆ. ಮೌನಧಾರಿಯಾದ ನನ್ನ ವ್ಯಸನದ ಕಾರಣಗಳನ್ನು ಕಂಡುಕೊಂಡವಳಂತೆ ತರುಣಿಯು ತಾನು ಕುಳಿತಿದ್ದೆಡೆಯಿಂದ ಕೇಳಿದಳು :

"ಏನು ಆಲೋಚಿಸುತ್ತಿರುವೆ? ಈ ಸಂಸಾರವನ್ನು ನಡೆಸಲು ಹಣವಿಲ್ಲವೆಂಬ ಚಿಂತೆಯೇ? ಎಲ್ಲಿ—ಒಂದು ತುಂಡು ಕಾಗದವನ್ನೂ ಲೇಖಣಿಯನ್ನೂ ಕೊಡು."

ಮರುಮಾತನಾಡದೆ ನಾನು ಕಾಗದ, ಲೇಖಣಿ ಮತ್ತು ಮಸಿಕುಡಿಕೆಯನ್ನು ಅವಳ ಮುಂದಿಟ್ಟೆ. ಅವಳು ಬರಬರನೆ ಒಂದು ಚೀಟಿಯನ್ನು ಬರೆದಳು. ಅದನ್ನು ಮಡಿಸಿ ಅದರಮೇಲೆ "ಸಿದ್ಧಿಬಹಾರ್" ಎಂದು ವಿಳಾಸ ಬರೆದು ನನ್ನ ಕೈಗೆ ಕೊಟ್ಟು ಹೇಳಿದಳು :

"ಹೋಗು; ಈ ಚೀಟಿ ತೆಗೆದುಕೊಂಡು ನೆಟ್ಟಗೆ ಹೋಗು. ಪೂರ್ವದಿಕ್ಕಿನಲ್ಲಿರುವ ರಾಜಮಾರ್ಗದಲ್ಲೇ ಉದ್ದಕ್ಕೆ ಹೋಗು. ರಸ್ತೆಯ ಅಂಚಿನಲ್ಲಿ ಒಂದು ಉದ್ಯಾನವನವಿದೆ. ಅದರ ಎದುರಿನಲ್ಲಿ ಎಂಟು ಕಂಭಗಳುಳ್ಳ ಒಂದು ಮನೆಯು ಕಾಣಿಸುತ್ತದೆ. ಅದರ ಬಲಭಾಗಕ್ಕೆ ತಿರುಗು; ಅಲ್ಲೊಂದು ಮೂರು ಅಂತಸ್ತಿನ ದಿವ್ಯವಾದ ಭವನವಿದೆ. ಬಾಗಿಲಲ್ಲಿ ಗುಲಾಮರಿರುತ್ತಾರೆ. ಈ ಚೀಟಿಯನ್ನೂ, ಗುರುತಿಗಾಗಿ ನನ್ನ ಈ ಮುದ್ರಿಕೆಯನ್ನೂ ಆ ಗುಲಾಮರ ಕೈಯ್ಯಲ್ಲಿ ಕೊಡು."

ತರುಣಿಯ ಮಾತಿನ ಧಾಟಿಯಲ್ಲಿ ಅವಳು ರಾಜಪುತ್ರಿ ಇಲ್ಲವೆ ಅತ್ಯುನ್ನತ ಶ್ರೀಮಂತನ ಪುತ್ರಿಯಾಗಿರಬೇಕೆಂದು ನನಗೆ ಭಾಸವಾಯಿತು. ಅಷ್ಟುಮಾತ್ರವಲ್ಲ; ಅವಳ ಆಥೋರಣೆಯನ್ನು ಕಂಡು ಅವಳು ಸಾಧಾರಣ ಸ್ತ್ರೀಯಲ್ಲ;

ಅಧಿಕಾರ ಮಾಡುವುದಕ್ಕಾಗಿ ಹುಟ್ಟಿದವಳು ಎಂದೂ ನನಗೆ ಸ್ಪಷ್ಟವಾಯಿತು. ಸುಂದರಾಂಗಿಯು ನನ್ನ ಕೈಯಲ್ಲಿ ಕೊಟ್ಟ ಚೀಟಿಯನ್ನೂ ಮುದ್ರಿಕೆಯನ್ನೂ ತೆಗೆದುಕೊಂಡು ಅವಳು ಹೇಳಿದ ಗುರುತನ್ನು ನೆನಪಿನಲ್ಲಿಟ್ಟು ನಡೆದೆ. 'ಸಿದ್ಧಿ ಬಹಾರ'ನ ಭವನವೂ ಸಿಕ್ಕೀತು. ಹೊರಬಾಗಿಲಲ್ಲಿ ಕಾವಲುಗಾರರು ನಿಂತಿದ್ದರು. ನನ್ನನ್ನು ಕಂಡೊಡನೆಯೇ ಮರ್ಯಾದೆಯಿಂದ ಎದ್ದುನಿಂತು 'ಏನಾಗಬೇಕು? ಯಾರನ್ನು ನೋಡಬೇಕು?' ಎಂದು ಕೇಳಿದರು. ನನ್ನ ಕೈಲಿದ್ದ ಮುದ್ರಿಕೆ ಯನ್ನು ತೋರಿಸಿದೆ. ಅದನ್ನವರು ಗೌರವದಿಂದ ಮುತ್ತಿಟ್ಟು ನನ್ನನ್ನು ಬಹು ಮರ್ಯಾದೆಯಿಂದ ಒಳಗೆ ಕರೆದುಕೊಂಡು ಹೋದರು.

ತಕ್ಷಣವೇ ಸಿದ್ದಿಬಹಾರನು ಹೊರಗೆಬಂದು ನನ್ನನ್ನು ಬಹಳ ಗೌರವದಿಂದ ಬರಮಾಡಿಕೊಂಡು, ಉಚಿತಾಸನದಲ್ಲಿ ಕುಳ್ಳಿರಿಸಿ, ತಂಪಾದ ಪಾನೀಯಗಳಿಂದ ಸತ್ಕರಿಸಿದನು. ನಾನಿತ್ತ ಚೀಟಿಯನ್ನು ಓದಿಕೊಂಡು ಕ್ಷಣಕಾಲ ಒಳಗೆಹೋಗಿ ಮತ್ತೆ ಹಿಂತಿರುಗಿದನು. "ತಮ್ಮೊಡನೆ ನೂರುಜನ ಗುಲಾಮರು ಚಿನ್ನದ ತಟ್ಟೆಯಲ್ಲಿ ನೂರುಚೀಲ ಹೊನ್ನನ್ನು ಹೊತ್ತು ತರುತ್ತಾರೆ. ತಾವು ಮುಂದೆ ನಡೆಯಿರಿ. ತಮ್ಮನ್ನು ಹಿಂಬಾಲಿಸಿ ಹೊತ್ತು ತಂದ ಹೊನ್ನನ್ನು ಎಲ್ಲಿಬೇಕೋ ಅಲ್ಲಿ ಇರಿಸಿ ಬರುತ್ತಾರೆ" ಎಂದು ಬೀಳ್ಕೊಟ್ಟ.

ಕೇವಲ ಒಂದು ತಾಸಿನೊಳಗೆ ನೂರು ಚೀಲದ ಹೊನ್ನು ನನ್ನ ಮನೆಯನ್ನು ಸೇರಿತು. ಹೊನ್ನನ್ನು ಹೊತ್ತು ತಂದಿದ್ದ ಗುಲಾಮರಿಗೆ ಸನ್ಮಾನವನ್ನು ಕೊಟ್ಟು ಕಳುಹಿಸಿದೆ. ಸುಂದರಿಯ ಸ್ಥಾನ—ಅವಳ ಪ್ರಭಾವ, ಇವು ಈಗ ನನಗೆ ಅರಿವಾಗತೊಡಗಿದುವು. ಇಷ್ಟಾದರೂ ಅವಳ ವಿಚಾರವು ಗುಪ್ತವಾಗಿಯೇ ಉಳಿಯಿತು. ನನ್ನ ಕುತೂಹಲವನ್ನು ಈಡೇರಿಸಿಕೊಳ್ಳಲು ನಾನವಳನ್ನು ಕೇಳಲೇ? ಛೇ! ಕೂಡದು ಎಂದು ಕಟ್ಟಪ್ಪಣೆಯಾಗಿತ್ತಲ್ಲವೇ? ನನ್ನ ಬಾಯಿ ಬಿಗಿದಂತಾಯಿತು. ನನಗೆ ಬೇಕಾದುದು ವ್ರಯಕ್ಕೆ ಹಣ. ಅದು ಯಥೇಚ್ಛ ವಾಗಿ, ನಿರಾಯಾಸವಾಗಿ, ದೊರೆತ ಬಳಿಕ ಅವಳು ಯಾರಾದರೇನಂತೆ?

# ೧೨

ಹಣದ ಚೀಲಗಳು ಬಂದಮೇಲೆ ಹತ್ತೆಂಟು ದಿನಗಳು ಕಳೆದುವು. ಒಂದು ದಿನ ಮೋಹನಾಂಗಿಯಾದ ಆ ತರುಣಿ ನನ್ನತ್ತ ಧಾವಿಸಿ ಬಂದು "ನಿನಗೊಂದು ಮಾತನ್ನು ಹೇಳಬೇಕಾಗಿದೆ" ಎಂದಳು.

ತರುಣಿಯು ಈರೀತಿ ನನ್ನೊಡನೆ ಮಾತನಾಡಿದುದು ಇದೇ ಮೊದಲು. ಅವಳೇನು ಹೇಳಬಯಸುವಳೋ ಎಂದು ನನಗೆ ನಿಮಿಷಮಾತ್ರದಲ್ಲಿ ಏನೇನೋ ಯೋಚನೆಗಳು ಹೊಳೆದುವು, ಅಲ್ಲಿಂದ ತಾನು ಹೊರಟು ಹೋಗುವೆನೆಂದು ಅವಳು ಹೇಳಬಹುದೇ ? ನನ್ನನ್ನು ಕುರಿತು "ಹಣದೊಂದಿಗೆ ಹೊರಟು ಹೋಗು ಎಂದು ಹೇಳಬಹುದೇ ? ನೀನು ಮಾಡಿದ ಸೇವೆಗೆ ನಾನು ಬಹಳ ಕೃತಜ್ಞಳಾಗಿದ್ದೇನೆ. ಪ್ರಾಣವನ್ನುಳಿಸಿದ ನೀನೇ ನನ್ನ ಪ್ರಾಣಪ್ರಿಯನು. ನಿನ್ನನ್ನುಳಿದು ನಾನು ಮತ್ತೆ ಯಾರನ್ನು ಪಾಣಿಗ್ರಹಣಮಾಡಿಕೊಳ್ಳಲಿ ? ಎಂದು ಹೇಳಬಯಸುವಳೇ ? ಅಥವಾ, 'ನಿನ್ನ ಅಂತಸ್ತಿಗೂ ನನ್ನ ಅಂತಸ್ತಿಗೂ ಅಜಗಜಾಂತರ ವ್ಯತ್ಯಾಸವಿದೆ. ನನ್ನನ್ನು ಮದುವೆ ಮಾಡಿಕೊಳ್ಳಬೇಕೆಂಬ ಬಯಕೆ ಇದ್ದರೆ ಅದನ್ನೀಗಲೇ ಮರೆತುಬಿಡು" ಎಂದು ಹೇಳಬಹುದೇ ? ಈ ತೆರನಾದ ವಾದಗಳು ನನ್ನ ಅಂತರಂಗದಲ್ಲಿ ತಲೆದೋರಿದುವು. ಅಷ್ಟರಲ್ಲೇ ತರುಣಿಯು ಮತ್ತೆ ನನ್ನನ್ನು ಕುರಿತು ಹೇಳಿದಳು:

"ನೋಡು, ಮನುಷ್ಯನಿಗೆ ನಿಜವಾದ ಭೂಷಣವೆಂದರೆ ಗುಣ. ಆದರೂ ನಾವಿರುವ ಈ ಪ್ರಪಂಚದಲ್ಲಿ ಎಷ್ಟೇ ಗುಣವಂತರಾದವರೂ ಆದಷ್ಟು ಭೂಷಣವಾಗಿರಬೇಕು. ವೇಷಭೂಷಣಗಳು ಆಕರ್ಷಣೀಯವಾಗಿಲ್ಲದಿದ್ದರೆ ಜನರೆದುರಿನಲ್ಲಿ ತಾತ್ಸಾರಕ್ಕೆ ಗುರಿಯಾಗಬೇಕಾದೀತು. ನೀನು ತೊಟ್ಟಿರುವ ತೊಡಿಗೆ ನೋಡುವುದಕ್ಕೆ ಅಷ್ಟೇನೂ ಚೆನ್ನಾಗಿ ಕಾಣುವುದಿಲ್ಲ. ಕಾಲಕ್ಕೆ ತಕ್ಕ ವೇಷ— ಭೂಷಣ ಎಲ್ಲಾ ಬೇಕು. ಹೋಗು; ಎರಡು ಚೀಲ ಹೊನ್ನನ್ನು ಹೊತ್ತು

ಕೊಂಡು ಸರಾಫ್ ಕಟ್ಟೆಗೆ ಹೋಗು. ಅಲ್ಲಿ ಚೌಕದಲ್ಲಿ ನಾಲ್ಕನೆ ಅಂಗಡಿ ಎಲ್ಲಕ್ಕಿಂತಲೂ ದೊಡ್ಡದಾಗಿರುತ್ತದೆ. ಅದರ ಒಡೆಯನ ಹೆಸರು ಮಲ್ಲಿಕ್ ಹಸನ್ ಎಂದು. ಅವನು ತರುಣ; ಸುಪ್ರಸಿದ್ಧ ವರ್ತಕ. ನನ್ನ ಹೆಸರನ್ನು ಎತ್ತೀಯೆ—ಹುಷಾರ್! ಅವನಲ್ಲಿ ಬೆಲೆಬಾಳುವ—ಅಂದ ಚಂದವಾದ ನಾಲ್ಕಾರು ಉಡುಪುಗಳನ್ನು ನಿನಗಾಗಿ ಕೊಂಡುಕೋ. ಹಾಗೆಯೇ ಮೂರು ನಾಲ್ಕು ಉತ್ತಮವಾಗಿರುವ ಕಾಶ್ಮೀರದ ಶಾಲುಗಳನ್ನೂ ಅವನಲ್ಲಿರುವ ಆಭರಣಗಳಲ್ಲಿ ಅತ್ಯಂತ ಅಮೂಲ್ಯವಾದ ಎರಡನ್ನೂ ಕೊಂಡು ತಾ—ಆಭರಣಗಳು ಯಾರಿಗೆ ಎಂದು ಕೇಳಿಯಾನು. "ನನ್ನ ಹೆಂಡತಿಗೆ ಎಂದು ಹೇಳು."

"ಆಗಲಿ" ಎನ್ನುತ್ತ ಹಣದ ಚೀಲಗಳನ್ನು ತೆಗೆದುಕೊಂಡು ಕುದುರೆ ಹತ್ತಿ ನಾನು ಬಜಾರಕಡೆ ಹೊರಟೆ. ಸರಾಫ ಕಟ್ಟೆಯನ್ನು ಮುಟ್ಟಿ, ಚೌಕದಲ್ಲಿರುವ ನಾಲ್ಕನೆಯ ಅಂಗಡಿಬಳಿ ಹೋದೆ. ಹೊರಗಡೆ "ಮಲ್ಲಿಕ್ ಹಸನ್" ಎಂದು ದೊಡ್ಡದಾಗಿ ವಿಳಾಸ ಕಂಡಿತು. ನನ್ನನ್ನು ಕಂಡೊಡನೆಯೇ ಅತಿಸುಂದರ ಸ್ವರೂಪನಾದ ಯುವಕನೊಬ್ಬನು ಕುಳಿತಿದ್ದೆಡೆಯಿಂದ ಇಳಿದು ಬಂದು ಕುದುರೆ ಲಗಾಮನ್ನು ಹಿಡಿದುಕೊಂಡು, ಅದನ್ನು ತಟ್ಟಿ ವೈದಡವಿ

"ಯಾರನ್ನು ಹುಡುಕುತ್ತಿದ್ದೀರಿ?" ಎಂದು ಕೇಳಿದ.

"ಮಲ್ಲಿಕ್ ಹಸನ್ ಅವರ ಅಂಗಡಿ ಇದೇನೇ?"

"ಹೌದು; ಆ ಹೆಸರುಳ್ಳ ಸೇವಕ ನಾನೇ. ಏನಾಗಬೇಕಿದ್ದಿತು? ಒಳಗೆ ದಯಮಾಡಿಸಬಹುದಲ್ಲ."

ಎನ್ನುತ್ತ ಮಲ್ಲಿಕ್ ಹಸನನು ಅತಿ ಮರ್ಯಾದೆಯಿಂದ ನನ್ನನ್ನು ಅಂಗಡಿಯೊಳಕ್ಕೆ ಕರೆದೊಯ್ದು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ತಂಪಾದ ಪಾನೀಯಗಳನ್ನು ತರಿಸಿ ಕುಡಿಸಿದನು. ಬಳಿಕ ಅವನು ಕೇಳಿದ :

"ತಮ್ಮ ಊರು? ಬಂದ ಕೆಲಸ? ಇಲ್ಲೆಷ್ಟು ದಿನಗಳಿಂದ ಇದ್ದೀರಿ? ಏನು ಕಾರ್ಯಾರ್ಥ ಬಂದಿರುವಿರಿ?"

ಈಗ ನಾನು ಸಿಲುಕಿಬಿದ್ದ ಇಕ್ಕಟನ್ನು ದೇವರೇ ಬಲ್ಲ. ಇವನಿಗೇನೆಂದು ಹೇಳಲಿ ? ಬಂದದ್ದೇನೋ ವ್ಯಾಪಾರಕ್ಕೆ—ನಿಜ. ಆದರೆ ನೋಡಿದ್ದು—ಮಾಡಿದ್ದು ? ಕ್ಷಣಕಾಲ ಯೋಚಿಸಿದೆ. ಥಟಕ್ಕನೆ ಮಹಮದ್ ಈಸಾಗೆ ನಾನು ಕಲ್ಪಿಸಿ ಹೇಳಿದ ಕಾಲೋಚಿತ ಕಥೆಯು, ನೆನಪಿಗೆ ಬಂದಿತು. ಅದನ್ನೇ ಇನ್ನೂ ಬಣ್ಣಬಣ್ಣವಾಗಿ ಬಿತ್ತರಿಸಿ ಮಲ್ಲಿಕ್‌ಹಸನನಿಗೆ ಹೇಳಿಬಿಡೋಣವೆಂದು ಬಾಯಿ ತೆರೆದೆ. ಅಷ್ಟರಲ್ಲಿ ತರುಣಿಯು ಎಚ್ಚರಿಕೆಯ ಮಾತುಗಳು ನನ್ನ ಕಣ್ಣುಮುಂದೆ ಬಂದು ನಿಂತುವು. ಆಗ ಮಾತನ್ನು ನಿಮಿಷಮಾತ್ರದಲ್ಲಿ ಹೊರಳಿಸಿ "ನಮ್ಮ ದೇಶದಿಂದ ಹಡಗಿನಲ್ಲಿ ಸರಕುಗಳು ಬರುವುದಾಗಿ ವದಂತಿ ಬಂದಿದೆ. ಅದಕ್ಕಾಗಿ ಕಾದಿದ್ದೇನೆ. ಈ ಪ್ರಾಂತ್ಯದ ಆಭರಣಗಳು ನಮ್ಮ ಕಡೆಯ ಆಭರಣಗಳಿಗಿಂತ ಅಗ್ಗವೂ, ಉತ್ತಮವೂ, ಉತ್ಕೃಷ್ಟವೂ ಆದುವೆಂದು ತಿಳಿದ ನಮ್ಮ ಸುಲ್ತಾನನು ತನ್ನ ಪಟ್ಟದರಸಿಗೆ ಎರಡು ಅಮೂಲ್ಯ ಆಭರಣಗಳನ್ನು ಕೊಂಡುತರುವಂತೆ ಹೇಳಿ ಕಳುಹಿಸಿದರು. ಅದನ್ನು ಕೊಳ್ಳೋಣವೆಂದೇ ಬಂದೆ." ಎಂದು ಮುಂತಾಗಿ ಸಮಯಸ್ಫೂರ್ತಿಯಿಂದ ಹೇಳಿದೆ. ನನ್ನ ಕಥೆಯು ನಿಜವೆಂದೇ ಮಲ್ಲಿಕನು ನಂಬಿದ. ವಸ್ತ್ರಭೂಷಣಗಳನ್ನು ಕೊಂಡವನೇ ನಾನು ಅವುಗಳ ಮೌಲ್ಯವನ್ನು ಮಲ್ಲಿಕ್‌ಹಸನನಿಗೆ ಸಲ್ಲಿಸಿ ಕುದುರೆ ಹತ್ತಿ ಹೊರಡುವುದರಲ್ಲಿದ್ದೆ. ಆಗ ಮಲ್ಲಿಕನು ನನ್ನನ್ನು ನಿಲ್ಲಿಸಿ ಹೇಳಿದ :

"ಇದೇನಿದು ಮಿತ್ರ ! ಹೀಗೆ ಏಕಾಏಕಿ ಹೊರಟುಹೋದಾರುಂಟೇ ? ನಮ್ಮ ಪ್ರಾಂತ್ಯದ ವಿಚಾರಗಳನ್ನೆಲ್ಲ ಕೇಳಬೇಡವೇ ? ವ್ಯಾಪಾರವಾಯಿತು. ಕ್ಷಣಕಾಲ ವಿಶ್ರಮಿಸಿಕೊಳ್ಳಬಾರದೇ ? ಈಗ ನಾವು ಸ್ನೇಹಿತರು. ನಡೆಯಿರಿ ; ನನ್ನ ಕುಟೀರಕ್ಕೆ ಹೋಗೋಣ ; ಇಂದು ಸಂಜೆ ನಾನು ನಿಮ್ಮ ನೆನಪಿಗಾಗಿ ಸತ್ಕಾರಕೂಟವನ್ನು ಏರ್ಪಡಿಸುತ್ತೇನೆ. ನನ್ನ ಇಷ್ಟಮಿತ್ರರೆಲ್ಲರಿಗೂ ಆಹ್ವಾನ ಕಳುಹಿಸುತ್ತೇನೆ. ಎಲ್ಲರೂ ಕೂಡಿ ಔತಣದ ಊಟವನ್ನು ಸವಿದು ಸಂತಸದಿಂದ ನಕ್ಕು ನಲಿಯೋಣ. ಆಗಬಹುದೆ ? ನಿಲ್ಲುವಿರಾ ? ಇಲ್ಲ ಎನ್ನಕೂಡದು ? ನಿಮ್ಮಂತಹ ಅತಿಥಿಗಳು ಲಭಿಸುವುದು ಎಷ್ಟೋ ಕಾಲಕ್ಕೊಮ್ಮೆ. ಹುಡುಕಿಬಂದ ಗೆಳೆಯನನ್ನು ಔತಣಕ್ಕೆ ಕರೆಯದೆ ಹೋಗಗೊಡುವುದು ನಮ್ಮ ದೇಶದ ಪದ್ಧತಿಗೆ ಸರಿಬಾರದು. ಏನೆಂದಿರಿ ? ಮನೆಗೆ ಹೋಗಬೇಕೇ ? ಆದೀತು.

ಆದರೆ ಈದಿನ ಸಂಜೆ ನಿಮಗಾಗಿ ನಾನು ಕಾದಿರುತ್ತೇನೆ. ನನ್ನ ಕುಟೀರಕ್ಕೆ ತಪ್ಪದೆ ಬಿಜಯಮಾಡಿಸಬೇಕು. ನನ್ನ ಆತಿಥ್ಯವನ್ನು ಸ್ವೀಕರಿಸಬೇಕು. 'ಬರುತ್ತೇನೆ' ಎಂದು ವಾಗ್ದಾನಕೊಡುವಿರಾದರೆ ಮಾತ್ರ ಹೋಗಿ ಬನಿ ಇಲ್ಲವಾದರೆ ಇಂತಹ ಅತಿಥಿಗಳನ್ನು ಹೋಗಗೊಡಲಾರೆ." ಎಂದು ಮಲ್ಲಿಕನು ಒತ್ತಾಯಪಡಿಸಿದ.

ಕೊನೆಗೆ ನಾನು ಎಷ್ಟೋ ಬಗೆಯಲ್ಲಿ ಸಮಾಧಾನ ಹೇಳಿ, ಔತಣಕ್ಕೆ ಬರುತ್ತೇನೆಂದು ಒಪ್ಪಿಕೊಂಡಮೇಲೆಯೇ ಮಲ್ಲಿಕ್ ಹಸನನು "ಆಗಲಿ, ಮನೆಗೆ ಹೋಗಿ ; ಕೊಂಡ ಸರಕುಗಳನ್ನು ಮನೆಯಲ್ಲಿರಿಸಿ ವಿಶ್ರಾಂತಿಪಡೆದು ಸಂಜೆಗೆ ಬನ್ನಿ. ನಿಮ್ಮ ಮಾತಿನಲ್ಲಿ ನನಗೆ ವಿಶ್ವಾಸವುಂಟು" ಎನ್ನುತ ನನ್ನನ್ನು ಬೀಳ್ಕೊಟ್ಟ.

ಅನಿರೀಕ್ಷಿತವಾಗಿ ಇಕ್ಕಟ್ಟಿಗೆ ಸಿಲುಕಿಬಿದ್ದ ನಾನು ಏನು ಮಾಡುವುದಕ್ಕೂ ದಾರಿಗಾಣದೆ ದಾರಿಯುದ್ದಕ್ಕೂ ಯೋಚಿಸುತ್ತ ಮನೆ ಸೇರಿದೆ.

೧೩

ಮಲ್ಲಿಕ್ ಹಸನನ ಅಂಗಡಿಯಲ್ಲಿ ನಾನು ಕೊಂಡುತಂದ ವಸ್ತ್ರಾಭರಣಗಳನ್ನು ಮನೆಗೆ ಸೇರಿಸಿದೆ. ತರುಣಿಯು ಅವುಗಳನ್ನು ಆತುರದಿಂದ ನೋಡಿದವಳು ಅವು ಬಹಳ ಲಕ್ಷಣವಾಗಿವೆಯೆಂದು ಸಂತೋಷಪಟ್ಟಳು. ನೂತನ ಉಡುಪನ್ನು ಧರಿಸಬೇಕೆಂದು ನನ್ನನ್ನು ಒತ್ತಾಯಪಡಿಸಿ ನಾನವುಗಳನ್ನು ಧರಿಸಿದಮೇಲೆ, "ಈಗ ಸರಿ" ಎಂದು ನನ್ನನ್ನು ಕಂಡು ಹೊಗಳಿದಳು.

ಬಳಿಕ ನಾವಿಬ್ಬರೂ ಊಟಕ್ಕೆ ಕುಳಿತೆವು. ಊಳಿಗದವಳು ಬಡಿಸುತ್ತಿದ್ದಳು. ತರುಣಿಯೊಡನೆ ನಾನು ಸಹ ಭೋಜನಮಾಡಿದ್ದು ಅಂದೇ ಮೊದಲು. ತರುಣಿಯೇನೋ ಹೊಟ್ಟೆತುಂಬ ಊಟಮಾಡಿದಳು. ಅವಳಿಗೆ ಈಗ ಆರೋಗ್ಯವು ಹಿಂದಿರುಗುತ್ತಿತ್ತು. ಆದರೆ ನಾನು! ನನ್ನ ಪಾಡನ್ನೆಂತು ವರ್ಣಿಸಲಿ? ಆ ಸುಂದರಿಯ ಅರವಿಂದ ಲೋಚನಗಳನ್ನೂ ಮೃದುವಾದ, ಅವಳ ಗುಲಾಬಿ ಬಣ್ಣದ ಕಪೋಲಗಳನ್ನೂ, ಕಳ್ಳನೋಟದಿಂದ ನೋಡಿ ನೋಡಿ ನಲಿಯುತ್ತಿದ್ದೆ. ಆ ಸುಂದರಿಯನ್ನು ಸುಮ್ಮನೆ ನೋಡುತ್ತಿದ್ದರೆ ಸಾಕು; ಊಟವೂ ಬೇಡ—ಏನೂ ಬೇಡ ಎನ್ನಿಸುತ್ತಿತ್ತು ನನಗೆ. ಅಂದು ಅವಳು ಅಷ್ಟೊಂದು ಸುಮನೋಹರ ಸ್ವರೂಪಳಾಗಿದ್ದಳು. ಚಿನ್ನದ ಮೊಹರಿನ ಚೀಲಗಳನ್ನು ತರಿಸಿ ನನ್ನ ಕಷ್ಟಗಳನ್ನು ಕ್ಷಣಮಾತ್ರದಲ್ಲಿ ಪರಿಹರಿಸಿದ್ದು; ಅಂಗಡಿಗೆ ಕಳುಹಿಸಿ ನನಗೆ ನೂತನ ವಸ್ತ್ರಗಳನ್ನೂ ತನಗೆ ದಿವ್ಯಾಭರಣಗಳನ್ನೂ ತರಿಸಿದ್ದು; ತನ್ನೊಡನೆ ಕುಳ್ಳಿರಿಸಿಕೊಂಡು ಸಹ ಭೋಜನ ಮಾಡಿಸಿದ್ದು; ಆಗಿಂದಾಗ್ಗೆ ಅವಳ ಸುಂದರ ವದನದಲ್ಲಿ ಸಂತೋಷದ ಚಿನ್ಹೆಗಳು ಎದ್ದು ಕಾಣುತ್ತಿದ್ದುದು; ಇವೆಲ್ಲವನ್ನೂ ನೋಡಿದ ನನಗೆ ಅವಳು ನನ್ನಲ್ಲಿ ಕೃಪಾ ದೃಷ್ಟಿಯನ್ನು ಬೀರತೊಡಗಿರುವಳೆಂದೇ ಭಾಸವಾಯಿತು. ಆನಂದದ ನಿರೀಕ್ಷಣೆಯಲ್ಲಿ ಇಷ್ಟಾರ್ಥ ಸಿದ್ಧಿಗಾಗಿ ಆತುರ ಪಡುವುದು ಮಾನವನ ಲಕ್ಷಣ. ಅವಳು ನನ್ನ ಮತ್ತು ತನ್ನ ವಿವಾಹಕ್ಕೆ

ಸಮ್ಮತಿಸುವ ಯಾವುದಾದರೂ ಸರಿಮಾತುಗಳನ್ನು ಆಡಿ ನನ್ನ ವಿರಹತಾಪ ವನ್ನು ಶಮನ ಗೊಳಿಸಬಾರದೇಕೆ ಎಂದು ನಾನು ಕ್ಷಣ ಕ್ಷಣದಲ್ಲಿಯೂ ಆತುರ ಗೊಂಡೆ. ನನ್ನ ಆತುರವು ಹೆಚ್ಚಿದಂತೆಲ್ಲ. ಅವಳ ಚರ್ಯೆಯು ನಿಧಾನಗೊಂ ಡಂತೆ ಕಂಡಿತು. ಹೆಚ್ಚೇಕೆ? ಆವಳು ನನ್ನೊಡನೆ ವಿವಾಹದ ಪ್ರಸಕ್ತಿಯನ್ನೇ ಎತ್ತಲಿಲ್ಲ. ವಿವಾಹದ ಪ್ರಸಕ್ತಿಯೇಕೆ? ನಿಜ ಹೇಳುವುದಾದರೆ ಅವಳು ಅದರ ಹತ್ತಿರವೇ ಸುಳಿಯಲಿಲ್ಲ ನಾನಾಗಿ ಅವಳಲ್ಲಿ ಆದಿಯಿಂದ ನನಗುತ್ಪನ್ನವಾದ ಪ್ರೇಮವನ್ನು ಪ್ರಕಟಗೊಳಿಸಲೇ? ಛೇ! ಹಾಗೆ ಮಾಡುವುದು ಶುದ್ಧ ತಪ್ಪು. ಅವಳು ಮೊದಲೇ ನನ್ನನ್ನು ಎಚ್ಚರಿಸಿದ್ದಾಳೆ. "ಎದುರುಮಾತನಾಡಕೂಡದು; ಹೇಳಿದಷ್ಟನ್ನು ಮಾತ್ರ ಮಾಡಬೇಕು" ಎಂದು ಮುಂತಾಗಿ, ಹೇಳಿರುವಾಗ ನಾನಾಗಿ ನನ್ನ ಪ್ರೇಮವನ್ನು ಪ್ರಕಟಿಸಿ ಕಾರ್ಯ ನಾಶಮಾಡಿಕೊಳ್ಳಲೇ? ಹೇಗೋ ಅವಳ ಇಚ್ಛೆಯಂತೆ. ಅವಳ ಇಷ್ಟಾನುವರ್ತಿಯಾಗಿ ಸೇವೆ ಸಲ್ಲಿಸುತ್ತಾ ಬಂದರೆ ಇಂದಿಲ್ಲದಿದ್ದರೆ ನಾಳೆ ಅಥವಾ ಎಂದಾದರೊಂದು ದಿನ ಅವಳು ನನಗೆ ಸುಪ್ರಸನ್ನಳಾದಾಳು? ಅದಿರಲಿ; ಕೇವಲ ಒಂದು ತುಂಡು ಕಾಗದದಲ್ಲಿ ನಾಲ್ಕು ಸಾಲು ಬರೆದು ಗುರುತಿಗೆ ಮುದ್ರೆಯನ್ನು ಕಳುಹಿಸಿ ಕ್ಷಣಕಾಲದಲ್ಲಿ ನೂರು ಚೀಲ ಪೊನ್ನಿನ ಮೊಹರುಗಳನ್ನು ತರಿಸಿದ ಇವಳು ಸಾಮಾನ್ಯಳೇ? ಹೊನ್ನನ್ನು ಹೊತ್ತು ತಂದವರು ನೂರು ಜನ ಗುಲಾಮರು! ಇದನ್ನು ಯೋಚಿಸಿದರೆ ಇವ ಳೇನೂ ಸಾಮಾನ್ಯಳಲ್ಲ. ಇವಳ ಅಂತಸ್ತು ಅತ್ಯುನ್ನತವಾದುದೆಂದೇ ಸ್ಪಷ್ಟವಾಗಿ ಅರಿವಾಗುತ್ತದೆ. ಆ ಮಾತೊಂದಕಡೆಯಲ್ಲಿ ಇರಲಿ. ಇವಳು ವಿವಾಹಿತಳೇ? ತನ್ನ ಪತಿಗೆ ದ್ರೋಹಮಾಡಿರಬಹುದೇ? ಅದರಿಂದ ಕುಪಿತನಾಗಿ ಅವನು ಇವಳನ್ನು ಕತ್ತಿಯಿಂದ ನಾಲ್ಕಾರು ಸಲ ತಿವಿದು ಘಾಯಗೊಳಿಸಿ "ಸಾಯಿ" ಎಂದು ತಿರಸ್ಕಾರದಿಂದ ಹೊರಗೆಸೆದಿರಬಹುದೇ? ಇಷ್ಟೊಂದು ಸುಂದರ ಮನ ಮೋಹಕ ತರುಣಿಯನ್ನು ಕೂರಲಗಿನ ಕತ್ತಿಯಿಂದ ತಿವಿದವನ ಮನಸ್ಸು ಕಠಿಣ ವಾಗಿರಬಹುದೇ? ಅಥವಾ ಇವಳನ್ನು ಬಲಾತ್ಕರಿಸಿ, ಇವಳು ಒಡಂಬಡದ್ದಕ್ಕೆ ಹತಾಶನಾಗಿ ಇವಳನ್ನು ತಿವಿದು ಎತ್ತಿಹಾಕಿರಬಹುದೇ? ಹಾಗಲ್ಲದಿದ್ದರೆ ಇವಳು ಮಾಡಿದ ಅಪರಾಧವು ಮಿತಿಮಿಂಚಿದ್ದಾಗಿರಬಹುದೇ? ಇಷ್ಟು ಪ್ರಭಾವ ಶಾಲಿಗೂ, ಕುಲೀನಳೂ, ಅತುಳೈಶ್ವರ್ಯಕ್ಕೆ ಒಡತಿಯೂ ಆದ ಇವಳಿಗೆ ಅಂಗ

ರಕ್ಷಕರಿರಲಿಲ್ಲವೇ ? ಒಬ್ಬ ಕ್ರೂರಾತ್ಮನ ಕೈಯಲ್ಲಿ ಸಿಲುಕಿಬಿದ್ದು ಸಾವಿನ ದವಡೆಯಲ್ಲಿ ನುಸುಳಿ ಹೋಗಬೇಕಾದ ಪ್ರಮೇಯವೇನಿತ್ತು ? ಯೋಚಿಸಿದೆ ; ಯೋಚಿಸಿದೆ ; ಯೋಚಿಸಿದೆ. ನನ್ನ ತಲೆ ಬೆಂಡಾಗಿ ಹೋಯಿತು, ಯಾವುದೋ ಒಂದು ಕಾರಣವನ್ನು ಸಮಂಜಸವಾಗಿ ಕಂಡುಕೊಳ್ಳಲಾರದೆ ಹೋದೆ. ಹೀಗೆ ಯೋಚನಾತರಂಗಗಳಲ್ಲಿ ಮುಳುಗಿದ್ದ ನನ್ನ ಮುಖವನ್ನು ದಿಟ್ಟಿಸಿ ತರುಣಿಯು ಕೇಳಿದಳು :

"ತಟ್ಟೆಯಲ್ಲಿ ಬಡಿಸಿರುವುದು ಕಾಣುವುದಿಲ್ಲವೇ ? ಏನು ಯೋಚಿಸು ತ್ತಿರುವೆ ?"

ಆಗ ನನಗೆ ಎಚ್ಚರ ಬಂದಿತು, ನಾನು ನಾಚಿದೆ. ಅವಳಿಗೇನೆಂದು ಹೇಳಬೇಕೋ ತೋರಲಿಲ್ಲ. ದೇವರ ಕೃಪೆಯಿಂದ ಅವಳೇ ನನಗೆ ಸೂಚನೆ ಯನ್ನು ನೀಡಿದಂತೆ ಮಾತಿಗೆ ಮೊದಲಿಟ್ಟಳು.

"ಅಂಗಡಿಗೆ ಹೋಗಿದ್ದೆಯಲ್ಲ, ಮಲ್ಲಿಕ್ ಹಸನ್ ನಿನ್ನೊಡನೆ ಏನು ಹೇಳಿದ ?

ಸದ್ಯ ಬದುಕಿದಂತಾಯಿತು ಎಂದುಕೊಂಡೆ. ನನ್ನ ಮನಸ್ಸಿನಲ್ಲಿ ಆ ಮುನ್ನ ಕ್ಷಣಮಾತ್ರದಲ್ಲಿ ಹೊಳೆದ ಹತ್ತಾರು ಕಠಿಣತರ ಸಮಸ್ಯೆಗಳನ್ನು ಮರೆತು ಮುಚ್ಚಿಟ್ಟು ಅವಳಿಗೊಪ್ಪುವ ನಾಲ್ಕು ಮಾತುಗಳನ್ನು ಹೇಳುವ ಅವಕಾಶವನ್ನು ಅವಳೇ ಕಲ್ಪಿಸಿಕೊಟ್ಟಂತಾಯಿತು, ನಾನು ಹೇಳಿದೆ :

"ಮಲ್ಲಿಕ್ ಹಸನನ ಅಂಗಡಿಯನ್ನು ಕಂಡುಹಿಡಿಯುವುದೇನೂ ನನಗೆ ಅಷ್ಟೊಂದು ಕಷ್ಟವಾಗಲಿಲ್ಲ. ನಾನವನ ಅಂಗಡಿ ಮುಂದೆ ನೆಟ್ಟಗೆ ಹೋದೆ. ಅವನೇ ಅಂಗಡಿಯಿಂದೆದ್ದು ಬಂದು ನನ್ನ ಕುದುರೆಯ ಕಡಿವಾಣವನ್ನು ಹಿಡಿದು ನಿಲ್ಲಿಸಿ, ಕುದುರೆಯ ಬೆನ್ನನ್ನು ಕನಿಕರದಿಂದ ತಟ್ಟಿ ಅತ್ಯಾದರ ಗೌರವಗಳಿಂದ ನನ್ನನ್ನು ಅಂಗಡಿಯೊಳಕ್ಕೆ ಕರೆದುಕೊಂಡು ಹೋದ. ತಂಪಾದ ಪಾನೀಯ ಗಳನ್ನು ಕುಡಿಸಿ ಸತ್ಕರಿಸಿದ. ನನ್ನ ಕ್ಷೇಮಲಾಭಗಳನ್ನು ವಿಚಾರಿಸಿ ನಮ್ಮೂರು, ನನ್ನ ಉದ್ಯೋಗ ಈ ನಗರದಲ್ಲಿ ಇಷ್ಟು ಕಾಲ ನಿಂತುದೇಕೆ ಎಂದು ಮುಂತಾಗಿ ಅನೇಕ ಪ್ರಶ್ನೆಗಳನ್ನು ಬರಬರನೆ ಕೇಳಿದ; ಎಲ್ಲ ಪ್ರಶ್ನೆಗಳಿಗೂ ಸಮಂಜಸವಾಗಿ

ಉತ್ತರಕೊಟ್ಟೆ. ಆದರೆ ಕೊನೆಯ ಪ್ರಶ್ನೆಮಾತ್ರ ನನ್ನ ಕುತ್ತಿಗೆ ಹಿಡಿದಂತೆ ಆಯಿತು. ಈ "ನಗರದಲ್ಲಿ ಇಷ್ಟುದಿನಗಳು ನಿಂತಿದ್ದೇಕೆ? ಎಂದು ಅವನು ಕೇಳಿದ ಪ್ರಶ್ನೆಗೆ ನಾನು ಹೇಗೆ—ಏನೆಂದುತಾನೆ—ಉತ್ತರ:ಹೇಳಲಿ? ನಿಜವಾದ ಸಂಗತಿಯನ್ನು ಹೇಳಿದರೆ ನಿನ್ನ ವಿಚಾರವನ್ನೆಲ್ಲ ಆದ್ಯಂತ ಹೇಳಲೇಬೇಕಾ ಗಿದ್ದಿತು, ಆದರೆ ನೀನು ಮೊದಲೇ ನನ್ನನ್ನು ಎಚ್ಚರಿಸಿದ್ದೆಯಲ್ಲವೇ? ಯಾರ ಲ್ಲಿಯೂ ನಿನ್ನ ವಿಚಾರ ಎಳ್ಳಷ್ಟೂ ಪ್ರಸ್ತಾಪ ಮಾಡಕೂಡದು ಎಂಬ ನಿನ್ನ ಕಟ್ಟಪ್ಪಣೆಯನ್ನು ನಾನು ಮರೆತಿರಲಿಲ್ಲ. ಆದುದರಿಂದಲೇ ಸಮಯೋಚಿತವಾಗಿ ಅವನು ಒಪ್ಪುವರೀತಿಯಲ್ಲಿ ಒಂದು ಕಥೆಯನ್ನು ಕಲ್ಪನೆಮಾಡಿ ಹೇಳಿಬಿಟ್ಟೆ."

"ಏನೆಂದು ಹೇಳಿದೆ?" ಎಂದು ತರುಣಿ ಕೇಳಿದಳು.

"ಇನ್ನೇನು ಹೇಳಲಿ? ನಮ್ಮ ಪ್ರಾಂತ್ಯದಿಂದ ಹಡಗಿನ ಸರಕುಗಳು ಹೊರಟಿರುವುದಾಗಿ ನನಗೆ ಸಮಾಚಾರ ಮುಟ್ಟಿತು. ಅವುಗಳಿಗಾಗಿಯೇ ಕಾದಿದ್ದೇನೆ" ಎಂದೆ.

"ಒಳ್ಳೆಯದು; ಇನ್ನೇನು ಕೇಳಿದ?" ತರುಣಿ ಮತ್ತೆ ಕೇಳಿದಳು.

"ಈ ಊರಲ್ಲಿ ಆಭರಣಗಳು ಯಾವ ಸುಂದರ ಮನಮೋಹಿನಿಯ ಕೋಮಲ ಶರೀರವನ್ನು ಅಲಂಕರಿಸುವುದಕ್ಕಾಗಿ ಕೊಳ್ಳುತ್ತಿರುವೆ?" ಎಂದು ಕೇಳಿದ.

"ಅದಕ್ಕೆ ನೀನು ಹೇಳಿದ್ದು?" ತರುಣಿಯು ತವಕದಿಂದ ಕೇಳಿವಳು.

"ನಾನು ಹೇಳಿದ್ದು? ಅದನ್ನು ಯೋಚಿಸಿಯೇ ನನಗೆ ಈಗ ಕ್ಷಣಕಾಲದ ಮುನ್ನ ಆಶ್ಚರ್ಯವಾಯಿತು, ಮಲ್ಲಿಕನು ಆ ಮಾತನ್ನು ಕೇಳಿದಾಗ ನನಗೆ ಮಿಂಚಿನಂತೆ ನಿನ್ನ ಎಚ್ಚರಿಕೆಯು ಹೊಳೆಯಿತು, ಆಗ ದೇವರೇ ನನ್ನ ಸಹಾ ಯಕ್ಕೆ ಬಂದು ನನ್ನ ಬಾಯಲ್ಲಿ ಆಡಿಸಿಬಿಟ್ಟ. ನಾನು ಹೇಳಿದುದೇನು ಗೊತ್ತೆ? "ನಿಮ್ಮ ಪ್ರಾಂತ್ಯದಲ್ಲಿನ ಆಭರಣಗಳು ನಮ್ಮ ಪ್ರಾಂತ್ಯದ ಆಭರಣಗಳಿಗಿಂತಲೂ ಅತ್ಯಂತ ಅಮೌಲ್ಯವೂ, ಅಂದವೂ ಅಗ್ಗವೂ ಆದುದೆಂದು ನಮ್ಮ ಸುಲ್ತಾನರು ವರ್ತಕರಿಂದ ಕೇಳಿದ್ದರಂತೆ. ನಾನು ಈ ಪ್ರಾಂತ್ಯಕ್ಕೆ ವ್ಯಾಪಾರಕ್ಕೆ ಹೊರಟು

ಬರುವ ಮುನ್ನ ಅವರ ದರ್ಶನಕ್ಕೆ ಹೋಗಿ ನಜರು ಒಪ್ಪಿಸಿದೆ. ಆಗ ಅವರು ಡಮಾಸ್ಕಸ್ಸಿಗೆ ಹೋಗುವೆಯಾ? ಒಳ್ಳೆದಾಯಿತು, ಅಲ್ಲಿಂದ ಬರುವಾಗ ನಮ್ಮ ರಾಣಿಗೆ ಒಪ್ಪುವಂತಹ ರತ್ನಾಲಂಕಾರಭರಿತವಾದ ಎರಡು ದಿವ್ಯಾಭರಣಗಳನ್ನು ಕೊಂಡು ತಾ" ಎಂದಪ್ಪಣೆಮಾಡಿ ಕೋಶಾಧಿಕಾರಿಯನ್ನು ಕರೆದು ಹಣವನ್ನು ಕೊಡಿಸಿದ್ದರು. ಈ ಆಭರಣಗಳು ಸುಲ್ತಾನರ ಪಟ್ಟದರಸಿಗಾಗಿ." ಎಂದೆ ನಾನು.

ನನ್ನ ಮಾತನ್ನು ಕೇಳಿ ಮಲ್ಲಿಕ್ಕನು ಆನಂದದಿಂದ ತಲೆತೂಗಿದ, ಎಂದೆ. ಸುಂದರಿಯೂ ನನ್ನ ಚಾಕಚಕ್ಯತೆಯನ್ನು ಕಂಡು ಅನುಮೋದಿಸಿ ತಲೆದೂಗಿದಳು. ಹೇಗೂ ನಾನು ಕಷ್ಟದಿಂದ ಪಾರಾದೆ. ಆ ಬಳಿಕ ಮಲ್ಲಿಕ್ಕನು ನನ್ನನ್ನು ಅಂದು ಸಂಜೆ ಔತಣ ಸತ್ಕಾರಕ್ಕೆ ಬರಬೇಕೆಂದು, ಎಷ್ಟು ಹೇಳಿದರೂ ಬಿಡದೆ, ಒತ್ತಾಯ ಪಡಿಸಿದುದನ್ನು ತರುಣಿಯಲ್ಲಿ ಹೇಳಿದೆ. ಅಷ್ಟಕ್ಕೆ ನಿಲ್ಲದೆ 'ಇಷ್ಟು ದಿವಸವೂ ನಿನ್ನನ್ನು ಬಿಟ್ಟು ನಾನು ಅಗಲಿದವನೇ ಅಲ್ಲ. ಇಂದು ಹೇಗೆ ನಿನ್ನನ್ನು ಏಕಾಂಗಿ ಬಿಟ್ಟು ಹೋಗಲಿ?' ಎಂದು ಕೇಳಿದೆ.

"ನನ್ನ ವಿಚಾರಕ್ಕಾಗಿ ನೀನು ಕಾತುರಗೊಳ್ಳಬೇಡ. ಅಂತಹ ಪ್ರಸಿದ್ಧ ವರ್ತಕನು, ಗಣ್ಯ ಶ್ರೀಮಂತನು, ನಿನ್ನನ್ನು ಔತಣಕ್ಕೆ ಆಹ್ವಾನಿಸಿದಾಗ ಆಗದು ಎಂದು ಹೇಳುವುದು. ಧೂರ್ತತನದ ಲಕ್ಷಣವಾದೀತು. ಹೋಗು; ಖಂಡಿತ ವಾಗಿ ಹೋಗಿ ಬಾ" ಎಂದಳು.

ಅಲ್ಲಿಗೆ ನನ್ನ ಮನಸ್ಸು ಅವಳನ್ನು ಬಿಟ್ಟು ಅಗಲಿರಲು ಒಪ್ಪದಿದ್ದರೂ ಅವಳ ಅಪ್ಪಣೆಯನ್ನು ಅತಿಕ್ರಮಿಸಲಾರದೆ ಅಂದು ಸಂಜೆ ಔತಣಕ್ಕೆ ಹೋಗಲು ಒಪ್ಪಿಕೊಂಡೆ.

# ೧೪

ತರುಣಿಯಿಂದ ಬೀಳ್ಕೊಂಡು ನಾನು ಕುದುರೆ ಹತ್ತಿ ಮಲ್ಲಿಕ್‌ಹಸನನ ಭವನದ ಕಡೆ ಹೊರಟೆ. ನನ್ನ ಕುದುರೆ ಓಡಿದವೇಗವನ್ನು ಅದರ ಬೆನ್ನಿನಮೇಲೆ ನಾನು ಕಳೆದ ಕಾಲವನ್ನೂ ಲೆಕ್ಕ ಹಾಕಿದರೆ ನಮ್ಮ ಮನೆಯಿಂದ ಮಲ್ಲಿಕನ ವಾಸ ಸ್ಥಾನವು ದೂರವಾಗಿದ್ದಿತೆಂದೇ ಹೇಳಬೇಕು. ಕೊನೆಗೆ ನಗರದ ತುದಿಗೆ ಬಂದು ಸೇರಿದೆ. ಅನತಿದೂರದಲ್ಲಿ ಮಲ್ಲಿಕನು ಹೇಳಿದ ಗುರುತಿನಿಂದ ಎದುರಿಗಿದ್ದ ದಿವ್ಯವಾದ ಭವನವೇ ಅವನದೆಂದು ಕಂಡುಹಿಡಿದೆ. ಆ ಭವನದ ಸುತ್ತಲೂ ವಿಶಾಲವಾದ ಉದ್ಯಾನವನ. ಹೊರಬಾಗಿಲಲ್ಲಿ ಭೃತ್ಯತ್ವವನ್ನು ಸೂಚಿಸುವ ಉಡುಗೆ ತೊಡಿಗೆಗಳಿಂದಲಂಕೃತರಾದ ಗುಲಾಮರು. ನನ್ನ ಬರುವಿಕೆಯನ್ನು ಕಂಡು ಒಬ್ಬ ಗುಲಾಮನು ಒಳಗೆ ಓಡಿಹೋದ.

ಅತಿಕ್ಷಿಪ್ರದಲ್ಲಿಯೇ ಮಲ್ಲಿಕ್ ಹಸನನು ನನ್ನನ್ನು ಎದುರುಗೊಳ್ಳಲು ಬಂದ. ಅವನನ್ನು ಕಂಡ ನಾನೂ ನನ್ನನ್ನೂ ಕಂಡ ಅವನೂ ಒಬ್ಬರಿಗೊಬ್ಬರು ಕೈಮುಗಿದೆವು. ತರುವಾಯ ಮಲ್ಲಿಕ್ಕನು ನನ್ನನ್ನು ತಬ್ಬಿಕೊಂಡು—ನನಗೆ ತಾನು ಕಾದಿದ್ದುದಾಗಿಯೂ, ಇತರ ಅತಿಥಿಗಳೆಲ್ಲರೂ ಬಂದು ಕಾದಿರುವರೆಂಮೂ ಹೇಳಿ ಬಹಳ ಮರ್ಯಾದೆಯಿಂದ ನನ್ನನ್ನು ಸ್ವಾಗತಿಸಿ, ಒಳಗೆ ಕರೆದೊಯ್ದನು. ಹೊರಬಾಗಿಲಿನಿಂದ ಭವನದ ಮುಂಭಾಗಕ್ಕೆ ಸುಮಾರು ಇನ್ನೂರು ಗಜದಷ್ಟು ದೂರವಿರಬಹುದು. ಗುಲಾಮನೊಬ್ಬನು ನನ್ನ ಕುದುರೆಯನ್ನು ಹಿಡಿದುಕೊಂಡು ಲಾಯಕ್ಕೆ ಕರೆದುಕೊಂಡು ಹೋದನು. ಹೊರಬಾಗಿಲಿನಿಂದ ಭವನದ ಮುಂಭಾಗದವರೆಗೂ ನೇರವಾದ ಮತ್ತು ಅಗಲವಾದ ದಾರಿ; ಅದರ ಇಕ್ಕಡೆಗಳಲ್ಲಿಯೂ ಸುವಾಸನೆಯಿಂದ ಕೂಡಿದ ಬಗೆಬಗೆಯ ಪುಷ್ಪದ ಗಿಡಗಳು ಇದ್ದುವು. ಇರುಕಡೆಗಳಲ್ಲಿ ಅಲ್ಲಲ್ಲಿ ಇದ್ದ ನೀರಿನ ಬುಗ್ಗೆಗಳು ಸ್ಫಟಿಕ ಸಮಾನವಾದ ತೆಳ್ಳನೆಯ ನೀರಿನ ತುಂತುರುಗಳನ್ನು ನಮ್ಮಮೇಲೆ ಎರಚಿ ಶೈತ್ಯೋಪಚಾರಮಾಡುತ್ತಿದ್ದುವು.

ಮಲ್ಲಿಕ್ಕನು ಏನೇನೋ ವಿಚಾರಗಳನ್ನು ಮಾತನಾಡುತ್ತ ನನ್ನನ್ನು ಭವನದೊಳಗೆ ಕರೆದೊಯ್ದನು. ಅತಿಥಿಗಳಿಗಾಗಿಯೇ ಪ್ರತ್ಯೇಕವಾಗಿ ನಿರ್ಮಾಣವಾಗಿದ್ದ ನಯನಾನಂದಕರ ಕೊಠಡಿಯನ್ನು ನಾವು ಹೊಕ್ಕೆವು. ಅಲ್ಲಿ ಮಲ್ಲಿಕ್ಕನು ನನ್ನನ್ನು ಮೆತ್ತನೆಯ ಆಸನದಲ್ಲಿ ಕುಳ್ಳಿರಿಸಿ ರಾಜಯೋಗ್ಯವಾದ ಉಡುಪನ್ನು ಕೊಟ್ಟು ತೊಟ್ಟುಕೊಳ್ಳಬೇಕೆಂದು ಪ್ರಾರ್ಥಿಸಿದನು. ಅಂತೆಯೇ ಅವನೂ ದೃಷ್ಟಿತಾಗುವಷ್ಟು ದಿವ್ಯವಾದ ಉಡುಪನ್ನೂ ಧರಿಸಿದನು.

ಬಳಿಕ ಅವನು ಭವನದ ನಾನಾಭಾಗಗಳನ್ನೂ ನನಗೆ ತೋರಿಸಿ, ಅದನ್ನು ನಿರ್ಮಿಸಿದ ಶಿಲ್ಪಿಯ ಕುಶಲ ಕಲೆಯನ್ನು ನಾನೊಪ್ಪದಿರಲಾರೆನೆಂದು ಆಶಿಸಿ ಪಶ್ಚಿಮದ ಹೆಬ್ಬಾಲಿಗೆ ಕರೆದುಕೊಂಡು ಹೋದನು. ಆ ಪ್ರದೇಶವು ಸಿಲುಗನ್ನಡಿ ಮಯವಾಗಿದ್ದಿತು. ನಾನು ಒಂದೊಂದು ಕನ್ನಡಿಯಲ್ಲಿಯೂ ನೋಡಿಕೊಂಡು ನನ್ನ ಸ್ವರೂಪವನ್ನು ಮೆಚ್ಚಿಕೊಳ್ಳಬೇಕೆಂದು ಮಲ್ಲಿಕ್ಕನು ಸೂಚಿಸಿದನು. 'ಸರಿ' ಎನ್ನುತ್ತ ನಾನು ಒಂದೊಂದು ಕನ್ನಡಿಯಲ್ಲಿಯೂ ನೋಡಿಕೊಳ್ಳುತ್ತ ಬಂದೆ. ಆಗ ನನಗಾದ ಆಶ್ಚರ್ಯವನ್ನು ಬಣ್ಣಿಸಲಾಗದು. ಅವೆಲ್ಲ ಭೂತಗನ್ನಡಿಗಳು ವಿನೋದಕ್ಕಾಗಿಯೇ ಇಡಲ್ಪಟ್ಟಿದ್ದುವು. ಕೆಲವು ಕನ್ನಡಿಗಳಲ್ಲಿ ನಾನು ಆನೆಯಂತೆ ಸ್ಥೂಲವಾಗಿ ಕಂಡೆ; ಕೆಲವದರಲ್ಲಿ ತೆಳ್ಳಗೆ ಕಂಡೆ. ಇನ್ನು ಕೆಲವು ಕನ್ನಡಿಗಳಲ್ಲಿ ನನ್ನ ತಲೆಯನ್ನು ನೋಡಿ ನಾನು ಭೀತಿಗೊಂಡೆ—ಅಷ್ಟೊಂದು ದೊಡ್ಡದಾಗಿ ಕಂಡಿತು, ಅದು ; ನನ್ನ ಕಣ್ಣು, ಮೂಗು, ಬಾಯಿ, ಮೀಸೆ, ಗಡ್ಡ ಎಲ್ಲ ಒಂದಕ್ಕೆ ಹತ್ತರಷ್ಟು ದೊಡ್ಡದಾಗಿ ಕಂಡುವು. ಮತ್ತೆ ಕೆಲವು ಕನ್ನಡಿಗಳಲ್ಲಿ ನನ್ನ ಮುಖವು ಅಡ್ಡಡ್ಡಲಾಗಿ ಬೆಳೆದಿದ್ದಂತೆಯೂ, ಉದ್ದುದ್ದವಾಗಿ ಬೆಳೆದಿದ್ದಂತೆಯೂ ಕಂಡುವು. ಅಂತೂ ಸುಸ್ವರೂಪಿಯೆಂದು ಹತ್ತಾರು ಜನರಿಂದ ಹೇಳಿಸಿಕೊಂಡಿದ್ದ ನನ್ನನ್ನು ಈ ಭೂತ ಕನ್ನಡಿಗಳು ಮರುಳುಮಾಡಿ ಅಪಹಾಸ್ಯವನ್ನು ಮಾಡುವಂತಾಯಿತಲ್ಲ. ಎಂದು ನಿಮಿಷಮಾತ್ರ ಚಿಂತಿಸಿದೆ. ನನ್ನ ಇಂಗಿತವನ್ನು ಅರಿತವನಂತೆ ಮಲ್ಲಿಕ್ಕನು "ಮಿತ್ರ! ಇದಕ್ಕೆ ಯೋಚನೆಯೇಕೆ? ನೀವು ಇದುವರೆಗೆ ನೋಡಿಕೊಂಡ ಕನ್ನಡಿಗಳೆಲ್ಲ 'ನಮ್ಮಕ್ ಹರಾಮಿ'ಗಳು, ಅವುಗಳಮೇಲೆ ಕೋಪಿಸದಿರಿ. ಪುಣ್ಯವಂತರ ಜತೆಯಲ್ಲಿ ಪಾಪಿಗಳೂ ಬಾಳುತ್ತಿರುವರಲ್ಲವೆ ಈ ಲೋಕದಲ್ಲಿ? ಹಾಗೆಯೇ ಈ ಕನ್ನಡಿಗಳೂ ಎನ್ನುತ್ತ ಬಾಗಿ

ಲಲ್ಲಿದ್ದ ಉತ್ತಮವಾದ ನಿಲುಗನ್ನಡಿಯ ಬಳಿ ನನ್ನನ್ನು ಕರೆದೊಯ್ದು 'ಇದರಲ್ಲಿ ನೋಡಿಕೊಳ್ಳಿ' ಎಂದ. ನಾನು ನೋಡಿದೆ. ಇದು 'ಸಾಚಾ' ಎಂದೆ. ಈ ನಿಲುಗನ್ನಡಿ ನನ್ನ ನಿಜಸ್ವರೂಪವನ್ನು ತೋರಿಸಿತು. ಈ ಕನ್ನಡಿಯೇ ಸತ್ಯಸ್ವರೂಪನಾದ ದೇವರಿಗೆ ಸಮಾನ. ಉಳಿದುವೆಲ್ಲ 'ಸೈತಾನ'ರ ಪಟಾಳ ಎಂದುಕೊಂಡೆ.

ಇದಾದಮೇಲೆ ಮಲ್ಲಿಕ್ಕನು ನನ್ನನ್ನು 'ವಿಹಾರ ಮಂದಿರ'ವೆಂಬ ಲತಾ ಮಂಟಪಕ್ಕೆ ಕರೆದೊಯ್ದನು. ನನ್ನ ಬರುವಿಕೆಯನ್ನು ಎದಿರು ನೋಡುತ್ತಿದ್ದ ಇತರ ಅತಿಥಿಗಳೆಲ್ಲರೂ ನನ್ನನ್ನು ಕಂಡೊಡನೆಯೇ ಮರ್ಯಾದಾರ್ಥವಾಗಿ ಎದ್ದು ನಿಂದು ತಲೆತಗ್ಗಿಸಿ ಕೈಮುಗಿದರು. ನಾನೂ ಪ್ರತಿನಮಸ್ಕಾರಮಾಡಿದೆ, ನೂತನ ವಸ್ತ್ರಗಳಿಂದಲಂಕೃತರಾದ ನೂರಾರು ಗುಲಾಮರು ನೆರೆದ ಅತಿಥಿಗಳ ಮೇಲೂ, ನನ್ನಮೇಲೂ, ಅತ್ತರ್ ಪನ್ನೀರುಗಳನ್ನು ಚೆಲ್ಲಿದರು. ಬಳಿಕ ನನಗಾಗಿ ಮೀಸಲಾಗಿದ್ದ ದಿವ್ಯಾಲಂಕೃತ ಮಾಯೂರಾಸನದಮೇಲೆ ನಾನು ಮಂಡಿಸಿದೆ. ಇಂತಹ ರಾಜ ಠೀವಿಯಿಂದ ಕೂಡಿದ ಔತಣ ಸಮಾರಂಭವನ್ನು ನಾನು ನೋಡಿದ್ದೂ—ಅನುಭವಿಸಿದ್ದೂ—ನನ್ನ ಜನ್ಮದಲ್ಲಿ ಇದೇ ಮೊದಲು. ಮಲ್ಲಿಕ್ಕನ ಆಹ್ವಾನವನ್ನು ಮನ್ನಿಸಿ ಬಾರದಿದ್ದರೆ ನಾನೊಂದು ಅತ್ಯಂತ ವೈಭವ ಭರಿತ ಸಮಾರಂಭದಲ್ಲಿ ಕಲೆತುಕೊಳ್ಳುವ ಸುಯೋಗವನ್ನೇ ಕಳೆದುಕೊಳ್ಳುತ್ತಿದ್ದೆ.

ನಾವು ಕುಳಿತಿದ್ದ ಲತಾಮಂಟಪವು ನೂರುಗಜ ಉದ್ದ ನೂರುಗಜ ಅಗಲದ್ದಿರಬಹುದು. ಮಧ್ಯೆ ಮಧ್ಯೆ ಮೇಲಕ್ಕೆ ನೀರನ್ನೆರಚುವ ಬುಗ್ಗೆಗಳು; ಸುತ್ತಲೂ ಸುವಾಸನೆಯನ್ನು ಬೀರುವ ಪುಷ್ಪತರುಗಳು; ಅವುಗಳಮೇಲೆ ಸಮಾಧಾನದಿಂದ ಮಂಡಿಸಿ ಮಧುರವಾಗಿ ಗೀತೆಗಳನ್ನು ಹಾಡುವ ಪಕ್ಷಿಗಳು; ಅಲ್ಲಲ್ಲಿ ನವಿಲುಗಳ ಹಾರಾಟ; ಚಿಗುರೆಗಳ ಚೆಲ್ಲಾಟ; ನಯನಾನಂದಕರವಾದ ಈ ಉದ್ಯಾನವನದಲ್ಲಿ ನನಗೆದುರಾಗಿದ್ದ ವಿಶಾಲವಾದ ವೇದಿಕೆಯಲ್ಲಿ ಗಾಯಕ ಗಾಯಕಿಯರ ಗಾನ; ವಿವಿಧ ವಸ್ತ್ರಾಭರಣಗಳಿಂದಲಂಕೃತರಾಗಿ ಕಣ್ಣು ಕುಕ್ಕುವಂತೆ ಮನೋಹರೆಯರಾದ ವೇಶ್ಯಾವನಿತೆಯರಿಂದ ನೃತ್ಯಗೀತಾದಿ ವೈಭವದ ಆನಂದ; ಅಲ್ಲಲ್ಲಿ ಮೇಜುಗಳಮೇಲೆ ಬಿಳುಪಾದ ಗಾಜಿನ ಹೂಜಿಗಳಲ್ಲಿ ತೆಳ್ಳಗೆ ಮಿನುಗುಟ್ಟುವ ಉತ್ತಮ ಮದ್ಯಗಳು; ಅತಿಉದಾರವಾದ ವ್ರಯದಿಂದ—ಅತ್ಯುತ್ತಮ

ಅಡುಗೆಯವರಿಂದ ತಯಾರಿಸಲ್ಪಟ್ಟ ನಾನಾಬಗೆಯ ಭಕ್ಷ್ಯ ಭೋಜ್ಯ ಮಾಂಸಗಳು; ಮಂಜುಗಡ್ಡೆಗಳುತೇಲುತ್ತಿರುವ ಪರಬತ್ತುಗಳು; ದಿವ್ಯವಾದ ಫಲ ಸಮುದಾಯ; ಒಮ್ಮೆ ಗಾನಲೋಲುಪ್ತರಾಗುವುದು. ಒಮ್ಮೆ ತಿಂದುತೇಗುವುದು; ಒಮ್ಮೆ ಕುಡಿದು ತಲೆದೂಗುವುದು! ಎಡೆಬಿಡದೆ ಕೋಲಾಹಲ!

ಒಂದು ವಿಚಾರವನ್ನು ಹೇಳಲು ಮರೆತಿದ್ದೆ. ಸಮಾರಂಭವು ತೊಡಗುವ ಮುನ್ನ ಮಲ್ಲಿಕ್ಕನು ನನ್ನ ಕಿವಿಯಲ್ಲಿ 'ನನ್ನ ಪ್ರೀತಿ ಪಾತ್ರಳಾದ ನಾಯಕಿಯನ್ನು ಇಲ್ಲಿಗೆ ಕರೆಸಬಹುದೇ? ಅವಳಿಲ್ಲದ ಯಾವ ಸಮಾರಂಭವೂ ನನಗೆ ಹಿತವಾಗಿ ಕಾಣಿಸದು; ಅವಳನ್ನುಕಂಡರೆ ನನಗೆ ಅಷ್ಟೊಂದು ಪ್ರೇಮ!' ಎಂದ. 'ಅದಕ್ಕೇನಂ? ಅವಶ್ಯವಾಗಿ ಕರೆಸಿ' ಎಂದೆನಾನು.

ಕ್ಷಣಕಾಲದಲ್ಲಿ ಮಲ್ಲಿಕ್ಕನಿಗಿದಿರಾಗಿ ಓರ್ವಸ್ತ್ರೀ ಓಡಿಬಂದಳು. ನನಗೆ ಎಲ್ಲಿಲ್ಲದ ಹೆದರಿಕೆಯುಂಟಾಯಿತು. ಇವಳೇನು ಮನುಷ್ಯಜಾತಿಗೆ ಸೇರಿದವಳೋ ಇಲ್ಲವೆ ರಾಕ್ಷಸಳೋ? ಭೂತವೋ? ಪ್ರೇತವೋ? ಪಿಶಾಚಿಯೋ? ನನಗೊಂದೂ ಅರ್ಥವಾಗಲಿಲ್ಲ. ಅವಳ ಸ್ವರೂಪವನ್ನು ನೆನೆಸಿಕೊಂಡರೆ ಇಂದಿಗೂ ನನಗೆ ಮೈಯ್ಯೆಲ್ಲ ನಡುಗುತ್ತೆ, ಅವಳ ಗಾತ್ರ ಸ್ಥೂಲ-ಒಳ್ಳೆ ಆನೆಮರಿ ಇದ್ದಹಾಗೆ; ತಲೆಗೂದಲು ಗುಂಗುರು-ಒರಟು; ಮೈಬಣ್ಣ ಅಚ್ಚಕಪ್ಪು; ಕೆನ್ನೆಗಳು ಬಾತಿವೆ; ಕಿವಿಗಳು, ಅಗಲವಾಗಿ ಮುಂದಕ್ಕೆ ಚಾಚಿವೆ; ಕಣ್ಣುಗುಡ್ಡುಗಳು ನೋಡಿದವರನ್ನೂ ನುಂಗಿಬಿಡುವಂತೆ ಮುನ್ನುಗಿವೆ; ಕೆಳತುಟಿ ದಪ್ಪವಾಗಿ ನೇತಾಡುತ್ತಿದೆ. ಹಲ್ಲಿನವರಸೆ ಹೇಳಲೇಬೇಕಾಗಿಲ್ಲ; ಮೇಲುವರಸೆಯಲ್ಲಿ ಬಾಚಿಗಳಂತೆ ಎರಡು ಅಗಲವಾಗಿ ಮುಂದಕ್ಕೆಚಾಚಿವೆ. ಕೆಳವರಸೆಯಲ್ಲಿ ಎರಡು ಕೋರದಾಡೆಗಳು. ಎರಡು ಕಿವಿಗಳಲ್ಲೂ ಭಾರದಿಂದ ನೇತಾಡುವ ಎರಡು ಅಗಲವಾದ ಬಳೆಗಳು. ಒಟ್ಟಿನಲ್ಲಿ ಮಕ್ಕಳುನೋಡಿದರೆ ಚಿಟ್ಟೆಂದು ಅರಚಿ ಹಾಸಿಗೆ ಹಿಡಿಯಬಹುದಾದಂಥ ಸ್ವರೂಪವದು! ಇಂಥಾ ಕರಾಳಕಾಳಿಯನ್ನು ಪ್ರೇಮದ ನಾಯಕೆಯೆಂದು ಅಂಗೀಕರಿಸಿದ ಮಲ್ಲಿಕ್ಕನ ದುರ್ದೈವವನ್ನು ಕಂಡು ನಾನು ನೊಂದುಕೊಂಡೆ. ಅಲ್ಲಿಗೆ ಬಂದವಳೇ ಈ ಕಪ್ಪನೆಯ ಕುಬ್ಜೆ ಮಲ್ಲಿಕ್ಕನನ್ನು ಎರಡು ಕೈಗಳಿಂದಲೂ ಹಿಡಿದು ಗಟ್ಟಿಯಾಗಿ ತಬ್ಬಿಕೊಂಡು ಮುತ್ತಿಟ್ಟಳು. ಪ್ರೇಮಕ್ಕೆ ಕಣ್ಣಿಲ್ಲವೆಂಬುದುಕ್ಕೆ ಇದೇ ಪ್ರತ್ಯಕ್ಷ ಪ್ರಮಾಣವಲ್ಲವೇ?

ಹೇಗೋ ಊಟ, ನೃತ್ಯ, ಗೀತೆ, ಮದ್ಯಪಾನ ಹೀಗೆ ಒಂದರ ಹಿಂದೊಂದು ಮೂರು ಹಗಲು ಮೂರು ರಾತ್ರಿ ಎಡೆಬಿಡದೆ ನಡೆದುವು. ನಾಲ್ಕನೆಯದಿನ ಪ್ರಾತಃಕಾಲ ನಾನು ಮಲ್ಲಿಕ್ಕನನ್ನು ಬಹುವಾಗಿ ವಂದಿಸಿ, ಅವನಿಂದ ಬೀಳ್ಕೊಂಡು ಮನೆಗೆ ಬಂದು ಸೇರಿದೆ.

## ೧೫

ಮಲ್ಲಿಕ್ಕನ ಮನೆಯಲ್ಲಿ ಮೂರನೆಯ ದಿನ ರಾತ್ರಿ ನಾನು ಮಿತಿಮೀರಿ ಮದ್ಯವನ್ನು ಕುಡಿದಿದ್ದೆ. ಅಮಲೇರಿ ಮರುದಿನ ಸೂರ್ಯೋದಯವಾಗಿ ಎಷ್ಟೋ ಹೊತ್ತಾದರೂ ಮೇಲೆದ್ದಿರಲಿಲ್ಲ. ಇದನ್ನು ಕಂಡು ಮಲ್ಲಿಕ್ಕನು ಅದೊಂದು ಬಗೆಯ ರಸವನ್ನು ನನಗೆ ಕುಡಿಸಿದ. ಅದರನಂತರವೇ ನನ್ನ ಉನ್ಮತ್ತಾವಸ್ಥೆಯು ಸಂಪೂರ್ಣವಾಗಿ ನೀಗಿ ನಾನು ಮೇಲೆದ್ದೆ. ಬಳಿಕ ನಾನು ನನ್ನ ಮನೆಗೆ ಹೊರಟುಬಂದೆ. ನಾನು ಮನೆ ಸೇರಿದಾಗ ಮನಮೋಹಕ ತರುಣಿಯು ಬಾಗಿಲಲ್ಲಿ ನಿಂತು ನನ್ನ ಬರುವಿಕೆಯನ್ನೇ ಎದಿರುನೋಡುತ್ತಿದ್ದಂತೆ ಕಾಣುತ್ತಿದ್ದಿತು. ಒಳಹೊಕ್ಕವನೇ ಅವಳನ್ನು ನೋಡಿ ನನಗೆ ಘಾಬರಿಯಾಯಿತು. ನಾನಂದುಕೊಂಡಿದ್ದಂತೆ ಅದು ಒಂದೇ ದಿನದ ಔತಣವಾಗಿರದೆ ಮೂರು ದಿನದ ಔತಣವಾಗಿಹೋಗಿದ್ದಿತು. ತನ್ನನ್ನು ಅಲಕ್ಷ್ಯಮಾಡಿದೆನೆಂದು ತರುಣಿಯು ಕೋಪಿಸುವಳೋ ಏನೋ ಎಂದು ನಾನು ಹೆದರಿದ್ದೆ.

" ಏನು ಮಾಡಲಿ ? ಮನೆಯನ್ನು ಬಿಟ್ಟು ವಿಶೇಷ ಹೊರಗೆ ಇರಬಾರದು ಆದರೆ ನನ್ನ ಯತ್ನ ತಪ್ಪಿತು ; ಏನು ಮಾಡಲಿ ? " ಎಂದೆ. " ಅದಕ್ಕೇನು ? ನಿಮ್ಮ ಮನೆಯಲ್ಲಿ ಬೇರಾರೂ ಇಲ್ಲವಲ್ಲ. ನಿಮಗಾಗಿ ಯಾರು ಕಾದಿರುತ್ತಾರೆ ? ಎಂದು ಮಲ್ಲಿಕ್ಕನು ಹೇಳಿದ. ''ವ್ಯಾಪಾರದ ವಿಚಾರ. ಯಾವ ಘಳಿಗೆಯಲ್ಲಿ ಯಾವ ಸರಕುಗಳು ಬರಬಹುದೋ ಏನೋ. ನೋಡುವುದಕ್ಕೆ ಗಿರಾಕಿಗಳೂ ಬರುವವರಿದ್ದಾರೆ". ಎಂದು ಮತ್ತೆ ನಾನು ಹೇಳಿದೆ. ಅದಕ್ಕೆ ಮಲ್ಲಿಕ್ಕನು ''ಅದರಿಂದೇನೂ ಯೋಚನೆಗೆ ಅವಕಾಶವಿಲ್ಲ. ಬರಲಿ, ನಿಮ್ಮ ಸರಕುಗಳೆಲ್ಲ ಬರಲಿ. ಎಷ್ಟು ಬೇಕಾದರೂ ಬರಲಿ. ನನ್ನಲ್ಲಿ ಸಾಕಷ್ಟು ಹಣವಿದೆ. ಸಾಲದೆ ಹೋದರೆ ನಿಮಿಷ ಮಾತ್ರದಲ್ಲಿ ತರಿಸಿಯೇನು, ನಿಮ್ಮ ಸರಕುಗಳನ್ನೆಲ್ಲ ನಾನೊ

ಬ್ಬನೇ ಕೊಳ್ಳುತ್ತೇನೆ” ಎಂದು ಮುಂತಾಗಿ ಮಲ್ಲಿಕ್ಕನು ಎಷ್ಟು ಹೇಳಿದರೂ ಕೇಳದೆ ಮೂರು ದಿವಸಗಳೂ ನನ್ನನ್ನು ತಡೆದುಬಿಟ್ಟ. ನಾನೇನು ಮಾಡಲಿ? ವಿಧಿಯಿಲ್ಲದೆ ನಾನು ಹೊರಗೆ ನಿಲ್ಲಬೇಕಾಯಿತು. ನನ್ನ ತಪ್ಪನ್ನು ಮನ್ನಿಸ ಬೇಕು” ಎಂದು ತರುಣಿಯನ್ನು ಕುರಿತು ಕೈಜೋಡಿಸಿ ಬೇಡಿದೆ.

ತರುಣಿಯು ಕುಪಿತಳಾಗುವುದಕ್ಕೆ ಪ್ರತಿಯಾಗಿ ನಸುನಗುತ್ತ “ಇದಕ್ಕೆ ಇಷ್ಟೊಂದು ಕಾತುರವೇ? ಅಷ್ಟಕ್ಕೂ ಮನ್ನಿಸುವಂತಹ ಅಪರಾಧವನ್ನು ನೀನೇನೂ ಈಗ ಮಾಡಿಲ್ಲವಲ್ಲ. ಅವನು ನಿಲ್ಲಿಸಿದ್ದೂ ನ್ಯಾಯ; ನೀನು ನಿಂತಿದ್ದೂ ನ್ಯಾಯ. ಈ ಪ್ರಾಂತ್ಯದ ಸಂಪ್ರದಾಯವೇ ಹಾಗೆ. ಹೊಸದಾಗಿ ಅತಿಥಿಗಳು— ಅದರಲ್ಲಿಯೂ ಗಣ್ಯ ಅತಿಥಿಗಳು ನಗರಕ್ಕೆ ಬಂದರೆ ಅವರ ಗೌರವಾರ್ಥವಾಗಿ ಸಂತೋಷಕೂಟಗಳನ್ನೂ ಔತಣಸಮಾರಂಭಗಳನ್ನೂ ವಿಜೃಂಭಣೆಯಿಂದ ನಡೆಸುವುದೇ ಇಲ್ಲಿಯ ವಾಡಿಕೆ. ನೀನು ಮೂರು ದಿವಸ ನಿಂತುದು ಸಹಜ ವಾಗಿಯೇ ಇದೆ. ನಿಲ್ಲಬೇಕಾದೀತು ಎಂದು ನಾನು ಮೊದಲೇ ಬಲ್ಲೆ” ಎಂದಳು.

ನನ್ನ ಮನಸ್ಸು ಈಗ ಹಗುರವಾಯಿತು. ಅದರನಂತರ ಔತಣದ ಸಂಭ್ರಮ ಹೇಗೆ ಹೇಗೆ ಇದ್ದಿತೆಂದು ಸುಂದರಿಯು ನನ್ನನ್ನು ಕೇಳಿದಳು. ನಾನು ಒಂದಕ್ಷರವನ್ನೂ ಬಿಡದೆ ಎಲ್ಲ ಕಾರ್ಯಕ್ರಮಗಳನ್ನೂ ವಿವರಿಸಿ ಅವಳಿಗೆ ಹೇಳಿದೆ. ಎಲ್ಲವನ್ನೂ ವರ್ಣಿಸಿದಮೇಲೆ ಆ ಕರಿ ಕಾಳಿ ಕುಬ್ಜೆ—ಮಲ್ಲಿಕ್ಕನ ನಾಯಕಿ— ಅವಳ ವಿಚಾರವನ್ನೂ ಹೇಳಿದೆ. ಅದನ್ನು ಕೇಳುತ್ತಿದ್ದಂತೆ ತರುಣಿಯು ಹುಬ್ಬು ಗಂಟು ಕಟ್ಟಿದುದನ್ನು ನೋಡಿದೆ. ಅವಳಿಗೆ ಅಪ್ರಿಯವಾದ ವಾರ್ತೆಯನ್ನು ಹೇಳಿ ಅವಳ ಪ್ರಸನ್ನತೆಯು ಕಡಿಮೆಯಾದೀತೆಂಬ ಹೆದರಿಕೆಯಿಂದ ನನ್ನ ಮಾತನ್ನು ಮುಕ್ತಾಯಮಾಡಿದೆ.

ಸ್ವಲ್ಪ ಹೊತ್ತು ಕಳೆದನಂತರ ತರುಣಿಯೇ ನನ್ನನ್ನು ಮತ್ತೆ ಮಾತನಾಡಿಸಿ ದಳು :

“ಇಜ; ಇಷ್ಟು ಆದರದಿಂದ ಇಷ್ಟು ವಿಜೃಂಭಣೆಯಿಂದ ನಿನ್ನನ್ನು ಸತ್ಕರಿ ಸಿದ ಸನ್ಮಿತ್ರನಿಗೆ ನೀನೇನು ಮಾಡಬೇಕೆಂದಿರುವೆ? ಅವನಿಗೆ ಪ್ರತಿ ಔತಣವನ್ನು ಮಾಡಿಸಬೇಡವೇ?”

ನನಗೆ ಈಗ ಉಭಯಸಂಕಟ ಒದಗಿದಂತಾಯಿತು. ತರುಣಿಯನ್ನು ಕುರಿತು ನಾನು ಹೇಳಿದೆ :

"ನಿಜ; ಪ್ರತಿ ಔತಣವನ್ನು ಮಾಡಬೇಕಾದುದು ನ್ಯಾಯ. ಆದರೆ ನಾನು ಈ ನಗರದಲ್ಲಿ ಕಾಲಿಟ್ಟುದು ನಿನ್ನೊಂದಿಗೆ. ನಲವತ್ತು ದಿವಸಗಳ ಕಾಲವೂ ತದನಂತರವೂ ನಾನಾಯಿತು ಈ ಮನೆಯಾಯಿತು. ಹೊರಗೆ ಹೋಗಿದ್ದರಲ್ಲವೇ? ಇಲ್ಲಿ ನನಗೆ ಯಾರೂ ಪರಿಚಯವಿಲ್ಲ. ಔತಣವೆಂದರೆ—ಅದರಲ್ಲಿಯೂ ಇಂತಹ ಶ್ರೀಮಂತನಿಗೆ ಔತಣವೆಂದರೆ ಎಷ್ಟೊಂದು ಏರ್ಪಾಡುಗಳು ನಡೆಯಬೇಕು ? ಸಮಾರಂಭಕ್ಕೆ ಬೇಕಾದ ಸಲಕರಣೆಗಳು, ನೃತ್ಯಗೀತಾದಿಗಳಿಗೆ ಬೇಕಾದ ಜನರು, ವಾದ್ಯಗಳು ಇವೆಲ್ಲ ಏರ್ಪಾಡುಗಳನ್ನೂ ಹೇಗೆ ಮಾಡಲಿ?"

ನನ್ನ ನಿಸ್ಸಹಾಯತೆಯನ್ನು ಕಂಡು ತರುಣಿಯು ನಕ್ಕು "ನಿನ್ನ ಕಷ್ಟ ಗಳನ್ನು ನಾನು ಊಹಿಸಬಲ್ಲೆ. ಇರಲಿ; ಏರ್ಪಾಡುಗಳ ವಿಚಾರ ನೀನು ಕಾತುರಗೊಳ್ಳಬೇಕಾಗಿಲ್ಲ. ಅವನನ್ನು ಔತಣಕ್ಕೆ ಆಹ್ವಾನಿಸು. ಇಂದು ಸಂಜೆಯೇ ಬರಲಿ" ಎಂದು ಒತ್ತಾಯಪಡಿಸಿದಳು.

"ಇಂದು ಸಂಜೆ! ಇಷ್ಟು ಶೀಘ್ರವಾಗಿ! ಈ ಅಲ್ಪಾವಧಿಯಲ್ಲಿ ಎಲ್ಲ ಏರ್ಪಾಡುಗಳನ್ನೂ ಮಾಡಲು ಸಾಧ್ಯವೇ?'' ಎಂದು ನಾನು ಕೇಳಿದೆ ಮುಗ್ಧ ನಾಗಿ.

''ಸಾಧ್ಯಾಸಾಧ್ಯಗಳ ವಿಚಾರವನ್ನು ಕಟ್ಟಿಕೊಂಡು ನೀನೇನು ಮಾಡುವೆ? ಹೋಗು ಇದೀಗಲೇ ಹೋಗು. ಅವನನ್ನು ಒತ್ತಾಯಪಡಿಸಿ ಬಿಡದೆ ಕರೆದು ಕೊಂಡು ಬಾ. ನಮ್ಮ ಔತಣವನ್ನು ಅವನ ವಿಜೃಂಭಣೆಗೆ ನಾಲ್ಕರಷ್ಟು ವಿಜೃಂ ಭಣೆಯಿಂದ ನಾನು ಏರ್ಪಡಿಸುತ್ತೇನೆ. ಅದರ ವಿಚಾರ ನೀನು ಕಾತುರಗೊಳ್ಳ ದಿರು, ಹೋಗಿ ಬಾ, ನೀನು ತಿರುಗಿಬರುವುದರೊಳಗೆ ನಾನು ಎಲ್ಲವನ್ನೂ ಸಿದ್ಧ ಗೊಳಿಸಿರುತ್ತೇನೆ" ಎಂದಳು ತರುಣಿ.

ವಿಧಿಯಿಲ್ಲದೆ ನಾನು ಮಲ್ಲಿಕ್ಕನಲ್ಲಿಗೆ ಹೋಗಿ ಅವನನ್ನು ಔತಣಕ್ಕೆ ಆಹ್ವಾನಿಸಿದೆ. ಮೊದಮೊದಲು ಅವನು ಒಪ್ಪಲಿಲ್ಲ. ಬಳಿಕ ಎಷ್ಟೋ ಹೊತ್ತಾದ ಮೇಲೆ ಹೆಣಗಾಡಿಸಿ 'ಆಗಲಿ' ಎಂದ. ನಾನೂ ಅವನನ್ನು ಕರೆತರಲು ಅಲ್ಲೇ ನಿಂತೆ.

ಮಲ್ಲಿಕ್ಕನನ್ನು ಒಡಂಬಡಿಸಿ ಔತಣಕ್ಕೆಂದು ನಮ್ಮ ಮನೆಗೆ ಕರೆತರುತ್ತಿದ್ದಾಗ ನನ್ನ ಮನಸ್ಸು ಅನೇಕಾನೇಕ ಸಂದೇಹಗಳಿಂದ ತುಂಬಿಹೋಗಿದ್ದಿತು. ಇಂತಹ ಗಣ್ಯ ಅತಿಥಿಗೆ, ಇಷ್ಟೊಂದು ಅಲ್ಪಾವಧಿಯಲ್ಲಿ ಅವನ ಔತಣಕ್ಕೆ ನಾಲ್ಕರಷ್ಟು ವಿಜೃಂಭಣೆಯಿಂದ ಕೂಡಿದ ಔತಣವನ್ನು ಮಾಡಿಸಲು—ಹಾಯ್! ಹಾಯ್! ಎಷ್ಟೊಂದು ಏರ್ಪಾಡುಗಳು—ಎಷ್ಟೊಂದು ಅವಸರವಾಗಿ ನಡೆಯಬೇಕು? ಯಾರು ನಡೆಸುವರು? ಹೇಗೆ ನಡೆಸುವುದು? ನನ್ನ ಯೋಚನೆಗಳು ಇನ್ನೂ ಪರಿಪೂರ್ಣವಾಗಿರಲಿಲ್ಲ. ಅಷ್ಟರಲ್ಲಿ ನಾವಿಬ್ಬರೂ ನಮ್ಮ ಮನೆಯಿದ್ದ ಬೀದಿಯನ್ನು ತಲಪಿದ್ದೆವು. ನೋಡಿದೆ; ನನಗೆ ಪರಮಾಶ್ಚರ್ಯವಾಯಿತು. ನಮ್ಮ ಮನೆಯಿಂದ ಸುಮಾರು ನಾನೂರು ಗಜಗಳ ವರೆಗೆ ಬೀದಿಯನ್ನೆಲ್ಲಾ ಚೊಕ್ಕಟವಾಗಿ ಗುಡಿಸಿದೆ; ನೀರು ಚೆಲ್ಲಿವೆ; ಬಣ್ಣ ಬಣ್ಣದ ಬಾವುಟಗಳು ಹಾರಾಡುತ್ತಿವೆ; ಮಾತ್ರವಲ್ಲ; ಬೆಳ್ಳಿಯ ದಂಡಗಳನ್ನು ಹಿಡಿದು ಉತ್ತಮ ಉಡುಪನ್ನು ಧರಿಸಿದ ನೂರಾರು ಭಟರು ದಾರಿಯ ಇರುಕಡೆಗಳಲ್ಲಿಯೂ ನಮ್ಮ ಮನೆ ಬಾಗಿಲವರೆಗೆ ನಿಂತಿದ್ದಾರೆ. ನಾವು ನಡೆದು ಹೋದಂತೆಲ್ಲ ಭಟರು ತಮ್ಮ ದಂಡವನ್ನು ಎತ್ತಿ ಹಿಡಿದು, ತಲೆತಗ್ಗಿಸಿ, ನಮ್ಮನ್ನು ಗೌರವಿಸುತ್ತಿದ್ದಾರೆ. ಆಶ್ಚರ್ಯ! ಪರಮಾಶ್ಚರ್ಯ!! ತರುಣಿಯು ಎಂತಹ ಚತುರೆ! ಏನು ಅಸಾಧ್ಯ ಕಾರ್ಯನಿರ್ವಹಣೆ ಅವಳದು! ನಾನು ಆಶ್ಚರ್ಯ ಆನಂದಗಳಲ್ಲಿ ಮುಳುಗಿ ಹೋದೆ. ಮಲ್ಲಿಕ್ಕನೂ ಇದನ್ನೆಲ್ಲಾ ನೋಡಿ ಪರಮಾನಂದಗೊಂಡನೆಂದು ಹೇಳಬೇಕೇ?

ನಾನು ಮನೆಯನ್ನು ಸಮೀಪಿಸುತ್ತಿದ್ದಂತೆಯೇ ಘಮಘಮಿಸುವ ಭಕ್ಷ್ಯಭೋಜ್ಯಗಳ ವಾಸನೆ. ಮನೆಯ ಮುಂದೆ ಹಾಸುಗಂಬಳಿಗಳು; ದ್ವಾರದಲ್ಲಿ ಉತ್ತಮ ಉಡುಗೆಗಳನ್ನು ತೊಟ್ಟ ಸೇವಕರು; ಒಳಹೊಕ್ಕೆವು. ಮನೆ

ಯಲ್ಲಿ ಎಲ್ಲಿನೋಡಿದರೂ ನೆಲದ ಮೇಲೆ ಉತ್ತಮವಾದ ರತ್ನಗಂಬಳಿಗಳನ್ನು ಹಾಸಿದೆ. ಗೋಡೆಗಳಲ್ಲಿ ಬಣ್ಣಬಣ್ಣದ ರೇಷ್ಮೆ ವಸ್ತ್ರಗಳಿಂದ ಅಲಂಕೃತವಾಗಿವೆ. ಪ್ರತಿಯೊಂದು ಗೂಡಿನಲ್ಲಿಯೂ ಚಿನ್ನದ ಪನ್ನೀರು ದಾನಿಗಳು. ಮೂಲೆ ಮೂಲೆ ಗಳಲ್ಲಿಯೂ ಅಲಂಕೃತ ಮೇಜುಗಳ ಮೇಲೆ ರಾಶಿ ರಾಶಿಯಾಗಿ ಹಣ್ಣುಹಂಪಲು ಗಳು; ಅತ್ತರು, ಜವ್ವಾಜಿ, ಶ್ರೀಗಂಧ, ಸುಗಂಧದ ಅಡಿಕೆ, ವೀಳೇದೆಲೆ, ತಂಬಾಕು, ಹುಕ್ಕಾ, ಏನೇನು ಬೇಕೋ ಎಲ್ಲಾ ಸಿದ್ಧ: ಮತ್ತೊಂದೆಡೆ ಉತ್ತಮ ಸುವಾಸನೆಯಿಂದ ಕೂಡಿದ ಪುಷ್ಪಗಳು ರಾಶಿ ರಾಶಿಯಾಗಿ. ನೂರಾರು ಜನ ಸೇವ ಕರು—ಅತಿಥಿಗಳು, ಯಾವುದಕ್ಕೇನೂ ಕೊರತೆಯಿರಲಿಲ್ಲ. ಎಲ್ಲವೂ ಅತ್ಯಂತ ವೈಭವದಿಂದ ಸಜ್ಜುಗೊಂಡಿತ್ತು.

ಆದರೆ ಅತ್ಯಲ್ಪ ಅವಧಿಯಲ್ಲಿ ಇದಿಷ್ಟು ಏರ್ಪಾಡುಗಳನ್ನೂ ಅತ್ಯಂತ ಸಮ ರ್ಪಕವಾಗಿ ಸಿದ್ಧಗೊಳಿಸಿದ ಆ ಮೋಹನಾಂಗಿ ಮಾತ್ರ ಎಲ್ಲೆಲ್ಲಿ ಹುಡುಕಿದರೂ ಕಾಣಿಸಲಿಲ್ಲ. ಮನೆಯ ಒಂದೊಂದು ಕೊಠಡಿಯನ್ನು ಹೊಕ್ಕು ನೋಡಿದೆ. ಒಂದಕ್ಕಿಂತ ಒಂದು ಅತಿಸೊಗಸಾಗಿ ಶೃಂಗರಿಸಲ್ಪಟ್ಟಿತ್ತು. ನೂರಾರು ಜನರು ಉಸಿರಾಡದೆ ಕಿಕ್ಕಿರಿದು ಕೆಲಸಮಾಡಿದರಲ್ಲದೆ ಈ ತೆರನಾದ ಸಿದ್ಧತೆಗಳು ಸಾಧ್ಯ ವಾಗದು ಎಂದು ನನಗೆ ಮುಂದಟ್ಟಾಗಿ ಹೋಯಿತು. ಆದರೆ ಇವೆಲ್ಲ ಸಮರ್ಪಕ ರೀತಿಯಲ್ಲ ಸಿದ್ಧಗೊಳ್ಳಲು ಪ್ರಧಾನ ಕಾರಣಳಾದ ನಾಯಕಿ ಎಲ್ಲಿ?

ಕೊನೆಗೆ ಅಡಿಗೆ ಮನೆಯನ್ನು ಪ್ರವೇಶಿದೆ. ಮೋಹನಾಂಗಿ ಸಾಧಾರಣ ಉಡುಗೆಯನ್ನು ತೊಟ್ಟು, ಮೈಮೇಲೆ ಒಂದು ಹೊದಿಕೆಯನ್ನು ಮುಚ್ಚಿಕೊಂಡು ಸೊಂಟದಲ್ಲಿ ಒಂದು ಕರವಸ್ತ್ರವನ್ನು ಸಿಕ್ಕಿಸಿಕೊಂಡು, ಹತ್ತಾರು ಜನ ಪರಿಚಾರ ಕರಿಗೆ ಸಲಹೆಯಿತ್ತು ತಾನೂ ಸಹಾಯಮಾಡುತ್ತ ನಿಂತಿದ್ದಳು. ಆಗವಳು ಯಾವ ಆಭರಣವನ್ನೂ ತೊಟ್ಟಿರಲಿಲ್ಲ. ಆದರೇನು? ಸ್ವತೇವ ಸುಂದರಳಾದ ಅವಳಿಗೆ ಆಭರಣಗಳೇ ಬೇಕಿರಲಿಲ್ಲ. ಆಭರಣಗಳಿಲ್ಲದ ಆ ಸಮಯದಲ್ಲೂ ಅವಳು ಅತಿ ರಮಣೀಯವಾಗಿ ಕಾಣಿಸುತ್ತಿದ್ದಳು. ಅಷ್ಟಲ್ಲದೇನು? ಪೂರ್ಣ ಚಂದ್ರನಿಗೆ ಮತ್ತಾವ ಅಲಂಕಾರವು ಬೇಕಾಗಿದೆ? ಅಲಂಕಾರವಿಲ್ಲದೆಯೇ ಚಂದ್ರನು ಕವಿಯ ವಿರಹಿಗಳ, ಸಮುದ್ರಗಳ ಅಂತರಾಳವನ್ನು ಕದಡಲಿಲ್ಲವೇ?

ತರುಣಿಯು ನನ್ನನ್ನು ಕಂಡು ಕೇಳಿದಳು :

" ಏನಿದು ? ಇದನ್ನೇ ನೀನು ಮರ್ಯಾದೆಯೆಂದು ಕರೆಯುವುದು ? ಇಲ್ಲೇನು ಕೆಲಸ ನಿನಗೆ ? ಬಂದಿರುವ ಅತಿಥಿಯನ್ನು ಒಂಟಿಯಾಗಿ ಬಿಟ್ಟುಬರುವುದು ಇದು ಯಾವ ನೀತಿ ? ಹೋಗು, ಹೋಗು. ಇಲ್ಲಿಯ ಕೆಲಸಗಳನ್ನು ನಾನು ನಿರ್ವಹಿಸುತ್ತೇನೆ. ಅತಿಥಿಗಳನ್ನು ಗಮನಿಸು. ಬೇಕಾದ್ದನ್ನು ಹೇಳಿ ಕಳುಹಿಸು."

ತರುಣಿಯ ಮಾತಿಗೆ ನಾಚಿ ನಾನು ಒಳಗೆ ಬಂದು ಮಲ್ಲಿಕನ ಬಳಿ ಕುಳಿತೆ. ಭಕ್ಷ್ಯ ಮಾಂಸಗಳು ಒಂದೊಂದಾಗಿ ಬಡಿಸಲ್ಪಟ್ಟುವು. ನೃತ್ಯ ಗೀತೆಗಳು ಉಲ್ಲಾಸಕರವಾಗಿ ಸಾಗಿದುವು. ಆದರೆ ಮಲ್ಲಿಕನು ಹರ್ಷಚಿತ್ತನಾಗಿದ್ದಂತೆ ಕಾಣಿಸಲಿಲ್ಲ. ತನ್ನ ಪ್ರೇಯಸಿ—ಆ ಕಾಳರಾಕ್ಷಸಿ—ತನ್ನ ಬಳಿಯಲ್ಲಿ ಇಲ್ಲದಿದ್ದುದೇ ಅವನಿಗೆ ಹಿರಿಯ ಕೊರತೆಯೆಂದು ನಾನು ಊಹಿಸಿದೆ. ತಕ್ಷಣ ತರುಣಿಯ ಬಳಿ ಹೋದೆ. ವಿಚಾರವನ್ನು ತಿಳಿಯಪಡಿಸಿದೆ. " ಮಲ್ಲಿಕನ ಪ್ರೇಯಸಿಯನ್ನು ಔತಣಕ್ಕೆ ಕರೆಸೋಣವೇ ? ಎಂದು ಕೇಳಿದೆ." ಅವಶ್ಯವಾಗಿ ಆಗಬಹುದು. ಮರ್ಯಾದೆ ಏಕರೀತಿಯಾಗಿರಲಿ ; ಲೋಪಗಳು ಬಾರದಿರಲಿ " ಎಂದು ಅವಳು ಅನುಮತಿಸಿ ಎಚ್ಚರಿಕೆ ಹೇಳಿ ಕಳುಹಿಸಿದಳು.

ಸರಿ ; ಕಪ್ಪನೆಯ ಕುಬ್ಜೆಗೆ ಹೇಳಿ ಕಳುಹಿಸಿದೆ ಅವಳು ಠೀವಿಯಿಂದ ಕುದುರೆಯ ಗಾಡಿಯಲ್ಲಿ ಬಂದಿಳಿದಳು. ಬಾಗಿಲಬಳಿ ನಾನೇ ಹೋಗಿ ಅವಳನ್ನು ಸ್ವಾಗತಿಸಿ ಒಳಗೆ ಕರೆತಂದೆ. ಮಲ್ಲಿಕ್ಕನನ್ನು ನೋಡಿದ, ಅವಳಿಗೂ—ಅವಳನ್ನು ನೋಡಿದ ಮಲ್ಲಿಕನಿಗೂ ಪರಸ್ಪರವಾಗಿ ಉಂಟಾದ ಆಗಿನ ಆನಂದವು ಅನಿರ್ವಚನೀಯನಾದುದು. ಅವರಿಬ್ಬರೂ ನೆರೆದಿದ್ದ ಅಷ್ಟೊಂದು ಜನರೆದುರಿಗೆ ಒಬ್ಬರನ್ನೊಬ್ಬರು ಪರಮಪ್ರೀತಿಯಿಂದ ತಬ್ಬಿ ಮುದ್ದಾಡಿದರು, ಆ ಯುವಕನ ಮೇಲೆ ಅದೆಂತಹ ಮಾಯೆಯನ್ನು ಬೀರಿ ಅವನನ್ನು ಅವಳು ವಶಪಡಿಸಿಕೊಂಡಿದ್ದಳೋ ದೈವವೇ ಬಲ್ಲದು. ಅದುವರೆಗೆ ನಾನು ಕಂಡುದರಲ್ಲಿ ಒಂದರಕ್ಷಣ ಅವರು ಒಬ್ಬರನ್ನೊಬ್ಬರು ನೋಡದಿದ್ದರೆ ಅವರಿಬ್ಬರ ಪ್ರಾಣವೂ ಹಾಗೆಯೇ ಹಾರಿ ಹೋಗುವಂತಿತ್ತು—ಎಂಬ ಭಾವನೆ ನನ್ನಲ್ಲಿ ಮೂಡಿತು.

ಮೂರು ಹಗಲು ಮೂರು ರಾತ್ರಿ ಎಡೆಬಿಡದೆ, ಔತಣ, ನೃತ್ಯ, ಗೀತೆ, ಕೋಲಾಹಲ, ಮದ್ಯಪಾನ, ಫಲ ಪುಷ್ಪ ತಾಂಬೂಲಸೇವನೆ, ಒಂದರ

ಹಿಂದೊಂದು ನಡೆದುವು. ಬಂದ ಅತಿಥಿಗಳು ಅಪಾರ ತೃಪ್ತಿಯನ್ನು ಪಡೆದರು. ಮಾರನೆ ದಿನ ರಾತ್ರಿ ಮಲ್ಲಿಕ್ಕನು ತನ್ನ ಮನೆಗೆ ಹೋಗಲು ಅಪ್ಪಣೆ ಬೇಡಿದನು. ಮರುದಿನ ಬೆಳಿಗ್ಗೆ ಹೋಗಬಹುದೆಂದು ನಾನು ಹೇಳಿದೆ. ಕೊನೆಯ ದಿನ ವಾದುದರಿಂದ ದಿವ್ಯವೂ ನೂತನವೂ ಆದ ಮದ್ಯವನ್ನೂ ಅತಿಥಿಗಳಿಗೆ ಯಥೇಚ್ಛ ವಾಗಿ ಹಂಚಲಾಯಿತು. ಅವರೆಲ್ಲರೂ ಆ ಅಮಲಿನ ಭರದಲ್ಲಿ ತಲೆದೂಗುತ್ತ ನಿದ್ರಾಪರವಶರಾದರು. ಏತನ್ಮಧ್ಯೆ ತರುಣಿಯು ಒಬ್ಬ ಗುಪ್ತ ಸೇವಕನ ಕೈ ಯಲ್ಲಿ ಮಲ್ಲಿಕ್ಕನಿಗೂ ಅವನ ಕಾಳರಕ್ಕಸಿಗೂ ಪ್ರತ್ಯೇಕವಾದ ಮದ್ಯವನ್ನು ಕಳು ಹಿಸಿದ್ದಳು. ಅವರಿಬ್ಬರೂ ಅದನ್ನು ಕುಡಿದು, ಕಣ್ಣೆಳೆದು, ಒಬ್ಬರನ್ನೊಬ್ಬರು ತಬ್ಬಿಕೊಂಡು, ತೂಗಾಡಿ, ಕೆಳಗುರುಳಿದ್ದರು. ನಾನೂ ಸಹ ಮಿತಿಗೆ ಮಿಂಚಿಯೇ ಕುಡಿದಿದ್ದೆ. ಯಾವ ಮಾಯದಲ್ಲಿ ನಿದ್ರೆ ಬಂದಿತೋ ಕಾಣೆ. ತೂಕಡಿಕೆಯನ್ನು ತಾಳಲಾರದೆ ಹತ್ತಿರದಲ್ಲಿದ್ದ ಒಂದು ಮಂಚದಲ್ಲಿ ಒರಗಿ ತೂಕಡಿಸಿದೆ. ಆ ರಾತ್ರಿ ಮುಂದೇನಾಯಿತೋ ನನಗೆ ತಿಳಿಯದು.

# ೧೭

ಮರುದಿನ ಪ್ರಾತಃಕಾಲವಾಯಿತು. ಸೂರ್ಯನ ಎಳೆ ಬಿಸಿಲು ಕಿಟಕಿಯ ಮೂಲಕ ತೂರಿಬಂದು ಕಣ್ಣುಗಳನ್ನು ಚುಚ್ಚುತ್ತಿತ್ತು. ಮೈಮುರಿದು ಕಣ್ಣುಜ್ಜುತ್ತ ನಾನು ಮೇಲೆದ್ದೆ. ಸುತ್ತಲೂ ನೋಡಿದೆ. ಆದರೆ ಇಲ್ಲೇನಿದೆ? ಮನೆಯಲ್ಲೆಲ್ಲ ಸುತ್ತಿ ನೋಡಿದೆ. ಹಿಂದಿನ ದಿನ ನೆರೆದಿದ್ದ ಅತಿಥಿಗಳೆಲ್ಲ ಮಾಯವಾಗಿದ್ದರು. ಅಂತೆಯೇ ಮೋಹನಾಂಗಿಯೂ ಮಾಯವಾಗಿದ್ದಳು. ಮನೆಯೆಲ್ಲ ಶೂನ್ಯವಾಗಿ ಕಂಡಿತು. ಹಿಂದಿನ ದಿನದ ಆ ಮಹಾ ಸಂಭ್ರಮಕ್ಕೆ ಇದು ತದ್ವತ್ ವಿರೋಧವಾಗಿದ್ದಿತು. ಹೊರಬಾಗಿಲಿಗೆ ಹೋಗಿ ನೋಡಿದೆ. ಬಹುದೂರದವರೆಗೂ ಕಂಗೊಳಿಸುತ್ತಿದ್ದ ಬಣ್ಣಬಣ್ಣದ ಆ ಬಾವುಟಗಳಿಲ್ಲ; ಬೆಳ್ಳಿಯ ದಂಡಗಳನ್ನು ಹಿಡಿದು ನಿಂತಿದ್ದ ಆ ಭಟರಿಲ್ಲ; ಮನೆಯೊಳಗೆ ನೆಲದಮೇಲೆ ಹಾಸಿದ್ದ ರತ್ನಗಂಬಳಿಗಳಿಲ್ಲ; ಗೋಡೆಗೆ ಹೊದಿಸಿದ್ದ ಪಟ್ಟುಪೀತಾಂಬರಗಳಿಲ್ಲ. ಕಿಟಕಿ ಬಾಗಿಲುಗಳಿಗೆ ಮರೆಯಾಗಿ ಹಾಕಿದ್ದ ರೇಷ್ಮೆ ಕಲಾಬತ್ತಿನ ವಸ್ತ್ರಗಳಿಲ್ಲ. ಗೂಡುಗೂಡುಗಳಲ್ಲಿ ಕಂಗೊಳಿಸುತ್ತಿದ್ದ ಚಿನ್ನದ ಪನ್ನೀರುದಾನಿಗಳಿಲ್ಲ; ಮೇಲ್ಛಾವಣಿಯಿಂದ ಇಳಿಬಿಟ್ಟಿದ್ದ ಮೇಣಬತ್ತಿ ಹೊತ್ತಿಸಿದ್ದ ಬೆಳ್ಳಿಯ ನಿಲುವು ಚೌಕಟ್ಟುಗಳಿಲ್ಲ. ಹಣ್ಣು, ಹಂಪಲು, ಹೂವು, ಎಲೆ, ಅಡಿಕೆ, ತಂಬಾಕು ಯಾವುದೂ ಇಲ್ಲ. ಹೊನ್ನಿನ ಮೊಹರುಗಳಿಲ್ಲ. ಹೊಸ ಪ್ರವಾಹವು ಬಂದು ಹಳೆಯ ನೀರನ್ನು ಕೊಚ್ಚಿಕೊಂಡು ಹೋದಂತೆ ನನ್ನ ಬಟ್ಟೆ ಬರೆ, ಕುದುರೆ, ಜೀನು ಎಲ್ಲಾ ಮಾಯ. ಆ ಶೂನ್ಯವಾದ ಗೃಹವನ್ನು ನೋಡಿ ನನಗೆ ತಡೆಯಲಾರದ ಸಂಕಟ. ಅದರಲ್ಲುಳಿದವನು ಆರ್ಥಿಕವಾಗಿಯೂ, ಮಾನಸಿಕವಾಗಿಯೂ, ಶುದ್ಧ ಭಿಕಾರಿಯಾಗಿ ಹೋಗಿದ್ದ ನಾನೊಬ್ಬನೇ. ಒಳಗೆ ಶೂನ್ಯ; ಹೊರಗೆ ಶೂನ್ಯ; ಆ ಕೆಲ ನಿಮಿಷಗಳಲ್ಲಿ ನನ್ನ ದೃಷ್ಟಿಯಲ್ಲಿ ಜಗತ್ತೇ ಶೂನ್ಯವಾಗಿ ಕಂಡಿತು. ನಾನು ಹುಚ್ಚನಂತಾದೆ.

ಕ್ಷಣಕಾಲ ತಲೆಯ ಮೇಲೆ ಕೈಯಿಟ್ಟು ದಿಕ್ಕೆಟ್ಟುಹೋದವನಂತೆ ನಾನು ಪರಿತಪಿಸಿದೆ. ಸುಮ್ಮನೆ ಕೂತರೆ ಹೇಗೆ ಎಂದು ನನಗನ್ನಿಸದೆ ಇರಲಿಲ್ಲ. ಮತ್ತೆ ಎದ್ದು ಮನೆಯ ಹಿಂಭಾಗ, ಮುಂಭಾಗ, ಒಂದೊಂದು ಕೋಣೆಯ ಒಂದೊಂದು ಮೂಲೆಯನ್ನೂ ಹುಡುಕಿದೆ. ಹುಡುಕಿ ಹುಡುಕಿ ಬೇಸತ್ತೆ. ಯಾವ ಚಿಹ್ನೆ ಯೂ ನನ್ನ ಕಣ್ಣಿಗೆ ಕಾಣಿಸಲಿಲ್ಲ. ಕೊನೆಗೆ ನಾನು ಮಲಗಿದ್ದ ಕೊಠಡಿಯತ್ತ ಮತ್ತೆ ಧಾವಿಸಿ ಬಂದೆ. ಅದುವರೆಗೂ ಅದೇಕೋ ನನ್ನ ಕಣ್ಣಿಗೆ ಬಿದ್ದಿರಲಿಲ್ಲ. ಈಗತಾನೇ ಕಂಡಿತು. ಅಲ್ಲೊಂದು ಮೂಲೆಯಲ್ಲಿ ಒಂದು ರತ್ನಕಂಬಳಿ. ಅದ ರಲ್ಲೇನೋ ದಪ್ಪನಾಗಿ ಸುರುಳಿ ಸುತ್ತಿದಂತಿತ್ತು. ಅದನ್ನು ಬಿಚ್ಚಿ ನೋಡಿದೆ. ಬೆಚ್ಚಿಬಿದ್ದು ಹಿಂದೆಸರಿದೆ. ರತ್ನಗಂಬಳಿಯ ಸುರುಳಿನಲ್ಲಿ ನಾ ಕಂಡುದೇನು? ಎರಡು ಶವಗಳು! ತುಂಡರಿಸಲ್ಪಟ್ಟ ಶವಗಳು! ರುಂಡ ಮುಂಡಗಳು ಬೇರೆ ಬೇರೆಯಾಗಿ ಬಿದ್ದಿವೆ. ಯುವಕ ಮಲ್ಲಿಕ್ಕನ ಮತ್ತು ಕಪ್ಪನೆಕುಚ್ಚಿಯ ಶವ ಗಳು! ಅಕ್ಕಪಕ್ಕದಲ್ಲಿ!

ಇವರ ರಹಸ್ಯವೇನು? ಇವರ ಕಾರಣ ಕರ್ತೃಗಳಾರು? ಈ ಇರು ಕೊಲೆಗೂ ತರುಣಿಗೂ ಏನು ಸಂಬಂಧ? ಕೊಲೆ ನಡೆಸಿದ ಘಾತುಕರಾರು? ಒಬ್ಬರು ತಪ್ಪದೆ ಎಲ್ಲರೂ ಓಡಿ ಹೋದುದೇತಕ್ಕೆ? ಓಡಿಹೋದುದೆಲ್ಲಿಗೆ? ಇವ ರಲ್ಲಿ ಒಬ್ಬರಾದರೂ ವೀರರಿಲ್ಲವೆ? ನ್ಯಾಯವನ್ನರಿತವರಿಲ್ಲವೆ? ಈ ಪ್ರಾಂತ್ಯದ ಸಂಪ್ರದಾಯ! ಔತಣಕ್ಕೆ ಆದರದಿಂದ ಬರಮಾಡಿಸಿಕೊಂಡು, ಮುಖ್ಯ ಅತಿಥಿ ಗಳನ್ನು ಕೊಲೆಮಾಡಿ, ಅವರನ್ನು ಕರೆತಂದ ನನ್ನನ್ನು ಶವಗಳೊಂದಿಗೆ ಏಕಾಂಗಿಯಾಗಿ ಬಿಟ್ಟು, ಹೇಳದೆ ಕೇಳದೆ ಓಡಿಹೋಗುವುದು ಇವರ ಸತ್ಸಂಪ್ರದಾಯ! ಹೇಡಿಗಳ—ಬಡಾಯಿಗಾರರ, ಭಂಡಮಾನವರ— ಉದ್ದಂಡ ಸಂಪ್ರದಾಯ! ಮರಣಕ್ಕೆ ತುತ್ತಾದ ಆ ತರುಣಿ! ಅವಳನ್ನು ಮೃತ್ಯುವಿನ ದವಡೆಗಳಿಂದ ಬಿಡಿಸಿ, ಭೃತ್ಯನಾಗಿ ಕಾವಲು ಕಾದು, ನನ್ನ ವಿಶಿಷ್ಟ ವನ್ನೂ ಅರ್ಪಣೆ ಮಾಡಿದುದಕ್ಕೆ—ಒಂದು ಮಾತಿಲ್ಲದೆ, ಒಂದು ಎಚ್ಚರಿಕೆ ಯಿಲ್ಲದೆ, ಒಂದು ಬಿಂದುವಿನಷ್ಟು ಸಂತಾಪವಿಲ್ಲದೆ, ತೊಟ್ಟು ಹೊದಿಯಬಹು ದಾದ—ನನ್ನದೇ ಆದ ಒಂದು ಬಟ್ಟೆ ಬರೆಯನ್ನೂ ಬಿಡದೆ—ಕೊಲೆಯುಂಡ ವರ ಕಾವಲಿಗೆ ನನ್ನನ್ನು ನಿಯಮಿಸಿ—ಓಡಿಹೋಗುವುದು—ಇದೀಗ ಇವರ

ದೇಶದ ಅತ್ಯುತ್ತಮ ಸಂಪ್ರದಾಯ ! ಇವರ ನಡತೆ ನಾಗರಿಕತೆಗಳಿಗೆ, ಸಹವಾಸ ಸಂಪ್ರದಾಯಗಳಿಗೆ ಧಿಕ್ಕಾರ ! ಧಿಕ್ಕಾರ !! ಧಿಕ್ಕಾರ !!! ಸಹಸ್ರಸಲಧಿಕ್ಕಾರ !!!!

ನನಗೆ ದುಃವೂ, ಕೋಪವೂ ಉಕ್ಕಿಬಂದುವು, ತರುಣಿ! ಅವಳು ಕೃತಘ್ನೆ! ಘಾತುಕಿ ! ಪಾತಕಿ ! ಅವಳಿಗೆ ಧನಮದ ! ಅಧಿಕಾರಮದ ! ಯೌವನಮದ ! ಸೌಂದರ್ಯದಮದ ! ವಿದ್ಯೆಯಮದ ! ಅಂತಸ್ತಿನಮದ ! ಮದಾಂಧೆ ! ಮೋಹನಾಂಗಿಯೇ ಅವಳು ? ಮೋಸದ ಅರಸಿ ! ಅವಳ ಸೌಂದರ್ಯದ ರಾಶಿಯಲ್ಲಿ ಎಷ್ಟೊಂದುಪಾತಕದ ಸ್ವರೂಪವು ಅಡಗಿದ್ದಿತ.? ಅವಳನಯವಾದ ನಾಲಿಗೆಯಲ್ಲಿ ಎಷ್ಟೊಂದು ನಂಬಕದ್ರೋಹವು ನಲಿದು ನರ್ತನ ಮಾಡುತ್ತಿತ್ತು ? ಅವಳು ರಮಣಿ-ಮಣಿಯೆ? ರಾಕ್ಷಸಿ ! ಸುಂದರಿಯರ ವದನಾರವಿಂದದಲ್ಲಡಗಿರುವ ಪಾತಕದ ಪರಿಚಯವು ಮಲ್ಲಿಕ್ಕನಿಗೆ ಆಗಿರಬೇಕು. ಆದುದರಿಂದಲೇ ಸುಂದರಿಯರ ಸಹವಾಸವನ್ನೊಲ್ಲದೆ ನೈಜವಾದ ಪ್ರೀತಿಯನ್ನು ಆಶಿಸಿ ಕುರೂಪಿಯಾದರೂ ಆ ಕುಬ್ಜೆಯನ್ನು ಅವನು ತನ್ನ ಪ್ರೇಯಸಿಯನ್ನಾಗಿ ಆರಿಸಿಕೊಂಡಿರಬೇಕು.

ನನ್ನ ವಿಚಾರವಾಹಿನಿಯು ಪ್ರವಾಹಸ್ವರೂಪವನ್ನು ತಾಳಿತು. ಬಗೆಹರಿಯದ ಸಮಸ್ಯೆಗಳಿವು. ನಾನು ಡಮಾಸ್ಕಸ್ ನಗರಕ್ಕೆ ಕಾಲಿಡುವುದಕ್ಕೆ ಮುನ್ನವೇ ರಕ್ತದರ್ಶನ ! ನಗರವನ್ನು ಪ್ರವೇಶಿಸಿದ ಬಳಿಕ ಬಿಡಿಹೊನ್ನು ಬಿಡದೆ ನನ್ನ ಸರ್ವಸ್ವದ ವ್ಯಯ. ತಿಂಗಳಾರು ಭೃತ್ಯಜೀವನ. ಸರ್ವಸ್ವವನ್ನು ಸಮರ್ಪಣೆ ಮಾಡಿ ಮರಣಶಯ್ಯೆಯಲ್ಲಿದ್ದ ಆ ಮಾಯಾವಿ ಸರ್ವಾಂಗ ಸುಂದರಿಯೆಂಬ ಅಭಿಮಾನದಿಂದ—ಆ ಕರಾಳ ತರುಣಿ—ಅವಳಿಗೆ ಜೀವದಾನ ಮಾಡಿದೆ. ನನ್ನನ್ನೀಗ ಅವಳು ಎರಡು ಶವಗಳಿಗೆ ಕಾವಲುಗಾರನನ್ನಾಗಿ ಮಾಡಿ ಕೃತ್ರಿಮದಿಂದ ಓಡಿ ಹೋಗಿರುವಳು ! ಹಾಯ್; ಮಾಯಗಾತಿ ! ಕೊನೆಗೆ ಅರಿಯದ ನಗರದಲ್ಲಿ ನಾನು ನಿರ್ಗತಿಕ ತಿರುಕ ! ಈ ನಗರವು....ಇದು ನಗರವೇ? ಅಲ್ಲ ಅಲ್ಲ. ದೆವ್ವದ ಬೀಡಾಗಿರಬೇಕು. ಇಲ್ಲಿರುವ ಸ್ತ್ರೀಪುರುಷರೆಲ್ಲರೂ ಮಾಯಾವಿಗಳಿರಬೇಕು. ನನ್ನ ರಕ್ತವು ಕುದಿಯಲಾರಂಭಿಸಿತು. ನಾನು ಕಂಗೆಟ್ಟು ಕೃಶನಾದೆ.

ಈ ತರುಣಿ ! ಮೋಹನಾಂಗಿಯ ಸ್ವರೂಪತಾಳಿದ ಈ ಮಾಯಾವಿ ! ಇವಳು “ಸೈತಾನ ಸ್ವರೂಪಳು” ಎಂದೆಣಿಸಿ ಯಾರಾದರೂ ಇವಳನ್ನು ಕತ್ತಿಯಿಂದ ತಿವಿದು ನಗರದಾಚೆ ಎಸೆದಿರಬಹುದು ? ಅದಕ್ಕಾಗಿ ಸೇಡು ತೀರಿಸಿ

ಕೊಳ್ಳಿಲು, ನನ್ನನ್ನು ತನ್ನ ಕೈಗೊಂಬೆಯಾಗಿ ಮಾಡಿಕೊಂಡಳೇ? ಹಾಗಾಗಿದ್ದ ಪಕ್ಷದಲ್ಲಿ ನನ್ನಿಂದ ಅವಳಿಗೆ ಮಹದುಪಕಾರವೇ ಆದಂತಾಯಿತಲ್ಲವೇ? ಹಾಗಿದ್ದರೂ ಅವಳೇಕೆ ನನಗೆ ಕೃತಜ್ಞತೆಯನ್ನು ತೋರದೆ, ನನ್ನ ಸರ್ವಸ್ವವನ್ನು ಅಪಹರಿಸಿ, ಹೇಳದೆ ಕೇಳದೆ, ನನ್ನನ್ನು ಭಿಕಾರಿಯನ್ನಾಗಿ ಬಿಟ್ಟೋಡಿದಳು? ನಾನು ನಿದ್ರಿಸುತ್ತಿದ್ದಾಗ ಯಾರಾದರೂ ಅಧಿಕಾರಿಗಳು ಬಂದು ಈ ಶವಗಳನ್ನು ಗುರುತಿಸಿದ್ದರೆ ಕುಡಿದು ಉನ್ಮತ್ತನಾಗಿ ಮಲಗಿದ್ದ ನಾನೇ ಈ ಇರುಕೊಲೆಗಳಿಗೂ ಕಾರಣನಾಗಬೇಕಿದ್ದಿತಲ್ಲವೇ? ಉಪಕಾರಕ್ಕೆ ಪ್ರತ್ಯುಪಕಾರ–ಮಹದಪಕಾರ! ಇವೆಲ್ಲದರ ಸೂತ್ರಧಾರಿ ಸಾವಿನಿಂದ ಸಂರಕ್ಷಣೆ ಹೊಂದಿದ ಆ ಮಹಾಮಾಯಾವಿ!

ನನ್ನ ತರ್ಕವು ಬಹುದೂರ ಓಡಿತು. ಆಗ ಅಕಸ್ಮಾತ್ತಾಗಿ ತರುಣಿಯಬಳಿ ಉಪಚಾರಕ್ಕೆಂದು ನನ್ನಿಂದ ನಿಯಮಿತಳಾಗಿದ್ದ ಸೇವಕಿಯು ಓಡಿಬಂದು "ಇಲ್ಲಿ ನಡೆದುದೊಂದನ್ನೂ ಯೋಚಿಸುತ್ತ ಇಲ್ಲಿ ಕುಳಿತುಕೊಳ್ಳಬೇಡಿ; ಅವುಗಳನ್ನು ವಿವರಿಸಕೂಡದೆಂದು ನನಗೆ ಕಟ್ಟಾಜ್ಞೆಯಾಗಿದೆ. ನನ್ನ ಒಡತಿಯ ವಿಚಾರವನ್ನು ಯಾರಲ್ಲಿಯೂ ಪ್ರಸ್ತಾಪಿಸಕೂಡದು. ನಿಮ್ಮ ಬಾಯಿ ಹಿಡಿತದಲ್ಲಿದ್ದಷ್ಟೂ ಮುಂದೆ ನಿಮಗೆ ಹಿತವುಂಟು. ಏಳಿ; ಇಲ್ಲಿಂದ ಎದ್ದೇಳಿ, ಸುಂದರಿಯನ್ನು ನೀವು ನೋಡಬಯಸಿದರೆ ಅವಳ ವಿಳಾಸವು ಇಲ್ಲಿ ಇದೆ; ತೆಗೆದುಕೊಳ್ಳಿ. ರಹಸ್ಯವಾದ ಈ ಎಲ್ಲ ವಿಚಾರಗಳೂ ನಿಮ್ಮಲ್ಲೇ ಗುಪ್ತವಾಗಿ ಉಳಿಯಲಿ" ಎಂದಳು.

ಸೇವಕಿಯ ಮಾತನ್ನು ಕೇಳಿ ಅದುವರೆಗಿನ ನನ್ನ ತರ್ಕಗಳೆಲ್ಲವೂ ಗಾಳಿಗೆ ಹಾರಿಹೋದುವು, ಸುಂದರಿಯು ಆಚರಿಸಿದ ರೀತಿಗೆ ಯಾವುದೋ ಪ್ರಬಲವಾದ ರಹಸ್ಯಕಾರಣಗಳಿರಬೇಕೆಂದೂ, ಅವಳನ್ನು ನಾನು ನೋಡಲು ಅವಳ ಅಭ್ಯಂತರವೂ ಏನೂ ಇರದೆಂದೂ, ಅವಳನ್ನು ಪ್ರತ್ಯಕ್ಷ ಕಂಡು ನಿಜಾಂಶವನ್ನರಿತುಕೊಳ್ಳುವವರೆಗೂ ಯಾವ ನಿರ್ಧಾರಕ್ಕೂ ಬರಕೂಡದೆಂದೂ ನಾನು ನನ್ನಲ್ಲೇ ತೀರ್ಮಾನಿಸಿಕೊಂಡೆ. ಅಷ್ಟರಲ್ಲಿ ಸೇವಕಿಯು ಕಣ್ಮರೆಯಾಗಿದ್ದಳು.

ನಾನೂ ಆ ಭೀಕರ ಪ್ರದೇಶವನ್ನು ಬಿಟ್ಟು ಹೊರಬಿದ್ದೆ. ತರುಣಿಯ ಗೃಹವನ್ನು ಗುರುತಿಸುವ ಆತುರದಿಂದ ಎರಡೆರಡು ಹೆಜ್ಜೆಗಳನ್ನು ಒಟ್ಟೊಟ್ಟಾಗಿ ಎತ್ತಿಟ್ಟು ಮುನ್ನಡೆದೆ.

೧೮

ಸೇವಕಿಯನ್ನು ಕಂಡ ಬಳಿಕ, ಅವಳಾಡಿದ ಮಾತುಗಳನ್ನು ಕೇಳಿದ ಬಳಿಕ, ಒಣಗತೊಡಗಿದ್ದ ನನ್ನ ಆಶಾವೃಕ್ಷವು ಮತ್ತೆ ಚಿಗುರತೊಡಗಿತು. ತರುಣಿಯ ಗೃಹವನ್ನು ನಾನು ಹುಡುಕುತ್ತ ಹೋದೆ. ಕೊನೆಗೆ ಅದನ್ನು ಕಂಡುಹಿಡಿದೆ; ಅದರ ಸುತ್ತುಮುತ್ತ ಅಡ್ಡಾಡಿದೆ. ಅವಳ ಮುಖದರ್ಶನಕ್ಕಾಗಿ ಹೊಂಚುಹಾಕಿದೆ. ಹಗಲು ಉರುಳಿತು. ಇರುಳು ಕಂಡಿತು. ಅಷ್ಟಾದರೂ ಆ ಗೃಹದ ಬಳಿಯಲ್ಲೇ ಅಲ್ಲೊಂದು ಮರದ ಕೆಳಗೆ ಬರಿಯ ನೆಲದ ಮೇಲೆ ಬಿದ್ದುಕೊಂಡು ತೂಕಡಿಸಿದೆ. ಇರುಳು ಕಳೆದು ಹಗಲಾಯಿತು. ದಣಿದು ಹೋದ ನನಗೆ ಬಾಳಲ್ಲಿ ಹಗಲಿರುಳುಗಳ ಉರುಳುವಿಕೆಯನ್ನು ಕಂಡು ಕೆಂಡದಂತೆ ಕೋಪಬಂದಿತು. ಹಗಲೆಲ್ಲ ದಣಿವು; ಇರುಳು ನಿದ್ರಾಭಂಗ; ಮತ್ತೆ ಹಗಲು—ಹಿಂಡಿ ಹೀರುವುದಕ್ಕೆ. ನನ್ನ ಬಾಳಲ್ಲಿ ದುಃಖವೇ ಮನೆಮಾಡಿಕೊಂಡಂತಾಯಿತು. ಅಕ್ಕನು ಹೊರಿಸಿ ಕಳುಹಿಸಿದ ಅಪಾರ ಹಣವು ಅಡವಿಯು ಪಾಲಾಯಿತು. ತರುಣಿಗೆ ಸಲ್ಲಿಸಿದ ತನುಮನಧನ ಸೇವೆಗಳು ಸೊಕ್ಕಿದ ಹೆಣ್ಣನ್ನು ಸುಣ್ಣಕೊಡು ಎಂದು ಕೇಳಿದಂತಾಯಿತು. ಕೆಂಡದ ಕಿಡಿಗಳನ್ನು ರತ್ನಗಳೆಂದು ಮೋಸಹೋಗಿ ಕಿಸೆಯಲ್ಲಿರಿಸಿಕೊಂಡ ಮೂಢನಂತೆ ಆದೆ ನಾನು. ಅಂದು ಪ್ರಾತಃಕಾಲ ಮರದ ಕೆಳಗೆ ಮಲಗಿದ್ದೆಡೆಯಲ್ಲೇ ಎದ್ದು ಕುಳಿತು, ಆಲೋಚಿಸಿ ಯೋಚಿಸಿ ಕಂಗೆಟ್ಟು ನನ್ನ ತಲೆಯೇ ಕೆಟ್ಟು ಹೋದಂತಾಯಿತು. ಇಂತಹುದನ್ನು ಮಾಡಬೇಕೆಂಬುದೇ ನನಗೆ ತಿಳಿಯಲಿಲ್ಲ. ತರುಣಿಯ ಗೃಹಕ್ಕೆ ಸರ್ಪಕಾವಲು; ಒಳಗೆ ಹೋಗುವಂತಿಲ್ಲ. ಅವಳಾಗಿ ನನ್ನನ್ನು ಅನುಗ್ರಹಿಸಲು ಹೊರಗೆ ಕಾಣಿಸಿಕೊಳ್ಳಲೂ ಇಲ್ಲ. ಅವಳ ಈ ಸೊಕ್ಕಿನ ಚರ್ಯೆಯನ್ನೂ, ದ್ರೋಹದ ರೀತಿಯನ್ನು—ನೆನೆಸಿ ನೆನೆಸಿ ನನಗೆ ತಡೆಯಲಾರದಷ್ಟು ಕೋಪವು ಉಕ್ಕಿ ಬಂದಿತು. ಇವಳು ಇಷ್ಟು ದರ್ಪದಿಂದ—ಇಷ್ಟೊಂದ

ದಯಾಶೂನ್ಯಳಾಗಿ—ಇಷ್ಟೊಂದು ಕೃತಘ್ನೆಯಾಗಿ—ಕ್ರೂರಳಾಗಿ ಇರಬಲ್ಲಳು ಎಂಬ ಅನುಭವವು ನನಗೆ ಇಲ್ಲವೆ ಹೋದುದರಿಂದಲೇ ನಾನೀಗ ಅಸಹನೀಯ ಯಾತನೆಯನ್ನು ಅನುಭವಿಸುವಂತಾಯಿತು ಎಂದು ನನ್ನನ್ನು ನಾನೇ ಹಳಿದು ಕೊಂಡೆ. ಹೀಗಾಗುತ್ತದೆ ಎಂದು ಮೊದಲೇ ತಿಳಿದಿದ್ದರೆ "ನನ್ನನ್ನು ಹೊತು ಬಿಡು" ಎಂದು ಅವಳು ಹೇಳಿದಾಗಲೇ ಅವಳನ್ನು ಹೊತುಬಿಟ್ಟಿದ್ದರೆ ಚೆನ್ನಾ ಗಿತ್ತು. ಹಾಯ್! ಹಾಯ್! ನಾನೆಂತಹ ಮುಟ್ಠಾಳ! ತಂದೆಯ ಅಪಾರ ಆಸ್ತಿ ಪರಹಸ್ತಕ್ಕೆ ಹೋಯಿತು. ಅಕ್ಕನ ಹೊನ್ನು ಅನ್ಯರ ಉದ್ಧಾರಕ್ಕೆ ವ್ಯಯ ವಾಯಿತು. ಹೆಣ್ಣನ್ನು ನಂಬಿ ತೊಟ್ಟ ಬಟ್ಟೆಯೊಂದಿಗೆ, ಭಿಕಾರಿಯಂತೆ ಮರ ದಡಿ ಉರುಳಿಕೊಳ್ಳಬೇಕಾಯಿತು! ಹೊನ್ನು—ಹೆಣ್ಣು—ಮಣ್ಣು! ಇವು ಮೂರೂ ಮಾನವನ ಶತ್ರುಗಳು! ಖೇದದಿಂದ ನಾನು ಗಟ್ಟಿಯಾಗಿ ರೋದಿ ಸಿದೆ. ನಿರಾಶೆಯಿಂದ—ಮುಂದಿನ ಹಾದಿ ಕಾಣಿಸದೆ—ತಲೆಯ ಮೇಲೆ ಕೈ ಯಿಟ್ಟು ಕುಳಿತೆ. ಕೊನೆಗೆ ಹೀಗೆ ನಿರಾಶೆಯಿಂದ ಬಡ ಜೀವನವನ್ನು ಹೊತ್ತು ತಿರುಗುವುದಕ್ಕಿಂತಲೂ ಈ ಮರಕ್ಕೆ ನೇಣುಹಾಕಿಕೊಂಡು ಸಾಯುವುದು ಮೇಲು ಎಂದೆನಿಸಿತು. ನಿಜ; ನನ್ನ ತಲೆಯ ಮೇಲೆ ಹತ್ತು ಗಜದ ರುಮಾ ಲಿದೆ. ಅದು ಸಾಕು ಉರುಲು ಹಾಕಿಕೊಂಡು ನೇತಾಡುವುದಕ್ಕೆ, ಹೀಗೆಂದು ಯೋಚಿಸಿ ಕತ್ತೆತ್ತಿ ಮರದ ಕಡೆ ನೋಡಿದೆ.

ಅದೇ ಸಮಯಕ್ಕೆ ಸರಿಯಾಗಿ ಮಹಡಿಯ ಮೇಲಿನ ಮೊಗಸಾಲೆಯಿಂದ ಮೋಹನಾಂಗಿಯು ಕಾಣಿಸಿಕೊಂಡಳು, ನಾನವಳನ್ನು ನೋಡಿದೆ. ಆದರೆ ಅವಳ ಮುಖದಲ್ಲಿ ಪ್ರಸನ್ನತೆಯಿರಲಿಲ್ಲ. "ಬೇಡ ; ಒಳಗೆ ಬಾ" ಎಂದೂ ಅವಳು ಕರೆಯಲಿಲ್ಲ. ಬದಲಾಗಿ ಒಳಗೆ ಹೋಗಿ ತನ್ನ ಸೇವಕಿಯನ್ನು ನನ್ನ ಬಳಿ ಕಳುಹಿಸಿದಳು. ಆ ಸೇವಕಿ ಯಾರು? ಈ ಮನೋಹರ ಸ್ವರೂಪಳಾದ ತರುಣಿಯ ಸೇವೆಗೆ ನಿಯಮಿಸಿದ ಆಳು. ನನ್ನ ಹಣವನ್ನು ಸಂಬಳವಾಗಿ ಪಡೆದವಳು. ಅವಳು ಬಂದು ನನ್ನಲ್ಲಿ ಹೇಳಿದುದೇನು?

"ಇಲ್ಲಿ ನಿಲ್ಲಬೇಡ. ಅವಳಿಗೆ ಕೋಪ ಬಂದೀತು—ಎಚ್ಚರಿಕೆ. ಅದೋ ಅಲ್ಲಿ ಕಾಣಿಸುವ ಆ ಮಸೀದಿ ಬಳಿ ಹೋಗು. ನಾನು ಸುಂದರಿಯನ್ನು ಕಂಡು ನಿನ್ನ ವಿಚಾರವನ್ನು ಅರಿಕೆ ಮಾಡಿಕೊಳ್ಳುತ್ತೇನೆ. ಅವಳು ನಿನ್ನನ್ನು ನೋಡ

ಬಯಸುವಳೇ ಎಂಬ ವಿಚಾರವನ್ನು ತಿಳಿದು ಬಂದು ಹೇಳುತ್ತೇನೆ. ಅವರೆಗೂ ನೀನು ಮಸೀದಿ ಬಳಿಯಲ್ಲೆ ಇರು."

ಮೇಲಿಂದ ಮೇಲೆ ಶಿಕ್ಷೆ—ಪರೀಕ್ಷೆ. ಆದರೆ ತರುಣಿಯಲ್ಲಿ ನನಗಿದ್ದ ಅಚಲವಾದ ಮೋಹಕ್ಕಾಗಿ ಅವಳ ದಿಟ್ಟತನದ ಒಂದೊಂದು ನಡೆಯನ್ನೂ ನುಡಿಯನ್ನೂ ನಾನು ಮನ್ನಿಸುತ್ತಲೇ ಬಂದೆ. ಹೇಗಾದರೂ ಅವಳನ್ನು ಒಲಿಸಿ, ವರಿಸಿ, ಅವಳೊಂದಿಗೆ ಸುಖಿಸುವುದೇ ನನ್ನ ಆಶಯವಾಗಿದ್ದಿತು. "ಆಗಲಿ" ಎಂದು ಹಣೆಯಬರಹಕ್ಕೇ ತಲೆತಗ್ಗಿಸಿ ಮಸೀದಿಯ ಕಡೆ ಹೊರಟೆ. ಕಾಲ ಕಾಲವಲ್ಲಿ ನಮಾಜು ಮಾಡಿದೆ. ಸೇವಕಿಯ ಬರುವಿಕೆಯನ್ನೇ ಎದಿರು ನೋಡುತ್ತಿದ್ದೆ. ಮಧ್ಯಾಹ್ನವಾಯಿತು. ಸಂಜೆಯಾಗುವುದರಲ್ಲಿತ್ತು. ಕಾದು ಕಾದು ಬೇಸತ್ತೆ. ಕೊನೆಗೆ ಅವಳು ಬಂದಳು. ಸೇವಕಿ ನನ್ನಲ್ಲಿ ಒಂದು ಮಾತನ್ನೂ ಆಡಲಿಲ್ಲ. ಪ್ರತಿಯಾಗಿ ಸನ್ನೆಮಾಡಿ ನನ್ನನ್ನು ತರುಣಿಯ ಉದ್ಯಾನವನಕ್ಕೆ ಕರೆದೊಯ್ದಳು. ಅಲ್ಲೊಂದೆಡೆ ಕುಳಿತಿರುವಂತೆ ಸೂಚಿಸಿದಳು. ನಾನು ನಾಯಕಿಯೊಂದಿಗೆ ನನ್ನ ವಿಚಾರ ಮಾತನಾಡಲು ಇನ್ನೂ ಅವಕಾಶ ದೊರಕಲಿಲ್ಲವೆಂದೂ ಬೇಸರಪಟ್ಟುಕೊಳ್ಳದೆ ಸ್ವಲ್ಪ ಹೊತ್ತು ಶಾಂತವಾಗಿ ಕುಳಿತಿದ್ದಲ್ಲಿ ತಾನು ಹೋಗಿ, ಸಮಯ ಕಾದು, ನನಗಾಗಿ ವಾದಿಸಿ, ನನ್ನನ್ನು ಅವಳು ಕಾಣುವುದಕ್ಕೆ ಒಪ್ಪಿಸಲು ಪ್ರಯತ್ನಿಸುವುದಾಗಿಯೂ ಹೇಳಿ, ಅಲ್ಲಿ ನಿಲ್ಲದೆ, ಓಡಿಹೋದಳು. ಆ ಉದ್ಯಾನವನದಲ್ಲಿ ಅತಿ ಸುಂದರವಾದ ಬುಗ್ಗೆಗಳು, ಫಲಭರಿತ ವೃಕ್ಷಗಳು, ಸುಕೋಮಲ, ಸುಮಧುರ ಪುಷ್ಪಗಳು, ಮನೋಹರ ಪಕ್ಷಿಗಳು, ಏನುಬೇಕೋ ಎಲ್ಲಾ ಇದ್ದುವು. ಆದರೆ ಬೆಂದು ಹೋದ ನನ್ನ ಹೃದಯಕ್ಕೆ ಅವೊಂದರಿಂದಲೂ ಆನಂದವುಂಟಾಗಲಿಲ್ಲ.

ಅಷ್ಟರಲ್ಲಿ ತರುಣಿ ಸ್ವರೂಪದ ಆ ಹೆಣ್ಣು ಸಿಂಹವು, ದರ್ಪದಿಂದ ಕತ್ತೆತ್ತಿ, ಕೋಪೋದ್ದೀಪಿತಳಾಗಿ, ಅದೇ ಸೇವಕಿಯನ್ನು ಮುಂದಿಟ್ಟುಕೊಂಡು ನನ್ನತ್ತ ಧಾವಿಸಿ ಬಂದಳು. ತರುಣಿಯ ಮುಖದಲ್ಲಿ ಅಹಂಭಾವವು ಎದ್ದು ನೃತ್ಯ ಮಾಡುತ್ತಿತ್ತು. ನನ್ನ ಬಳಿ ಬಂದು ಅವಳು ಯಾರೋ ಒಬ್ಬ ಅಪರಿಚಿತನನ್ನು ಕಂಡು ಮಾತನಾಡಿಸುವಂತೆ ಸೇವಕಿಯನ್ನು ಕುರಿತು ಹೇಳಿದಳು:

"ಈ ಮನುಷ್ಯನಿಗೇನು ಮಾಡುವುದು? ಇವನಿಗೆ ನೂರು ಚೀಲ ಹೊನ್ನನ್ನು ಕೊಟ್ಟು ಕಳುಹಿಸಿಬಿಡೋಣ. ಅದನ್ನು ಹೊತ್ತುಕೊಂಡು ಅವನು

ತನ್ನ ದೇಶಕ್ಕೆ ಹೋಗಲಿ. ಆ ಹಣವು ಸಾಕಾದಷ್ಟು ಆಯಿತು. ಅದನ್ನಿಟ್ಟು ಕೊಂಡು ಬೇಕಾದ್ದು ಮಾಡಿಕೊಳ್ಳಲಿ. ಇವನ ಸಹವಾಸವು ಅಷ್ಟಕ್ಕೆ ಸಾಕು."

ನನ್ನ ಸ್ಥಿತಿಯಲ್ಲಿ ಬೇರೆ ಯಾರಾದರೂ ಇದ್ದಿದ್ದರೆ—ನನ್ನಂತೆ ಅವಳಲ್ಲಿ ಅನುರಕ್ತನಾಗಿ ಮೋಹಪಾಶದಲ್ಲಿ ಬೀಳದಿದ್ದರೆ—ಅವಳನ್ನು—ಅಧಿಕಾರವಾಣಿ ಯಿಂದ ಅವಳಾಡಿದ ಆ ಅಲಕ್ಷ್ಯದ ಮಾತಿಗೆ— ಅವಳನ್ನು ಅಲ್ಲೆ ತುಂಡು ತುಂಡಾಗಿ ಕತ್ತರಿಸಿ ಹಾಕಿಬಿಡುತ್ತಿದ್ದರು. ಆದರೆ ನಾನವಳ ದಾಸ! ಅವಳ ಕಡೆಗಣ್ಣಿನ ಕೃಪಾಕಟಾಕ್ಷಕ್ಕೆ ಬಾಯಿಬಿಡುತ್ತಿದ್ದ ನಾನು ಅವಳ ಗುಲಾಮನಾಗಿ ರಲು ಸಂಕಲ್ಪಮಾಡಿದ್ದೆ. ನಾನಾಗ ತರುಣಿಯನ್ನು ಕುರಿತು ಹೇಳಿದೆ:

"ಕೇವಲ ಹೊನ್ನಿಗಾಗಿ ನಾನು ಆಸೆಪಡತಕ್ಕವನಾಗಿದ್ದರೆ ನನ್ನಲ್ಲಿದ್ದ ಸರ್ವಸ್ವವನ್ನೂ—ನನ್ನ ಹೊನ್ನು—ನನ್ನ ತನು—ನನ್ನ ಮನ—ಎಲ್ಲವನ್ನೂ ನಿನ್ನ ಸೇವೆಗೆ ಮೀಸಲಾಗಿ ಇರಿಸುತ್ತಿದ್ದೆನೇ? ನಿನ್ನ ದಯೆಗಾಗಿ ಅಲ್ಲವೆ ನನ್ನ ಲ್ಲಿದ್ದ ಅಪಾರ ಹೊನ್ನನ್ನು—ನನ್ನ ಅಮೂಲ್ಯ ಕಾಲವನ್ನೂ ನಿನ್ನ ಅಡಿದಾವರೆ ಗಳಲ್ಲಿ ಒಪ್ಪಿಸಿದೆ. ಹೀಗಿದ್ದೂ ಹೊನ್ನಿನಾಸೆ ನನಗಿಟ್ಟು ನನ್ನನ್ನು ಇಲ್ಲಿಂದ ಹೊರಡಿಸಿಬಿಡುವ ಪ್ರಯತ್ನವೇಕೆ? ತರುಣಿ! ನೀನು ದಯೆ ತೋರದಿದ್ದರೆ ನಾನು ಭಗ್ನಮನೋರಥನಾಗಿ—ಪ್ರಾಣತ್ಯಾಗ ಮಾಡಿಕೊಳ್ಳಬೇಕಾದೀತು. ನೀನೊಲಿದರೆ ಮಾತ್ರ ಹೆಣ್ಣಿನೊಂದಿಗೆ ಹೊನ್ನು ತಾನಾಗಿ ಲಭಿಸೀತು."

ನನ್ನ ಮಾತುಗಳನ್ನು ಕೇಳಿ ಅವಳು ಕೋಪದಿಂದ ಘುಡುಘುಡಿಸಿದಳು.

"ಎಂತಹ ಮುದ್ದಾದ ಮಾತುಗಳಯ್ಯ ನಿನ್ನದು! ಹಾಗಾದರೆ ನೀನು ನನ್ನ ಪ್ರೇಯಸನೋ? ನಾಚಿಕೆಯಾಗುವುದಿಲ್ಲ ನಿನಗೆ? ನಿನ್ನ ಅಂತಸ್ತೇನು? ನನ್ನ ಅಂತಸ್ತೇನು? ನನ್ನನ್ನು ಮದುವೆಯಾಗಬೇಕಂತೆ! ಸಣ್ಣವರ ಬಾಯಲ್ಲಿ ದೊಡ್ಡ ಮಾತು ಹೇಗೆ ಬಂದೀತು? ನೂರು ಚೀಲ ಹೊನ್ನು ನಿನಗೆ ಬೇಡ. ನಾನು ಬೇಕು ಅಲ್ಲವೆ? ಹೊನ್ನಿಗೆ ಮಾರಿಕೊಳ್ಳಬಯಸುವವರ ಮುಂದೆ ನಿನ್ನ ಮಾತನ್ನಾಡಿದ್ದರೆ ಕಿವಿಗೊಟ್ಟು ಕೇಳುತ್ತಿದ್ದರು. ಇಷ್ಟಕ್ಕೆ ಸಾಕು. ನೀನು ನನಗೆ ಉಪಕಾರ ಮಾಡಿದ್ದೀಯಾ ಅದನು ನೆನೆಸಿ ನಿನ್ನ ತಪ್ಪನ್ನು ಮನ್ನಿಸಿದ್ದೇನೆ. ಬೇರೆ ಯಾರಾದರೂ ನೀನಾಡಿದ ಮಾತನ್ನು ಆಡಿದ್ದರೆ ಉಸಿರೊಂದಿಗೆ ಈ ಸ್ಥಳ

ದಿಂದ ಹೊರಗೆ ಹೋಗಲು ಸಾಧ್ಯವಿರುತ್ತಿರಲಿಲ್ಲ. ಆಯಿತು ; ನೀನು ಬಂದ ದಾರಿ ಹಿಡಿದು ನಡೆ. ಹೆಚ್ಚಾಗಿ ಹರಟಲು ಬಯಸಿ ಹುಚ್ಚನಾಗಬೇಡ. ನಿನ್ನ ವಿಧಿ! ಇನ್ನ ರಕ್ಷಣವೂ ನೀನು ನನ್ನೆದುರಿಗೆ ನಿಲ್ಲದಂತೆ ಮಾಡಿಬಿಟ್ಟಿತು."

ನಾನು ಸುಮ್ಮನಿರಲಿಲ್ಲ. ಮತ್ತೆ ತರುಣಿಯನ್ನು ಕಂಡು ರೋದಿಸಿದೆ ;

" ಹಾಗೆ ನೀನು ಉದಾಸೀನ ಮಾಡುವುದಾದರೆ ನನ್ನ ಅದೃಷ್ಟ ಇಷ್ಟೇ ಎಂದುಕೊಳ್ಳುತ್ತ ಬೆಟ್ಟಗುಡ್ಡಗಳಲ್ಲಿ, ಕಾಡುಮೇಡುಗಳಲ್ಲಿ ಅಲೆದು ಬೇಸತ್ತು ಪ್ರಾಣಬಿಡುವೆನು."

ತರುಣಿಗೆ ಕೋಪವು ಮತ್ತಷ್ಟು ಅಧಿಕರಿಸಿತು. ಅವಳು ಆವೇಶದಿಂದ ನುಡಿದಳು.

" ಈ ವಿರಹ ವಾಕ್ಯಗಳೆಲ್ಲ ವ್ಯರ್ಥಾಲಾಪಗಳು ! ಅವುಗಳನ್ನು ನನ್ನೆದುರಿಗೆ ನೀನಾಡ ಬಯಸಿದು ನಿನ್ನ ಮೂರ್ಖತನವನ್ನೂ ಮುಟ್ಠಾಳತನವನ್ನೂ ಸೂಚಿಸುತ್ತದೆ. ಇಂತಹ ಮಾತುಗಳನ್ನು ಕೇಳಲು ಕುತೂಹಲಗೊಳ್ಳುವ— ಕೇಳಿ ಮರುಳಾಗುವ ಮುಗ್ಧೆಯರು ಪ್ರಪಂಚದಲ್ಲಿ ಬೇಕಾದಷ್ಟು ಜನ ಇರುವರು. ಅವರ ಬಳಿ ಹೋಗಿ ಈ ಮಂತ್ರಗಳನ್ನು ಉಚ್ಚರಿಸುವುದು ಒಳ್ಳೆಯದು ಹೋಗು ; ಪರೀಕ್ಷಿಸಿ ನೋಡು."

ಹೀಗೆಂದು ಘರ್ಜಿಸುತ್ತ ಅವಳು ಅಲ್ಲಿಂದ ಎದ್ದು ತನ್ನ ಗೃಹದಲ್ಲಿ ಹೋಗಿ ದೂರಿಕೊಂಡಳು. ನನ್ನ ಎದೆ ಒಡೆದು ಹೋದಂತಾಯಿತು. ಅಲ್ಲಿ ನಿಲ್ಲಲು ನನಗೂ ಮನಸಾಗಲಿಲ್ಲ. ಅಲ್ಲಿಂದೆದ್ದು ನನ್ನ ಕಾಲೆಳೆದೆಡೆ ನಾನು ನಡೆದೆ.

೧೯

ನಾಲ್ಕಾರು ವಾರಗಳು ನಾನು ನಗರವನ್ನು ತ್ಯಜಿಸಿದೆ. ಹುಚ್ಚನಂತೆ ಗುಡ್ಡ ಕಾಡುಗಳಲ್ಲಿ ಅಲೆದೆ. ಗೆಡ್ಡೆ ಗೆಣಸುಗಳನ್ನು ತಿಂದೆ. ಆಗಾಗ ಕಾಡು ಜನರು ನನಗೆ ತಾವು ಬೇಟೆಯಾಡಿ ಸಂಗ್ರಹಿಸಿದ ಮಾಂಸದಲ್ಲಿ ಅಷ್ಟಿಷ್ಟು ಉಣಿಸುತ್ತಿದ್ದರು. ಈ ಕಾಡು ಜನರಿಗಿರುವ ಆದರವೂ ಸತ್ಕಾರವೂ ನಾಗರಿಕ ರೆನಿಸಿದ—ಜನನಾಯಕರೆನಿಸಿದ—ನಗರವಾಸಿಗಳಿಗೆ ಒಮ್ಮೊಮ್ಮೆ ಇಲ್ಲದೆ ಹೋಗುತ್ತದಲ್ಲ—ಎಂದು ನಾನು ಆಶ್ಚರ್ಯಗೊಂಡೆ. ಕಾಡುವಾಸವು ಬೇಸರವಾಯಿತು. ಕೊನೆಗೆ ನಗರವನ್ನು ಸೇರಿದೆ. ಸಂದಿಗೊಂದಿಗಳಲ್ಲಿ ಸುತ್ತಿಸುತ್ತಿ ಅಲೆದೆ. ನನ್ನನ್ನು ಲಕ್ಷ್ಯಮಾಡುವವರೇ ಇಲ್ಲದಂತಾಯಿತು. ಬರಬರುತ್ತ ಹೊತ್ತುಹೊತ್ತಿಗೆ ತುತ್ತು ಊಟವೂ ಸಿಕ್ಕದೆ ನಾನು ಹಸಿವಿನಿಂದ ನರಳಿದೆ. ಮನೋಯಾತನೆಯೊಂದೆಡೆ, ನನಗಾದ ಗೌರವ ಹಾನಿಯನ್ನು ಕುರಿತು ಯೋಚಿಸಿ, ಯೋಚಿಸಿ ಕಂಗೆಟ್ಟು ಕೃಶನಾದೆ. ಇಷ್ಟಾದರೂ ತರುಣಿಯ ಮೇಲಣ ಮೋಹವು ಅಳಿಯಲಿಲ್ಲ. ಎಷ್ಟು ಪ್ರಯತ್ನಪಟ್ಟರೂ ಅವಳನ್ನು ಎದೆಯಿಂದ ತೊಡೆದುಹಾಕಿ ಮರೆತುಬಿಡಲು ಸಾಧ್ಯವಾಗಲಿಲ್ಲ. ಬದಲಾಗಿ ದಿನೇದಿನೇ ಅವಳ ಮೇಲಣ ಹಂಬಲವೇ ಅಧಿಕರಿಸುತ್ತ ಬಂದಿತು.

ಹೀಗೆ ಹತ್ತಾರು ದಿನಗಳು ಕಳೆದಮೇಲೆ ನಾನು ಮತ್ತೆ ಮಸೀದಿಯ ಬಳಿ ಬಂದೆ, ಹೆಜ್ಜೆಯಿಟ್ಟು ನಡೆಯಲಾರದಷ್ಟು ಬಲಹೀನನಾಗಿಹೋಗಿದ್ದೆ. ಮುಂದೇನು ಮಾಡಲೂ ಕೈಸಾಗದೆ ಮಸೀದಿಯ ಮುಂಭಾಗದಲ್ಲಿ ಮರದಡಿ ಜಗುಲಿಯಮೇಲೆ ಉರುಳಿಕೊಂಡೆ. ಈ ಪಾಪಿ ಪ್ರಾಣವು ಹೋಗಲೂ ಒಲ್ಲದು. ಏನು ಮಾಡಲಿ ? ಕೈಜೋಡಿಸಿ ಆಕಾಶದ ಕಡೆ ನೋಡುತ್ತ ಪರಮಾತ್ಮನಲ್ಲಿ ದೀನನಾಗಿ, ಮೌನನಾಗಿ ಮೊರೆಯಿಡುತ್ತಿದ್ದೆ. ಹಲವಾರು ನಿಮಿಷಗಳು ಹೀಗೆ ಕಳೆದಿರಬಹುದು. ಆಗ ನನಗೆ ಚಿರಪರಿಚಿತಳಾದ—ನನ್ನಲ್ಲಿ ಅನುತಾಪ

ಹೊಂದಿದ—ಆ ಸೇವಕಿಯು ಮತ್ತೆ ನನ್ನನ್ನು ಕಾಣಿಸಿಕೊಂಡಳು. ನನ್ನ ಬಲಹೀನ ಪರಿಸ್ಥಿತಿಯನ್ನು ಕಂಡು ಅವಳು ಬಹುವಾಗಿ ಮರುಕಗೊಂಡಳು. ತರುಣಿಯು ಒಪ್ಪಲಿ—ಒಪ್ಪದಿರಲಿ, ಹೇಗಾದರೂ ನನ್ನನ್ನು ಅವಳ ಬಳಿ ಕರೆದೊಯ್ಯಬೇಕೆಂದು ಸೇವಕಿಯು ನಿರ್ಧರಿಸಿದಳು. ಪೆಟ್ಟಿಗೆ ಗಾಡಿಯೊಂದನ್ನು ಕರೆಸಿ ನನ್ನನ್ನು ಅದರಲ್ಲಿ ಮಲಗಿಸಿ ತರುಣಿಯ ಭವನದ ಬಳಿ ಕರೆದುಕೊಂಡು ಹೋದಳು. ನಾನು ನಾಲ್ಕಾರು ದಿವಸಗಳಿಂದ ಹೊಟ್ಟೆಗೆ ತಿಂಡಿಯಿಲ್ಲದೆ ಬಳಲಿ ಬೆಂಡಾಗಿ ಹೋಗಿದ್ದೆ. ಶರೀರದಲ್ಲಿ ತ್ರಾಣವೇ ಇರಲಿಲ್ಲ. ಸೇವಕಿಯು ಆಳುಗಳನ್ನು ಕರೆಸಿ ಭವನದ ಹೆಬ್ಬಾಗಿಲಬಳಿ ಮರೆವಡಿಯಿದ್ದ ಒಂದು ಅಗಲ ವಾದ ಆಸನದಲ್ಲಿ ನನ್ನನ್ನು ಮಲಗಿಸಿದಳು. ಕುಡಿಯುವುದಕ್ಕೆ ತಂಪಾದ ಪಾನೀಯಗಳನ್ನು ತರಿಸಿಕೊಟ್ಟು ಉಪಚರಿಸಿದಳು. ಇಷ್ಟಾದರೂ ನಾನು ಬಹಳ ಬಲಹೀನನಾಗಿದ್ದೆ.

ನಾನು ಮಲಗಿದ್ದ ಸ್ಥಳದಲ್ಲೇ ಮೊಗಸಾಲೆಯಿದ್ದಿತು. ಸೇವಕಿಯು ತರುಣಿಯ ಬಳಿಗೆ ಓಡಿ ಅವಳನ್ನು ಮೊಗಸಾಲೆಗೆ ಕರೆತಂದಳು. ಅವಳು ನಗುತ್ತ ಇಣಿಕಿ ನೋಡಿದಳು. ಆದರೂ ತರುಣಿಗೆ ನನ್ನ ಗುರುತು ಪರಿಚಯ ವಿಲ್ಲವೆಂದು ನಟಿಸಿದಳು. ವಾಸ್ತವವಾಗಿಯೂ ದೈಹಿಕ ಮಾನಸಿಕ ಬಳಲಿಕೆಗಳಿಂದ ನಾನಷ್ಟೊಂದು ಬಡವಾಗಿ ಬಣ್ಣ ಗೆಟ್ಟಿದ್ದೆ. ತರುಣಿಯ ತಿರಸ್ಕಾರ ಭಾವವನ್ನು ಕಂಡು ಸೇವಕಿಗೂ ತಡೆಯಲಿಲ್ಲ. ತನ್ನ ಒಡತಿಯನ್ನು ಕುರಿತು ನನ್ನ ವಿಚಾರ ನಂಬುಗೆ ಹುಟ್ಟಿಸಿ ಅವಳನ್ನು ಒಡಂಬಡಿಸಲು ಯತ್ನಿಸಿದಳು. ಆದರೆ ತರುಣಿಯು ತನ್ನ ಬಿಂಕವನ್ನು ಬಿಡಲಿಲ್ಲ. ಬದಲಾಗಿ ಕೋಪಾವೇಶಳಾಗಿ ಅವಳು ಸೇವಕಿ ಯನ್ನು ಕುರಿತು ಕೇಳಿದಳು:

"ಸುಳ್ಳಾಡುವಿಯೇಕೆ? ನನ್ನ ಗುಪ್ತಚಾರರು ಎಷ್ಟೋ ದಿನಗಳ ಮುನ್ನ ನನ್ನಲ್ಲಿ ಹೇಳಿದ್ದಾರೆ—ಅವನು ತನ್ನ ಊರನ್ನು ಸೇರಿಯಾಯಿತೆಂದು. ಈಗ ನೀನು ಯಾವನೋ ಒಬ್ಬ ಬಡ ಭಿಕಾರಿಯನ್ನು ಇಲ್ಲಿಗೆ ಕರೆತಂದು ಅವನೇ ಇವನು ಎಂದು ಹುಚ್ಚಾಟವನ್ನು ಹೂಡುತ್ತಿರುವೆ. ನಿನಗೇನು ಮಾಡುವುದಕ್ಕೆ ಬೇರೆ ಕೆಲಸವಿಲ್ಲವೆ?"

ತರುಣಿಯು ಸೇವಕಿಯನ್ನು ಗದರಿಸಿದಳು. ಆದರೆ ಸೇವಕಿಯು ಹೆದರಲಿಲ್ಲ. "ಸತ್ಯವನ್ನು ಮಾರ್ಪಡಿಸಲು ಸೃಷ್ಟಿಕರ್ತನಿಗೂ ಸಾಧ್ಯವಿಲ್ಲ" ಎಂದು ಸೇವಕಿಯು ನಮ್ರತೆಯಿಂದ ಬಿನ್ನವಿಸಿದಳು. ಅಷ್ಟಕ್ಕೆ ನಿಲ್ಲದೆ ಅವಳು ಮುಂದುವರಿದು ಹೇಳಿದಳು.

"ರಾಜಕುಮಾರಿ ! ಜನಗಳ ಗುಣಗಳನ್ನು ಕಂಡುಹಿಡಿಯುವುದರಲ್ಲಿ ನೀವು ಬಹಳ ಚತುರತೆಯುಳ್ಳವರು. ನಾನಾಡಿದ ಮಾತು ಸುಳ್ಳೆಂದು ಹೇಳಿದಾಕ್ಷಣ ಅದು ಸುಳ್ಳಾಗದು. ನಿಮ್ಮ ಮುಖದ ಮೇಲೆ ಮುಸುಕಿರುವ ಘರದೆಯನ್ನು ಕಸಿಗೊತ್ತಿ ಕಣ್ಣಿಟ್ಟು ನೋಡಿ. ನಿಮಗೇ ಗೊತ್ತಾಗದಿರದು ! ಇವನೇ ಅವನು ಹೌದೋ ಅಲ್ಲವೋ ಎಂದು. ಸತ್ಯ ಹೇಳದಿದ್ದರೆ ನಿಮ್ಮಂತಹ ದೊಡ್ಡವರಲ್ಲಿ ನನ್ನಂತಹ ಈ ಗುಲಾಮಳಿಗೆ ಇಷ್ಟೊಂದು ಧೈರ್ಯವು ಎಲ್ಲಿಂದ ಬರಬೇಕಾಗಿತ್ತು ? ಅಷ್ಟಕ್ಕೂ ಅವನು ನಿಮಗೆ ಮಾಡಿದ್ದು ಮಹದುಪಕಾರ ! ಅದೇನು ಸಾಧಾರಣವಾದದ್ದೇ ? ಮರಣಾವಸ್ಥೆಯಿಂದ ತಪ್ಪಿಸಿ ಜೀವದಾನವಾಡಿದ ಅವನು ಕಂಗೆಟ್ಟು, ಕಳಪೆಹೊಂದಿ, ಮರದಡಿಯಲ್ಲಿ ! ಪ್ರಾಣದಾನ ಪಡೆದ ನೀವು ಒಡ್ಡೋಲಗದಿಂದ ಮಹಡಿಯ ಮೊಗಸಾಲೆಯಲ್ಲಿ ! ಇಂತಹ ಜೀವದಾತನಿಗೆ ಈ ತೆರನಾದ ತಿರಸ್ಕಾರವೇ ? ಕೃತಘ್ನತೆಯೇ ? ಇದು ಸಲ್ಲದು. ಮನುಷ್ಯರೂ ಒಪ್ಪರು ; ದೇವರೂ ಒಪ್ಪನು. ಅವನಿಗಾಗಿ—ಅವನ ಈಗಿರುವ ವಿಷಮ ಪರಿಸ್ಥಿತಿಗಾಗಿ ಮರುಕಗೊಂಡು ನಾನು ನಿಮ್ಮಲ್ಲಿ ಬೇಡುತ್ತೇನೆ. ದಯಾಶೂನ್ಯರಾಗಬೇಡಿ."

ಇಷ್ಟು ಮಾತುಗಳನ್ನು ಸೇವಕಿಯು ಧೈರ್ಯದಿಂದ ಆಡಿದುದನ್ನು ಕೇಳಿ, ಕೊನೆಗೂ ನನ್ನ ಪರವಾಗಿ ವಾದಿಸುವವರು ಒಬ್ಬರಾದರೂ ಇದ್ದಾರಲ್ಲ ಎಂದು ನನಗನ್ನಿಸಿತು. ಕುಂದಿಹೋಗುತ್ತಿದ್ದ ಜೀವಕ್ಕೆ ಮತ್ತೆ ಹೊಸ ಕಳೆ ಬರತೊಡಗಿತು. ತರುಣಿಯು ರಾಜಕುಮಾರಿಯೆಂದು ಈಗ ನನಗೆ ಸ್ಪಷ್ಟವಾಗಿ ಗೊತ್ತಾಗಿಹೋಯಿತು. ಅವಳ ಅಂತಸ್ತಿನಲ್ಲಿ ಅವಳ ಅಧಿಕಾರಕ್ಕೆ, ದರ್ಪಕ್ಕೆ ಎದುರಾಗಿ ಸೇವಕಿ ಆಡಿದ ಮಾತುಗಳನ್ನು ಅವಳು ಸಹಿಸಿದುದರಿಂದಲೇ ನನ್ನಲ್ಲಿ ರಾಜಕುಮಾರಿಗೆ ಕನಿಕರವು ತಲೆದೋರತೊಡಗಿತೆಂದೂ ನನಗೆ ಭಾಸವಾಯಿತು.

ಈ ಎರಡನೆಯ ಕಾರಣದಿಂದಲೂ ನನ್ನ ಮನಸ್ಸು ಮತ್ತಷ್ಟು ನೆಮ್ಮದಿಗೊಂಡಿತು. ಶೂನ್ಯಪ್ರಾಯವಾಗಿ ಕಗ್ಗತ್ತಲು ಕವಿದುಹೋಗಿದ್ದ ನನ್ನ ಬಡಬಾಳಲ್ಲಿ ಮತ್ತೆ ಹೊಸ ಬೆಳಕು ಜ್ವಲಿಸತೊಡಗಿತು. ರಾಜಕುಮಾರಿ ಸೇವಕಿಯನ್ನು ಕುರಿತು ಹೇಳಿದಳು. "ಅವನು ಯಾರೇ ಆಗಿರಲಿ; ಅದರಿಂದ ಅಡಚಣೆಯಿಲ್ಲ. ಅವನು ಕೃಶನಾಗಿಹೋಗಿರುವುದನ್ನು ನಾನು ಬಲ್ಲೆ. ಅವನನ್ನು ಆಸ್ಪತ್ರೆಯಲ್ಲಿ ಸೇರಿಸಿ ತಕ್ಕ ಚಿಕಿತ್ಸೆ ಮಾಡಿಸು, ಅವನು ಗುಣ ಹೊಂದಿದನಂತರ ಉಳಿದ ವಿಷಯಗಳನ್ನು ವಿಚಾರಿಸೋಣ."

ರಾಜಕುಮಾರಿಯು ಸೇವಕಿಗೆ ಆಜ್ಞೆಮಾಡಿದಳು. ಆದರೆ ಸೇವಕಿಯು ಅಷ್ಟಕ್ಕೆ ತೃಪ್ತಳಾಗಲಿಲ್ಲ. ಅವಳು ತನ್ನ ಒಡತಿಯನ್ನು ಕುರಿತು 'ರಾಜಕುಮಾರಿ! ನೀವು ನಿಂತ ಸ್ಥಳದಿಂದ ನಿಮ್ಮ ದಿವ್ಯಹಸ್ತದಿಂದ ಆ ಬಡಪಾಯಿಯ ಮೇಲೆ ಪನ್ನೀರನ್ನು ಚೆಲ್ಲಿದರೆ ಸಾಕು. ಅವನು ಅದರಿಂದ ಎಷ್ಟೋ ಸಂತುಷ್ಟಿ ಹೊಂದಿ ಚೇತರಿಸಿಕೊಂಡಾನು. ಹಾಗಲ್ಲದೆ ಅವನನ್ನು ನೀವು ಉದಾಸೀನ ಮಾಡುವುದಾದರೆ ಅವನು ಮರಣಕ್ಕೆ ತುತ್ತಾಗಿಹೋಗುವುದು ಖಂಡಿತ. ನಾನು ಗುಲಾಮಳು. ನಿಮ್ಮಲ್ಲಿ ಹೆಚ್ಚು ಹೇಳಿ ದುರಹಂಕಾರಿ ಎಂದೆನ್ನಿಸಿಕೊಳ್ಳಲೇ? ಪ್ರಪಂಚವೆಲ್ಲವೂ ನಿಂತಿರುವುದು ಆಶೆಯ ಆಧಾರದಮೇಲೆ. ಇಂದಲ್ಲ ನಾಳೆಯಾದರೂ ನಲ್ಮೆಯುಂಟಾದೀತು ಎಂಬ ನಂಬಿಕೆ—ನಿರೀಕ್ಷಣೆಗಳಮೇಲೆ, ಜೀವವಿರುವವರೆಗೂ ಆಶೆಗೆ ಅವಕಾಶವುಂಟು. ಆ ಆಶೆಗೆ ನಂಬಿಕೆಯೇ ಕಾರಣ. ನಂಬಿಕೆಯಳಿದರೆ ಆಶೆಯೂ ಅಳಿದೀತು. ಆಗ ಜೀವ ಉಳಿಯದು'. ಎಂದು ಒತ್ತಾಯಪಡಿಸಿದಳು.

ಸೇವಕಿಯ ಶಿಫಾರಸು ಮಾತುಗಳನ್ನು ಕೇಳಿ ನಾನೂ ಧೈರ್ಯಗೊಂಡು ಹೇಳಿದೆ:

"ರಾಜಕುಮಾರಿ! ನೀನು ಈ ತೆರನೆ ಉದಾಸೀನಮಾಡಿದರೆ ಬದುಕಿರಬೇಕೆಂಬ ಬಯಕೆ ನನಗಿಲ್ಲವೇ ಇಲ್ಲ. ನನ್ನ ಅರ್ಧ ಪ್ರಾಣವು ಈಗಾಗಲೇ ನಶಿಸಿಹೋಗಿದೆ, ಹೇಗೂ ನಾನು ಬೇಗನೆ ಸಾಯಬಯಸುತ್ತೇನೆ. ನನ್ನನ್ನು ಕೃಪಾದೃಷ್ಟಿಯಿಂದ ನೋಡಿ ಉದ್ಧರಿಸುವ ಶಕ್ತಿ ನಿನ್ನ ಹಸ್ತಗಳಲ್ಲಡಗಿದೆ.

ಆಶಕ್ತಿಯನ್ನು ಉಪಯೋಗಿಸುವುದೂ ಬಿಡುವುದೂ ನಿನಗೆ ಸೇರಿದ್ದು. ನಾನು ಬದುಕಿರಬೇಕೇ? ಸಾಯಬೇಕೇ? ಈ ವಿಚಾರವನ್ನು ನಿರ್ಧರಿಸುವ ಶಕ್ತಿ ನಿನ್ನ ಕೈಯಲ್ಲಿದೆ. ಹೆಚ್ಚು ಹೇಳಲಾರೆ. ಬಾಯೊಣಗುತ್ತಿದೆ; ನಾಲಿಗೆ ನಡುಗುತ್ತಿದೆ; ದೇಹವು ಕಂಪಿಸುತ್ತಿದೆ''.

ಎಂತಹ ಕಲ್ಲೆದೆಯೂ ಒಂದೊಂದು ಸಲ ಕರಗಲೇ ಬೇಕು. ಕರುಣೆಯನ್ನು ಪ್ರಪ್ರಥಮವಾಗಿ ಕಂಡ ಕ್ಷಣದಿಂದ ಇದುವರೆಗೂ ನಾನು ಆಡಿದ ಮಾಡಿದ ಪ್ರತಿಯೊಂದು ಮಾತಿನಲ್ಲೂ ಕೃತ್ಯದಲ್ಲಿಯೂ ನಿಸ್ಪೃಹತೆಯು ಸಂಪೂರ್ಣವಾಗಿ ಅಡಗಿದ್ದಿತು. ಸತ್ಯದ ಎಲ್ಲೆಯನ್ನು---ಸಭ್ಯತೆಯ ನಿಯಮಗಳನ್ನು, ಸಹನೆಯ ಕಟ್ಟುಪಾಡುಗಳನ್ನು—ಸೌಹಾರ್ದತೆಯ ಅಳವನ್ನು ಮೀರಿ ನಾನು ಒಮ್ಮೆಯೂ ನಡೆದುಕೊಳ್ಳಲಿಲ್ಲ. ಈ ಎಲ್ಲ ನಿಯಮ ನಿಷ್ಠೆಗಳ ಒಟ್ಟುಗೂಡಿದ ಸಹಜ ಸಮಂಜಸ ಸ್ವರೂಪವೇ ನನ್ನ ಈ ಆರ್ತ ಪರಿಸ್ಥಿತಿಯಲ್ಲಿ ನನಗೆ ವಜ್ರ ಕವಚವಾಗಿ ಪರಿಣಮಿಸಿತು. ತರುಣಿಯು ಆಲೋಚಿಸಿದಳು. ನಾನಾವಳಿಗೆ ಮಾಡಿದ ನಿಸ್ಪೃಹ ಸೇವೆಯು ಮೆಟ್ಟಲು ಮೆಟ್ಟಲಾಗಿ ಅವಳಿಗೆ ಮುಂದಟ್ಟಾಗಿರಬೇಕು. ತನ್ನ ಧೂರ್ತತನದ ಬಗ್ಗೆ ಅನುಚಿತ ದರ್ಪದ ಬಗ್ಗೆ—ಅವಳು ನೊಂದು ನಾಚಿರಬೇಕು. ಸುಖದುಃಖಗಳ ಕಾರಕ ಪ್ರೇರಕ ಪ್ರೋತ್ಸಾಹಕ ಪರಿಹಾರಕ ಸೃಷ್ಟಿನಾಯಕನು ಅವಳ ಹೃದಯವನ್ನು ಹೊಕ್ಕಿರಬೇಕು. ಹೊಕ್ಕು ಅವಳ ಕಠಿಣ ಮನಸ್ಸಿಗೆ ದಿವ್ಯಾಂಜನವನ್ನು ಲೇಪನ ಮಾಡಿರಬೇಕು. ಕಲ್ಲಂತಿದ್ದ ಅವಳ ಎದೆಯು ಮಂಜಿನಂತೆ ಕರಗಿ ಕ್ರಮೇಣ ಮೃದುವಾಗ ತೊಡಗಿತು. ಆಗ ಅವಳು ಆಡಿದ ಮಾತುಗಳನ್ನು ಕೇಳಿ ನನಗೆ ನಂಬಲಾರದಷ್ಟು ವಿಸ್ಮಯ ವುಂಟಾಯಿತು. ತರುಣಿ ಹೇಳಿದಳು.:

"ಇವನ ಪರಿಸ್ಥಿತಿ ಚಿಂತಾಜನಕವಾಗಿದೆ. ಇವನನ್ನು ಒಳಗೆ ತಂದು ಮೊದಲು ಮೆತ್ತನೆಯ ಹಾಸಿಗೆಯಲ್ಲಿ ಮಲಗಿಸಿ. ನಾಲ್ಕಾರು ಸೇವಕರು ಅವನ ಉಪಚಾರಕ್ಕೆ ನಿಲ್ಲಲಿ. ಪ್ರಸಿದ್ಧ ವೈದ್ಯರಿಗೆ ಹೇಳಿ ಕಳುಹಿಸಿ. ಅವನ ಪರಿಸ್ಥಿತಿಯನ್ನು ಕೂಲಂಕಷವಾಗಿ ಪರೀಕ್ಷಿಸಿ ನೋಡಲಿ."

ಸೇವಕರು ರಾಜಕುಮಾರಿಯ ಆಜ್ಞೆಯನ್ನು ಹೊತ್ತು ಪ್ರಸಿದ್ದ ವೈದ್ಯರ ಬಳಿ ಓಡೋಡಿ ಹೋದರು. ಏತನ್ಮಧ್ಯೆ ಮತ್ತೆ ಕೆಲವರು ನನ್ನನ್ನು ಎತ್ತಿ

ಕೊಂಡು ಹೋಗಿ ಮೆತ್ತನೆಯ ಹಾಸಿಗೆಯಲ್ಲಿ ಮಲಗಿಸಿದರು. ನನ್ನ ಉಪ ಚಾರಕ್ಕೆ ಸುತ್ತುವರಿದು ನಿಂತರು. ಹಾಲನ್ನು ಕುಡಿಸಿದರು. ಹಣ್ಣನ್ನು ತಿನ್ನಿಸಿ ದರು. ಉತ್ತಮ ದ್ರಾಕ್ಷಾರಸವನ್ನು ಕುಡಿಸಿದರು.

ವೈದ್ಯರು ಬಂದು ನನ್ನನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ನೋಡಿದರು. ಆಗ ರಾಜಕುಮಾರಿಯೂ ನನ್ನ ಹಾಸಿಗೆ ಬಳಿ ಬಂದು ನಿಂತಳು. ವೈದ್ಯರ ಇತ್ಯರ್ಥವನ್ನು ಅವಳು ಆತುರದಿಂದ ನಿರೀಕ್ಷಿಸುತ್ತಿದ್ದಂತೆ ನನಗೆ ಕಂಡಿತು. ವೈದ್ಯರು ಅವಳನ್ನು ಕುರಿತು ಹೇಳಿದರು :

"ಇವನಿಗೆ ಪ್ರೇಮಯಾತನೆ. ತಾನು ಪ್ರೀತಿಸಿದ ವ್ಯಕ್ತಿಯು ತನ್ನಲ್ಲಿ ಒಲಿಯದೆ ಇದ್ದುದರಿಂದ ಇವನು ಕೊರಗಿ ಕೃಶವಾಗುತ್ತಿದ್ದಾನೆ. ಇವನ ಆಶೆಯು ಈಡೇರಬೇಕು. ಇವನು ಬಯಸಿದ ಹೆಣ್ಣು ಇವನಲ್ಲಿ ಅನುಗ್ರಹ ಗೊಂಡು ಇವನನ್ನು ಮದುವೆಯಾದರೆ ಮಾತ್ರ ಇವನು ಬದುಕಿಕೊಂಡಾನು. ಇಲ್ಲದಿದ್ದರೆ ಇವನು ಹೀಗೆಯೇ ಕ್ಷಯಿಸಿ, ಕ್ಷಯಿಸಿ ಅತಿಕ್ಷಿಪ್ರದಲ್ಲಿಯೇ ಸಾಯು ವುದು ಖಂಡಿತ."

ರಾಜಕುಮಾರಿ ಕೇಳಿದಳು. ಅವಳ ಮನಸ್ಸು ಕರಗಿತು. ವೈದ್ಯರಿಗೆ ಉಚಿತ ಮರ್ಯಾದೆಗಳನ್ನು ಮಾಡಿ ಅವರನ್ನು ಕಳುಹಿಸಿಕೊಟ್ಟಳು. ಬಳಿಕ ನನಗೆ ಸ್ನಾನ ಮಾಡಿಸಿ, ಉತ್ತಮ ಉಡುಗೆ ತೊಡುಗೆಗಳನ್ನು ತೊಡಿಸಿ, ಊಟ ಉಪಚಾರಗಳಾದ ಬಳಿಕ ತನ್ನ ಬಳಿ ನನ್ನನ್ನು ಕರೆತರುವಂತೆ ಆಜ್ಞಾಪಿಸಿ ತನ್ನ ಅಂತಃಪುರಕ್ಕೆ ಹೋದಳು.

## ೨೦

ಇಷ್ಟು ಕಷ್ಟನಷ್ಟಗಳಿಗೆ ಗುರಿಯಾದ ನನಗೆ ಕಟ್ಟಕಡೆಗೆ ಸುಂದರಿಯ ಕಟಾಕ್ಷವೀಕ್ಷಣೆಯಾಯಿತು. ನಾನು ಪಟ್ಟ ಕಷ್ಟಗಳೆಲ್ಲ ಕ್ಷಣಕಾಲದಲ್ಲಿ ಮರೆತು ಹೋದುವು. ನಾನು ಹೊಸ ಮನುಷ್ಯನಾಗುತ್ತ ಬಂದೆ. ಕೃಶವಾಗಿ ಹೋಗಿದ್ದ ನನ್ನ ಅಂಗಾಂಗಳಲ್ಲಿ ನವಚೇತನವು ಮೂಡಿ ಬೆಳೆಯ ತೊಡಗಿತು. ಸ್ನಾನ' ಊಟ ಉಪಚಾರಗಳು ಮುಗಿದುವು. ನೂತನ ವಸ್ತ್ರವನ್ನು ತೋಡಿಸಿದುದೂ ಆಯಿತು. ಬಳಿಕ ಸೇವಕರು ನನ್ನನ್ನು ಅಂತಃಪುರದಲ್ಲಿ ಕರೆದುಕೊಂಡು ಹೋಗಿ ರಾಜಕುಮಾರಿ ಬಳಿ ಕುಳ್ಳಿರಿಸಿದರು.

ಅವಳು ಅನಿರೀಕ್ಷಿತವಾಗಿ ತಾನೇ ಮಾತನ್ನು ಮೊದಲು ಮಾಡಿದಳು :

"ಈಗೇನು ? ನನ್ನನ್ನು ಅನೇಕ ಬಾರಿ ಅಪವಾದಕ್ಕೂ—ಅಪಹಾಸ್ಯಕ್ಕೂ ಗುರಿಮಾಡಲು ನೀನು ಯತ್ನಿಸಿದ್ದುಂಟು. ಇರಲಿ ; ನಿನ್ನ ಮನಸ್ಸಿನಲ್ಲಿರುವುದನ್ನು ಮುಚ್ಚುಮರೆಮಾಡದೆ ಹೇಳಿಬಿಡು. ರಹಸ್ಯವೂ ಬೇಡ—ರಾಗಾಲಾಪನೆಯೂ ಬೇಡ. ಇದ್ದುದನ್ನು ಇದ್ದಂತೆ ಹೇಳು."

ನನಗೆ ಧೈರ್ಯ ಬಂದಿತು. ನಾನು ಅವಳನ್ನು ಮೂರಾವರ್ತಿ ಪ್ರದಕ್ಷಿಣೆ ಮಾಡಿದೆ. ಬಳಿಕ ಬಹಳ ನಮ್ರತೆಯಿಂದ ಕೈಜೋಡಿಸಿ ಅವಳ ಮುಂದೆ ನಿಂತೆ, ಮನಸ್ಸನ್ನು ದೃಢಪಡಿಸಿಕೊಂಡು ಹೇಳಿಯೇ ಬಿಟ್ಟೆ. ನೂರು ಮಾತುಗಳ ಸಾರ ವನ್ನು ಭಟ್ಟಿ ಇಳಿಸಿ ಮಾತಿನಲ್ಲಿ ಹೇಳುತ್ತೇನೆ. 'ನನ್ನನ್ನು ಮದುವೆಯಾಗು' ಎಂದೆ. ರಾಜಕುಮಾರಿ ನನ್ನನ್ನು ಅಂಗಾಲಿನಿಂದ ತಲೆಯವರಿಗೂ ದಿಟ್ಟಿಸಿ ನೋಡಿದಳು ; ಅವಳೇನು ಹೇಳುವಳೋ ಎಂದು ನನ್ನ ಎದೆ ತಡಬಡಿಸುತ್ತಿತ್ತು. ಆಗ ಅವಳು ಹೇಳಿದಳು ;

"ಕುಳಿತುಕೋ, ನಿನ್ನ ಸೇವೆ, ನಿನ್ನ ನಿಸ್ಪೃಹತೆ ಇವುಗಳನ್ನು ನಾನು ಮನಸ್ಸಾಕ್ಷಿಯಾಗಿ ಒಪ್ಪಿದ್ದೇನೆ. ನಿನ್ನನ್ನು ಪರಿಪೂರ್ಣವಾಗಿ ಪರೀಕ್ಷಿಸ ಬೇಕೆಂಬುದೇ ನನ್ನ ಆಶಯವಾಗಿತ್ತು. ನಿನ್ನ ಒಂದೊಂದು ನುಡಿಯೂ, ಕೃತಿಯೂ, ಸತ್ಯವಾದುದು, ಸಹಜವಾದುದು, ಸಾಧುವಾದುದು, ಸಮಂಜಸ ವಾದುದು ಎಂದು ನಾನು ಗ್ರಹಿಸಿ ಒಪ್ಪಿರುತ್ತೇನೆ. ನಿನ್ನ ಧೈರ್ಯ ಸ್ಥೈರ್ಯ, ಅಚಲ ನಂಬಿಕೆಗಳನ್ನೂ ನಾನು ಮನಗಂಡು ಮೆಚ್ಚಿದ್ದೇನೆ. ನಿನ್ನ ಉಪಾಕಾರ ವನ್ನು ನನ್ನ ಎದೆಯಮೇಲೆ ಸ್ವರ್ಣಾಕ್ಷರಗಳಿಂದ ಮುದ್ರಿಸಿದ್ದೇನೆ. ನಿನ್ನ ಅನು ರಾಗವನ್ನು ನಾನು ಒಪ್ಪಿದ್ದೇನೆ. ನಿನ್ನನ್ನು ಮದುವೆಯಾಗಲು ನಾನು ಅನುಮತಿಸಿದ್ದೇನೆ."

ಈ ಮಾತುಗಳು ನನಗೆ ಅಮೃತಸದೃಶವಾದುವು. ಇವುಗಳನ್ನು ಕೇಳಿ ಆನಂದಿಸಿದೆ. ನಾನು ಪಟ್ಟ ಕಷ್ಟಗಳೆಲ್ಲ ವ್ಯರ್ಥವಾಗದೆ ಕೊನೆಗೆ ಸಾರ್ಥಕ ವಾದುದಕ್ಕೆ ಸಂತೋಷಗೊಂಡು ಇಂತಹ ಸುಯೋಗವನ್ನು ನನಗೆ ಕರುಣಿಸಿದುದ ಕ್ಕಾಗಿ ಭಗವಂತನನ್ನು ನಾನು ಅಪಾರವಾಗಿ ವಂದಿಸಿದೆ; ಈ ಅತುಳಾನಂದ ಸಮಯದಲ್ಲಿ ನನ್ನ ಮೈ ಬುರಬುರನೆ ಉಬ್ಬಿತು. ಅತಿ ಸಂತೋಷದಿಂದ ನಾನು ಮೃತಿಹೊಂದಿದ್ದರೂ ಆಶ್ಚರ್ಯವೆನಿಸುತ್ತಿರಲಿಲ್ಲ. ದೈವ ಕೃಪೆಯೊದಗಿದರೆ ಕ್ಷಣಕಾಲದಲ್ಲಿ ಎಷ್ಟೋ ದಿವಸಗಳು ಅಸಾಧ್ಯವೆನಿಸಿದ ಬಯಕೆ ಈಡೇರಬಲ್ಲು ದೆಂಬದನ್ನು ಗ್ರಹಿಸಿದೆ. ಅದೇ ದಿವಸ, ಉತ್ಕೃಷ್ಟ ಮುಹೂರ್ತದಲ್ಲಿ; ಉನ್ನತ ತಾರೆಗಳ ಸಂಘಟನ ಸಮಯದಲ್ಲಿ, ನನ್ನ ಮತ್ತು ರಾಜಕುಮಾರಿಯ ವಿವಾಹ ಮಹೋತ್ಸವು ಅತ್ಯಂತ ವಿಜೃಂಭಣೆಯಿಂದ ನಡೆದು ಹೋಯಿತು. ಗತಿಗೆಟ್ಟು ಹೋಗಿದ್ದ ನಾನೂ, ಅತಿದರ್ಪದಿಂದ ನನ್ನನ್ನು ಧಿಕ್ಕರಿಸುತ್ತಿದ್ದ ಸುಂದರಿಯೂ, ನಮ್ಮ ನಮ್ಮ ತತ್ಪೂರ್ವ ಸ್ಥಿತಿಗತಿಗಳು ಭಗವಂತನ ಅನುಗ್ರಹದಿಂದ ಮಾರಿ ಹೋದುದಕ್ಕೆ ಅವನನ್ನು ವಂದಿಸಿದೆವು. ನಾವು ಸತಿಪತಿಯರಾಗಿ ನವೋತ್ಸಾಹ ಗಳಿಂದ, ನವೀನ ರೀತಿನೀತಿಗಳಿಂದ, ನಯನಮ್ರತೆಗಳಿಂದ, ಸಂತೋಷದ ಕಡಲಲ್ಲಿ ಮುಳುಗಿ ಓಲಾಡಿದೆವು.

## ೨೧

ಹೀಗೆ ಪರಮಾತ್ಮನ ಅನುಗ್ರಹದಿಂದ ಎಷ್ಟೋ ಕಷ್ಟನಷ್ಟಗಳನ್ನು ಅನುಭವಿಸಿದನಂತರ ನನ್ನ ಇಷ್ಟಾರ್ಥವು ಫಲಿಸಿ ನಾನು ರಾಜಕುಮಾರಿಯನ್ನು ಮದುವೆಯಾದೆ. ಆದರೆ ನನಗೂ ಅವಳಿಗೂ ನಡುವೆ ಸರಸವು ಬೆಳೆಯಲಿಲ್ಲ. ಅವಳನ್ನು ನೋಡಿದಂತೆಲ್ಲ ನನಗೆ ಅವಳ ಅಧಿಕಾರ, ದರ್ಪ, ಅನಾದರಣೆ, ಅಪಹಾಸ್ಯ ಸ್ವರೂಪಗಳೇ ನೆನಪಿಗೆ ಬಂದು ಅವಳೊಡನೆ ಸರಸವಾಗಿರಲು ಆಗದೆ ಹೋಯಿತು. ಸಲ್ಲಾಪದಲ್ಲಿ ಬಿಗಿ, ಸಂತೋಷದಲ್ಲಿ ಹಿಡಿತ ; ಇದಕ್ಕೆಲ್ಲ ಕಾರಣ; ಆದಿಯಿಂದಲೂ ಸುಂದರಿಯು ತನ್ನ ವೃತ್ತಾಂತವನ್ನು ಹೇಳದೆ ಇದ್ದುದು ; ಅದರ ವಿಚಾರ ಒಂದು ಕಿರುಮಾತನ್ನೂ ಪ್ರಸ್ತಾಪಿಸಕೂಡದು ಎಂದು ಅವಳು ನನಗೆ ಕಟ್ಟಪ್ಪಣೆ ಮಾಡಿದ್ದುದು.

ನಾನು ನನ್ನ ಪ್ರೇಯಸಿಯೊಂದಿಗೆ ಸರಸ ಸಲ್ಲಾಪಗಳನ್ನು ಬಿಟ್ಟು ಹಿಡಿತದಿಂದ ಮಾತನಾಡುತ್ತಿದ್ದುದು, ನನ್ನ ಹಳೆಯ ವಾಸನೆಯನ್ನು ಮರೆಯದೆ ಯಾವುದಕ್ಕೂ ಅವಳ ಸೂಚನೆ, ಪ್ರೇರಣೆ. ಪ್ರೋತ್ಸಾಹ, ಅಪ್ಪಣೆ ಇವುಗಳಿಗೆ ಕಾಯುತ್ತಿದ್ದುದು—ಈ ತೆರನಾದ ನನ್ನ ಸೇವಕ ಮನೋಭಾವವನ್ನು ಕಂಡು ಅವಳು ಕಾತುರಳಾದಳು. ನನ್ನ ಬಿಗುಮಾನವು ಒಳಿತಲ್ಲ—ಸರಸವಾಗಿರಬೇಕು ಎಂದು ಮುಂತಾಗಿ ಆಗಿಂದಾಗ್ಗೆ ಎಚ್ಚರಿಸುತ್ತಲೇ ಬಂದಳು. ಅಷ್ಟಕ್ಕೆ ನಿಲ್ಲದೆ "ಮದುವೆಗಾಗಿ ಅಷ್ಟೊಂದು ಹಾರಾಡಿದ ನೀನು ಮದುವೆಯಾದಮೇಲೆ ಬಿಗುಮಾನವನ್ನು ತಾಳಿ ದೂರದೂರ ಸರಿದು ನಿಲ್ಲಲು ಕಾರಣವೇನು ?" ಎಂದು ಸಹ ಅವಳು ನನ್ನನ್ನು ಕೇಳಿದಳು.

ನನ್ನ ಪ್ರಾಣೇಶ್ವರಿಗೆ ನಾನು ನನ್ನ ಹೃದಯಾಂತರಾಳವನ್ನು ಕಲಕುತ್ತಿದ್ದ ವಿಚಾರವನ್ನು ವ್ಯಕ್ತಪಡಿಸಿದೆ:

"ಹೃದಯೇಶ್ವರಿ! ಅಂದು ಆ ದುರ್ದಿನದಲ್ಲಿ, ನಿಶಿರಾತ್ರಿಯಲ್ಲಿ, ಕೋಟೆಯ ಹೊರ ಬಾಗಿಲಲ್ಲಿ, ನಿನ್ನ ಘಾಯಗೊಂಡ, ರಕ್ತದಲ್ಲಿ ತೋಯ್ದುಹೋದ ಶರೀರ ವನ್ನು ನೋಡಿದಾಗ, ನೀನು ಹೆಚ್ಚುಕಮ್ಮಿ ಮರಣಾವಸ್ಥೆಯಲ್ಲಿದ್ದಾಗ, 'ನನ್ನನ್ನು ಹೂತು ಬಿಡು' ಎಂದು ಮಾತ್ರ ಹೇಳಿ ಕಂಠವು ಬಿಗಿದು, ಬಾಯೊಣಗಿ ಕಣ್ಮುಚ್ಚಿದಾಗ, ನಿನ್ನೊಡನೆ ಯಾವ ಮಾತನ್ನೂ ನಾನಾಡಲು ಅವಕಾಶವಾಗಲಿಲ್ಲ. ಅದರನಂತರ ನಿನ್ನನ್ನು ಕುದುರೆಯಮೇಲೆ ಸಾಗಿಸಿಕೊಂಡು ನಗರವನ್ನು ಪ್ರವೇಶಿಸಿ, ನಿನಗಾಗಿ ಮನೆಯೊಂದನ್ನು ಗೊತ್ತುಮಾಡಿದಾಗ, ಮಹಮ್ಮದ್ ಈಸಾನನ್ನು ಕರೆದು ತಂದು ನಲವತ್ತು ದಿವಸಗಳು ಚಿಕಿತ್ಸೆಮಾಡಿಸಿದಾಗಲೂ, ನೀನು ಯಾರು ? ನಿನಗೆ ಘಾಯಗಳು ಆದ ಬಗೆ ಹೇಗೆ, ನಿನ್ನಂತಹ ಸುಕೋಮಲ ಶರೀರಳಾದ ಸುಂದರಿಯನ್ನು ಸುಮಧುರ ಪುಷ್ಪಗಳಿಂದ ಆರಾಧಿಸಿ ಆನಂದಿಸುವುದಕ್ಕೆ ಪ್ರತಿಯಾಗಿ ಯಾವ ದುರಾತ್ಮನು ಕೂರಲಗಿನ ತಿವಿತದಿಂದ ಉಸಿರಳಿಸಿ ಹದ್ದು ಕಾಗೆಗಳ ಪಾಲಾಗಿಸ ಬಯಸಿದನೆಂಬುದನ್ನೂ ನಾನಾಗಿ ಕೇಳುವ ಧೈರ್ಯವುಂಟಾಗಲಿಲ್ಲ. ಕನಿಕರಿಸಿ ನೀನಾಗಿ ಹೇಳಲಿಲ್ಲ. ಈಸಾನ ಅತುಳ ಸಾಹಸ, ಸಾಮರ್ಥ್ಯ, ವಿವೇಕಯುತ ವೈದ್ಯಚಿಕಿತ್ಸೆಯ ಪರಿಣಾಮವಾಗಿ ನಲವತ್ತು ದಿವಸಗಳು ಕಳೆದು, ನಿನ್ನ ಘಾಯಗಳು ಮಾಗಿ, ಹೊಸ ಚರ್ಮವು ಬೆಳೆದು, ನಿನ್ನ ಸ್ನಾನಾನಂತರ ಹೊಸ ಉಡುಗೆಗಳನ್ನು ತೊಟ್ಟು, ದಿವ್ಯಾಲಂಕಾರ ಶೋಭಿತಳಾಗಿ, ಹಸನ್ಮುಖದಿಂದ, ತಪಸ್ಸಿನಿಂದ ಎಚ್ಚೆತ್ತು ವಿರಾಜಿಸುವ ವಿರಾಗಿಣಿಯಂತೆ, ಲೌಕಿಕ ವ್ಯವಹಾರಗಳಲ್ಲಿ ನೀನು ಆಸಕ್ತಿ ತಾಳತೊಡಗಿದಾಗಲೂ ನಾನು ನಿನ್ನ ವಿಚಾರವನ್ನು ಕೇಳಿದರೆ ನಿನಗೆಲ್ಲಿ ಕ್ರೋಧಕ್ಕೆ ಕಾರಣವಾದೀತೋ, ಅಸಮಾಧಾನಕ್ಕೆ ಎಡೆಯುಂಟಾದೀತೋ ಎಂಬ ಶಂಕೆಯಿಂದ ಕುತೂಹಲವನ್ನು ಅಡಗಿಸಿಟ್ಟೆ ನನ್ನ ಇಂಗಿತವನ್ನು ಅರಿತವಳಂತೆ 'ನನ್ನ ಪ್ರೀತಿಗೆ ಪ್ರತಿಬಂಧಕಗಳು ಬಾರದಿರಬೇಕಾದರೆ, ನಿನ್ನಲ್ಲಿ ನನಗಿರುವ ವಿಶ್ವಾಸ, ಗೌರವ, ಸದಭಿಪ್ರಾಯಗಳಿಗೆ ಭಂಗಬಾರದಿರಬೇಕಾದರೆ, ನನ್ನನ್ನುಕುರಿತು ಯಾವಸಮಾಚಾರಗಳನ್ನೂನೀನು ಯಾರಲ್ಲಿಯೂ ಪ್ರಸ್ತಾಪಿಸಕೂಡದು ; ನನ್ನನ್ನೂ ನನ್ನ ಸ್ಥಿತಿಗತಿಗಳನ್ನು ಕುರಿತು ವಿಚಾರಮಾಡಲು ಕುತೂಹಲಗೊಳ್ಳಕೂಡದು' ಎಂದು ಹೇಳಿದೆ. ತದನಂತರ ನನ್ನ ಹಣವೆಲ್ಲ

ನಿನ್ನ ಸೇವೆಗಾಗಿ ಕರಗಿಹೋಗಿ ಕೈಬರಿದಾಗಿ ಮುಂದೇನು ಮಾಡುವುದೆಂದು ಪರಿತಪಿಸುತ್ತ ನಾನು ತಲೆಯಮೇಲೆ ಕೈಯಿಟ್ಟು ಚಿಂತಾಕ್ರಾಂತನಾಗಿ ಕುಳಿತಾಗ ನನ್ನ ಇಂಗಿತವನ್ನರಿತು, ಚೀಟಿಯನ್ನು ನನ್ನ ಕೈಲಿಟ್ಟು ಸಿದ್ದಿಕ್ ಬಹಾರ ಬಳಿ ಹೋಗಿ ನೂರು ಚೀಲ ಹೊನ್ನನ್ನು ಹೊರಿಸಿ ತರುವಂತೆ ಹೇಳಿದಾಗಲೂ ನೀನಾರು—ನಿನ್ನ ಅಂತಸ್ತು ಅಧಿಕಾರಗಳೇನು ಎಂಬುದನ್ನು ನನಗೆ ಹೇಳದೆ ಹೋದೆ.

ಆ ಬಳಿಕ ನನ್ನ ಬಟ್ಟೆಬರೆ ಮಾಸಿಹೋಗಿದ್ದುದನ್ನು ಕಂಡು ನನ್ನನ್ನು ಎರಡು ಚೀಲ ಹೊನ್ನಿನೊಂದಿಗೆ ಮುಲ್ಲಿಕ್ ಹಸನನ ಬಳಿ ಕಳುಹಿಸಿ ಉತ್ತಮ ಉಡುಪನ್ನು ಕೊಂಡುಕೊಂಡು, ಎರಡು ಅತ್ಯಮೂಲ್ಯ ಆಭರಣಗಳನ್ನೂ ನಿನಗಾಗಿ ತಂದುಕೊಡುವಂತೆ ಹೇಳಿದೆ. ಅಂಗಡಿಯಲ್ಲಿ ಮುಲ್ಲಿಕ್ಕನು ನನಗೆ ಸರಕುಗಳನ್ನು ಮಾರಿದ ಬಳಿಕ ತನ್ನ ಗೃಹದಲ್ಲಿ ಅಂದು ಸಂಜೆಯೇ ಔತಣಕ್ಕೆ ಬಂದು ತನ್ನನ್ನು ಗೌರವಿಸಬೇಕೆಂದು ನನ್ನನ್ನು ಬಹುವಾಗಿ ಬಲಾತ್ಕರಿಸಿದ ನೆಂದೂ, ನಿನ್ನನ್ನು ಏಕಾಂಗಿಯಾಗಿ ಬಿಟ್ಟು ಔತಣಕ್ಕೆ ಹೋಗಲು ನನ್ನ ಮನಸ್ಸೊಪ್ಪದೆಂದೂ ನಾನು ಹಿಂಜರಿದಾಗ ನೀನಾಗಿ ಬಲಾತ್ಕರಿಸಿ, ಸಂಪ್ರ ದಾಯಕ್ಕೆ ವಿರುದ್ಧವಾಗಿ ನಡೆಯಬಾರದೆಂದೂ ಆದರದಿಂದ ಬಂದ ಆಹ್ವಾನ ವನ್ನು ಅಲ್ಲಗಳೆಯಬಾರದೆಂದೂ ಸಮಾಧಾನ ಹೇಳಿ ನನ್ನನ್ನು ಮುಲ್ಲಿಕ್ಕನ ಆದರ ಭರಿತ, ವೈಭವಯುಕ್ತ, ಸತ್ಕಾರ ಸಮಾರಂಭಕ್ಕೆ ಕಳುಹಿಸಿಕೊಟ್ಟೆ. ಆಗಲೇ ಅಪರಿಚಿತನಾದ ಹಾಗೆನ್ನುವುದು ಬೇಡ—ಆಗ ತಾನೇ ಪರಿಚಿತನಾದ ಮುಲ್ಲಿಕ್ಕನ ಸತ್ಕಾರವನ್ನು ಒಪ್ಪಿಕೊಳ್ಳುವಂತೆ ನನ್ನನ್ನು ಅಷ್ಟೊಂದು ಒತ್ತಾಯಪಡಿಸಿದ— ಹಿಡಿವಾದದಿಂದ ಕಳುಹಿಸಿಕೊಟ್ಟು ನಿನಗೂ ಆ ಮುಲ್ಲಿಕ್ಕನಿಗೂ ಎಂತಹ ಸಂಬಂಧವಿರಬಹುದು ? ಇದ್ದರೂ ಅಷ್ಟು ದಿವಸ ಮರಣದಿಂದ ಬಿಡುಗಡೆ ಹೊಂದಿದಮೇಲಾಗಲೀ ರಣಭಾದೆಯ ನಿವಾರಣೆಗೆ ಚಿಕಿತ್ಸೆ ಹೊಂದುತ್ತಿದ್ದ ನಲವತ್ತು ದಿನಗಳ ಆ ದೀರ್ಘಕಾಲದಲ್ಲಿಯಾಗಲಿ, ನಿನ್ನಂತಹ ಅಂತಸ್ತಿನಲ್ಲುಳ್ಳ ಸರ್ವಾಂಗ ಸುಂದರಿ, ರಾಜಕುಮಾರಿಯನ್ನು ಮುಲ್ಲಿಕ್ಕನಾಗಲಿ, ನಿನ್ನ ಮಾತಾ ಪಿತೃಗಳಾಗಲಿ, ಬಂಧುಪರಿವಾರವರ್ಗದವರಾಗಲಿ, ನಗರದ ಪ್ರಮುಖರಾಗಲಿ ಯಾರೊಬ್ಬರೂ ಬಂದು ನೋಡದ—ನೋಡಬಯಸದ—ನೋಡದಂತೆ ನೀನು

ಹೂಡಿದ ವ್ಯವಸ್ಥೆಯ—ಅಥವಾ, ನಿನ್ನ ಹಸ್ತಾಕ್ಷರವನ್ನೂ ಮುದ್ರಿಕೆಯನ್ನೂ ಕಂಡು ಮರುಮಾತಾಡದೆ ನೂರು ಚೀಲ ಹೊನ್ನಿನ ಮೊಹರನ್ನು ನೂರು ಗುಲಾಮರ ತಲೆಯಮೇಲೆ ತಕ್ಷಣವೇ ಹೊರಿಸಿ ಕಳುಹಿಸಿದ—ನಿನ್ನ ನಿರ್ವಿವಾದ ಅಧಿಕಾರ ವ್ಯಾಪ್ತಿಗೆ ಒಳಪಟ್ಟ ಸಿದ್ದಿಕ್ ಬಹಾದ್ದರನಾದರೂ ನಿನ್ನನು ಬಂದು ನೋಡದ ಕಾರಣವೇನು ?

"ಮಲ್ಲಿಕ್ಕನ ಗೃಹದಲ್ಲಿ ನಾನೆಣಿಸಿದಂತೆ ಒಂದೇ ದಿನಕ್ಕೆ ಔತಣ ಸತ್ಕಾರಗಳು ಮುಗಿಯದೆ, ಎಡಬಿಡದೆ ಮೂರು ದಿವಸಗಳಕಾಲ ನಡೆದ ಸತ್ಕಾರ ಸಮಾರಂಭಗಳಲ್ಲಿ ಲೋಲುಪ್ತನಾಗಿ ಹೋಗಿ, ಮಲ್ಲಿಕ್ಕನಿಂದ ಬಲಾತ್ಕಾರವಾಗಿಯೂ ಬಿಡಿಸಿಕೊಂಡು ಬರಲು ನಿಶ್ಶಕ್ತನಾಗಿ—ಅವನ ಆದರಾತಿಶಯದಿಂದ ಬಂಧಿತನಾಗಿ ಹೋದ ನಾನು—ನಾಲ್ಕನೆಯ ದಿವಸ ಪರಮಕಷ್ಟದಿಂದ ಮನೆಸೇರಿ, ನಿನ್ನನ್ನು ಏಕಾಂಗಿಯಾಗಿ ಅಷ್ಟುದಿವಸ ಬಿಟ್ಟುಹೋಗಿದ್ದಕ್ಕಾಗಿ ನಿನ್ನ ಕ್ಷಮೆಯನ್ನು ಬೇಡಿದೆ. ಆಗ ಮಲ್ಲಿಕ್ಕನೊಡನೆ ನಾನು ನಿಂತುದು ಸಂಪ್ರದಾಯಬದ್ಧವಾದುದೆಂದೂ, ನ್ಯಾಯಸಮ್ಮತವಾದುದೆಂದೂ, ಅದರಿಂದ ನಿನಗಾವ ಅಪರಾಧವನ್ನು ನಾನು ಮಾಡಿದಂತೆ ಆಗಲಿಲ್ಲವೆಂದೂ, ನಾನು ಅದಕ್ಕಾಗಿ ನಿನ್ನಲ್ಲಿ ಕ್ಷಮೆ ಬೇಡಬೇಕಾದ ಆವಶ್ಯಕತೆಯೇ ಇರಲಿಲ್ಲವೆಂದೂ ನೀನು ಹೇಳಿ ನನ್ನನ್ನು ಸಮಾಧಾನಗೊಳಿಸಿದ್ದು ಮಾತ್ರವಲ್ಲದೆ ಇಷ್ಟು ದಿವ್ಯವಾಗಿ, ಪ್ರೇಮಪುರಸ್ಸರವಾಗಿ ಶ್ರದ್ಧಾಶಕ್ತಿಗಳಿಂದ ಸತ್ಕಾರವನ್ನೆಸಗಿ ಸಂತಸಗೊಳಿಸಿ ನನ್ನ ನಿರಂತರ ಸ್ನೇಹಕ್ಕೆ-ಪರಮ ಪ್ರೀತಿಗೆ ಪಾತ್ರನಾದ ಮಲ್ಲಿಕ್ ಹಸನನನ್ನು ನಾನು ಅಂದೇ ಮರು ಔತಣಕ್ಕೆ ನನ್ನ ಮನೆಗೆ ಬರಮಾಡಿಕೊಳ್ಳಬೇಕೆಂದು ನೀನಾಗಿ ಸಲಹೆ ನೀಡಿದೆ. ನಿನ್ನ ಸಲಹೆಯು ಸಹಜವೂ ಸಮಂಜಸವೂ ಆದುದೆಂದು ಗ್ರಹಿಸಿದರೂ, ನಾನು ಈ ನಗರವನ್ನು ಪ್ರವೇಶಿಸಿದನಂತರ ನಿನ್ನನ್ನು ಬಿಟ್ಟು ಅತ್ತಿತ್ತ ಅರಕ್ಷಣವೂ ಅಡ್ಡಾಡಲು ಅಡಚಣೆಯುಂಟಾದುದರ ಪರಿಣಾಮವಾಗಿ ನಗರದ ನಾನಾಭಾಗಗಳನ್ನೂ, ನಾನಾ ವ್ಯಕ್ತಿಗಳನ್ನೂ, ನಾನಾ ವೃತ್ತಿಯವರನ್ನೂ ಅರಿಯದ ನಾನು ಸತ್ಕಾರ ಸಮಾರಂಭವನ್ನು ಏರ್ಪಡಿಸಲು ಸಾಕಷ್ಟು ಸಾಮರ್ಥ್ಯಪಡೆದಿಲ್ಲವೆಂದೂ ಆ ವಿಚಾರದಲ್ಲಿ ನನ್ನ ನಿರ್ವಹಣಶಕ್ತಿಯು ಅನಂತ ಲೋಪ ದೋಷಗಳಿಂದ ಕೂಡಿದ್ದೆಂದೂ ನಾನು ನಿನ್ನಲ್ಲಿ ಅಂಗಲಾಚಿ ಬೇಡಿಕೊಂಡೆ. ಆದರೂ ನಿನ್ನ

ಮಾತಿಗೆ ಪ್ರತಿಯಾಡಿದರೆ, ನಿನ್ನ ಇಚ್ಛೆಯನ್ನು ತರ್ಕಮಾಡಿದರೆ, ನನ್ನಲ್ಲಿ ನಿನಗೆ ಇರುವ ಉಪಕಾರ ಸ್ಮರಣೆಯಿಂದ ಪ್ರೇರಿತವಾದ ಪ್ರಸನ್ನತೆಗೆ ಭಂಗಬರುವುದು ದಿಟವೆಂದು ನೀನು ಮೊದಲೇ ಎಚ್ಚರಿಸಿದ್ದ ನಿನ್ನ ಮಾತುಗಳು ನನ್ನ ನೆನಪಿಗೆ ಬಂದು ನಿನ್ನ ಪ್ರೀತಿ ವಿಶ್ವಾಸಗಳನ್ನು ಕಳೆದುಕೊಳ್ಳ ಬಯಸದ ನಾನು—ಬಾಯಿ ಬಿಗಿದು, ಏನೊಂದು ಪ್ರತಿಮಾತನ್ನೂ ಆಡಲಾರದ ಮುಗ್ಧನಾದೆ. ಆಗ ನೀನಾಗಿ ಔತಣದ ಸಮಾರಂಭ ಪ್ರಸ್ತಾಪವನ್ನು ಮತ್ತೆ ಪ್ರಾರಂಭಿಸಿ 'ಹೋಗು, ಇದೀಗಲೇ ಹೋಗು; ಅವರಲ್ಲಿ ಹೇಳಿ ಹೇಗಾದರೂ ಒಡಂಬಡಿಸು; ಅವನೊಡನೆಯೇ ನಿಂತು ಸಂಜೆ, ಔತಣಕ್ಕೆ ಮಲ್ಲಿಕ್ಕನನ್ನು ಬಿಡದೆ ಕರೆದುಕೊಂಡು ಬಾ' ಎಂದು ನೀನು ಆಣತಿಯನ್ನು ಹೊರಡಿಸಿದಾಗ ವಿಧಿಯಿಲ್ಲದೆ ನಾನು ಮಲ್ಲಿಕ್ಕನನ್ನು ಕಾಣಲು ಹೊರಟೆ. ದಾರಿಯುದ್ದಕ್ಕೂ ನನ್ನ ಮನಸ್ಸಿನಲ್ಲಿ ಒಂದೇ ತೆರನಾದ ವಿಚಾರತರಂಗ—ವಾಗ್ಯುದ್ಧ, ನಿನ್ನ ಆಸಕ್ತಿಯಿರುವುದು ಮಲ್ಲಿಕ್ಕನಲ್ಲಿಯೇ? ಅಥವಾ, ನನ್ನಲ್ಲೇ? ನನಗಾಗಿ ಮಲ್ಲಿಕ್ಕನಲ್ಲೇ? ಅಥವಾ, ಮಲ್ಲಿಕ್ಕನಿಗಾಗಿ ನನ್ನಲ್ಲೇ? ಸಮಾರಂಭದ ಸಂತರ್ಪಣೆಯ ವೈಭವವು ಮಲ್ಲಿಕ್ಕನ ಗೃಹದಲ್ಲಿ ನಾ ಕಂಡ ವೈಭವಕ್ಕೆ ಒಂದಕ್ಕೆ ನಾಲ್ಕರಷ್ಟು ಇರಬೇಕು ಎಂದು ನೀನು ಸೂಚಿಸಿದೆ. ಈ ಪೊಯ್ಪೋಟಿ, ನನಗರ್ಥವಾಗಲಿಲ್ಲ. ವೈಭವ ಪ್ರಮಾಣದಲ್ಲಿ ನೀನು ತೋರಿದ, ಈ ಹೋರಾಟ ಮಲ್ಲಿಕ್ಕನ ಮೇಲಣ ಪ್ರೀತಿಯಿಂದಲೋ—ಅಥವಾ ಅಸೂಯೆಯಿಂದಲೋ? ಅಥವಾ, ನಿನ್ನ ಅತುಳ ಸಂಪತ್ಸೌಭಾಗ್ಯಗಳನ್ನು ನನಗೆ ತೋರಿಸಿಕೊಡುವುದಕ್ಕಾಗಿಯೋ? ಅಷ್ಟು ಶೀಘ್ರವಾಗಿ, ಅಷ್ಟೊಂದು ವಿಜೃಂಭಣೆಗೆ ಅಣಿಮಾಡಲು ಸಾಧ್ಯವಾದೀತೇ? ಎಂದು ನಾನು ಕೇಳಿದಾಗಲೂ "ಆ ಕಾರ್ಯ ನಿರ್ವಹಣೆ ನನಗಿರಲಿ, ಅದರ ವಿಚಾರ ನಿನಗೆ ಶಂಕೆ ಬೇಡ" ಎಂದೆ. ನಿನ್ನ ಶ್ರದ್ಧೆ ಯಾವುದರ ಮೇಲೆ? ಯಾರಮೇಲೆ? ಏತಕ್ಕಾಗಿ? ನಿನ್ನ ಒಂದೊಂದು ಮಾತಿನಲ್ಲೂ, ಒಂದೊಂದು ಕೃತ್ಯದಲ್ಲೂ ಮರ್ಮವೇ ನಿನಗೆ ಸ್ಪಷ್ಟವಾಗಿ ಗೋಚರಿಸತೊಡಗಿತು. ಈ ಮರ್ಮವೇತಕ್ಕೆ? ತರ್ಕಿ ತರ್ಕಿಸಿ ನಾನು ಕಂಗೆಟ್ಟು ಹೋದೆ.

ಪಡಲಾರದ ಪಾಡುಪಟ್ಟು ಮಲ್ಲಿಕ್ಕನನ್ನು ಒಡಂಬಡಿಸಿ ನನ್ನೊಡನೆ ಕರೆತಂದೆ. ಮನೆಗೆ ಎಷ್ಟೋ ದೂರದಿಂದ ರಸ್ತೆಯೆಲ್ಲ ಚೊಕ್ಕಟವಾಗಿ ಗುಡಿಸ

ಲ್ಪಟ್ಟಿತ್ತು. ನೀರು ಚೆಲ್ಲತ್ತು, ಎಲ್ಲೆಲ್ಲೂ ತಳಿರುತೋರಣಗಳು, ಬಣ್ಣ ಬಣ್ಣದ ಬಾವುಟಗಳು, ರಸ್ತೆಯ ಇಕ್ಕಡೆಗಳಲ್ಲಿಯೂ ಬೆಳ್ಳಿಯ ದಂಡವನ್ನು ಎತ್ತಿಹಿಡಿದ ನೂತನ ವಸ್ತ್ರಧಾರಿಗಳಾದ ನೂರಾರು ಕಾಲಾಳುಗಳು! ಮನೆಯುವರೆಗೂ ಸ್ವಾಗತ ರಾಜ ಮರ್ಯಾದೆ ? ಮನೆಯೊಳಗೂ ಅಷ್ಟೇ. ವಾದ್ಯವೇನು ? ಗೀತೆಯೇನು? ನೃತ್ಯವೇನು ? ವೇಶ್ಯೆಯರೇನು ? ವಿನೋದಗಾರರೇನು ? ಫಲಪುಷ್ಪತಾಂಬೂಲ ಗಳೇನು ? ಮದ್ಯಪಾನೀಯಗಳೇನು ? ಅತ್ತರು ಪನ್ನೀರುಗಳೇನು ? ಭಕ್ಷ್ಯ ಭೋಜನ ಮಾಂಸಾದಿಗಳೇನು ? ಊಳಿಗದವರೇನು ? ರತ್ನಕಂಬಳಿಗಳೇನು ? ದೀಪಾಲಂಕಾರಗಳೇನು ? ಪಟ್ಟೆ-ಪೀತಾಂಬರ ಕಲಾಬತ್ತು ವಸ್ತ್ರಗಳ ಹೊದಿಕೆ ಹಾಸುಗಳೇನು ? ಯಾವುದನ್ನು ನೋಡಲಿ, ಎಲ್ಲೆಲ್ಲಿ ನೋಡಲಿ—ಅಲಂಕಾರ, ವೈಭವ, ಅತಿಕ ವಿಜೃಂಭಣೆ ! ವಿತರಣೆ! ದಕ್ಷತೆ! ಏಕರಣೆ ! ಊಳಿಗದವರ ಅಸಮ ಸಿಸ್ತು, ಮರ್ಯಾದೆ, ಗಾಂಭೀರ್ಯ! ಇಷ್ಟು ಅಪಾರವಾದ ಏರ್ಪಾ ಡುಗಳನ್ನು ಅತ್ಯಲ್ಪಕಾಲದಲ್ಲಿ ಮಾಡಬಲ್ಲ ಪ್ರಬಲ ಶಕ್ತಿಯುಳ್ಳ ನೀನು ನನ್ನಲ್ಲೂ ನಗರ ನಿವಾಸಿಗಳಲ್ಲೂ, ನಗರನಾಯಕರಲ್ಲೂ, ಅಜ್ಞಾತಳಾಗಿ ಉಳಿಯಬೇಕಾದ ಪ್ರಬಲಕಾರಣವೇನು? ಯಾರಮುಖವನ್ನು ನೋಡದೆ, ಸಾಧಾರಣ ಉಡುಗೆ ತೊಡಿಗೆಗಳನ್ನು ಮಾತ್ರ ಧರಿಸಿ, ಆಭರಣಾಲಂಕಾರ ವಿವರ್ಜಿತಳಾಗಿ, ಸತ್ಕಾರ ಸಮಾರಂಭ ಸಂಭ್ರಮಗಳಲ್ಲಿ ಕಲೆತುಕೊಳ್ಳಲು ಬಯಸದೆ, ಅಡುಗೆಯ ಮನೆ ಯನ್ನು ಹೊಕ್ಕು, ಅಲ್ಲಿಂದ ಅಡ್ಡಾಡದಿರಲು ಕಾರಣವೇನು ? ಇವೆಲ್ಲವನ್ನೂ ನೋಡಿ ನನಗೆ ಒಂದೆಡೆ ಆನಂದ, ಆಶ್ಚರ್ಯ: ಮತ್ತೊಂದೆಡೆ ಕುತೂಹಲ, ವ್ಯಾಕುಲ, ಕೇಳದೆ, ಹೇಳಿದರೆ ಹುಚ್ಚನಾಗುತ್ತೇನೆ: ಕೇಳಿದರೆ ಭ್ರಷ್ಟನಾಗುತ್ತೇನೆ ಸುಮ್ಮನಿರಲಂತೂ ಸಾಧ್ಯವೇ ಇಲ್ಲ. ಮರ್ಮವೋ ಮರ್ಮ! ಈ ಮರ್ಮಕ್ಕೆ ಕಾರಣವೇನು ?

ಸತ್ಕಾರವು ಮುಂದುವರಿಯುತ್ತಿದ್ದಾಗ ಮಲ್ಲಿಕ್ಕನ ಪತ್ನಿ— ಕಪ್ಪನೆಯ ಕುಬ್ಜೆಯನ್ನು ಕರೆಸಬೇಕಾದ ಪ್ರಸಂಗಬಂದಾಗ ನೀನು ಎಳ್ಳಷ್ಟೂ ಪ್ರತಿಬಂಧಿಸಿದೆ "ಆಗಲಿ ಕರೆಸು ? ಎಂದು ಉತ್ಸಾಹ ಪೂರಿತವಾಗಿ ಹೇಳಿದಾಗಲಂತೂ, ನನ್ನ ಕೌತುಕವು ಇದ್ದದ್ದೂ ಪ್ರಬಲವಾಯಿತು, ಮೇಲಿಂದ ಮೇಲೆ ಮರ್ಮ! ಹರಿಸಲಾರದ ಮರ್ಮ! ಮೂರು ರಾತ್ರಿಗಳೂ ಕಳೆದು ನಾಲ್ಕನೆಯ ದಿನ

ಪ್ರಾತಃಕಾಲ ಅಮಲು ತಿಳಿದೆದ್ದು ಸುತ್ತನೋಡಿದರೆ ಎಲ್ಲವೂ ಮಾಯ! ನಿನ್ನ ಸುಳಿವೇ ಇಲ್ಲ. ಬದಲಾಗಿ ಕಂಬಳಿಯ ಸುರುಳಿನಲ್ಲಿ ಮಲ್ಲಿಕ್ಕನ ಮತ್ತು ಅವನ ಪ್ರೇಯಸಿಯ ರುಂಡಗಳು ಮುಂಡಗಳಿಂದ ತುಂಡರಿಸಲ್ಪಟ್ಟ ಶವಗಳು! ಅದಕ್ಕೆ ನಾನು ಸಾಕ್ಷಿ!

ನಿಜವಾಗಿಯೂ ನನಗುಂಟಾದ ಖೇದಕ್ಕೂ, ಕ್ರೋಧಕ್ಕೂ ಮಿತಿಮೇರೆ ಗಳಿರಲಿಲ್ಲ. ಪ್ರಪಂಚದಲ್ಲಿ ಇಷ್ಟೊಂದು ಕೃತಘ್ನತೆಯು ನೆಲೆಸಿದ್ದೀತೇ ಎಂದು ನಾನು ಆಶ್ಚರ್ಯಗೊಂಡೆ. ನನ್ನನ್ನು ಪ್ರಾಣಾಪತ್ತಿನಿಂದ ಸಂರಕ್ಷಿಸಿದ ನಿಸ್ಪೃಹ ಸೇವಕನಿಗೆ ತನು ಮನ ಧನಗಳನ್ನು ಅರ್ಪಿಸಿ ಕೃತಜ್ಞತಾಭರಿತ ಪ್ರಣಯ ಭಿಕ್ಷೆ ಯನ್ನು ಬಯಸಿ ಅಂತರಂಗದಲ್ಲೆ ಭಗವಂತನಲ್ಲಿ ಅನಂತ ಬೇಡಿಕೆಗಳನ್ನು ಸಲ್ಲಿಸು ತ್ತಿದ್ದ ನನಗೆ—ಅಪರಿಚಿತಳಾದ ನಿನ್ನನ್ನು ಯಾರು, ಏನು ಎಂದು ವಿಚಾರಿಸದೆ ಉದ್ಧರಿಸಿ ಮರಣ ಶಯ್ಯೆಯಿಂದ ಮಾನವ ಕೂಟದಲ್ಲಿ ಕೂಡಿಸಿದ ನನಗೆ—ಆರು ತಿಂಗಳ ಅವಿಶ್ರಾಂತ ಸೇವೆಯನ್ನು ಅಹರ್ನಿಶಿ ಪಡೆದ ನೀನು—ಮಲ್ಲಿಕ್ಕನನ್ನು ಔತಣಕ್ಕೆ ಕರೆತರಬೇಕೆಂದು ಒತ್ತಾಯಪಡಿಸಿ, ಮೂರುದಿವಸಗಳ ಪರ್ಯಂತ ಅವನನ್ನೂ ಅವನ ಪ್ರೇಯಸಿಯನ್ನೂ ಉಣಿಸಿ, ತಣಿಸಿ, ಸಂಭ್ರಮದ ಮುಕ್ತಾಯ ದಲ್ಲಿ ಅವನ ಮತ್ತು ಅವನ ಪ್ರೇಯಸಿಯ ರುಂಡಗಳನ್ನು ತುಂಡರಿಸಿ, ಮೂಲೆ ಗೊತ್ತಿ—ಹೇಳದೆ ಕೇಳದೆ, ಬಿಡಿಘೊನ್ನು ಬಿಡದೆ, ಇದ್ದುಬದ್ದುದನ್ನು ಬಳಿದು ಬಾಚಿ ಹೊರಿಸಿಕೊಂಡು, ಇರುವ ಸ್ಥಳದ ಸುದ್ದಿಯನ್ನೂ ಕೊಡದೆ ಓಡಿಹೋದ ನೀನು—ಅನಿರೀಕ್ಷಿತವಾಗಿ ನನ್ನ ಕಣ್ಣಿಗೆ ಬಿದ್ದ ನೀನು, ಅನಿರೀಕ್ಷಿತವಾಗಿ ನನ್ನ ಕಣ್ಣಿಂದ ಮರೆಯಾದ ನೀನು....ನಿನ್ನನ್ನಾವರಿಸಿದ ಮರ್ಮ, ಹಾಯ್! ಹಾಯ್! ಹೇಳಲೇನಿದೆ? ಹುಚ್ಚು ಹಿಡಿಸುವುದರಲ್ಲಿ ನಿನ್ನಂತಹ ಸಮರ್ಥೆಯನ್ನು ಮೀರಿಸಬಲ್ಲ ಮೋಹಿನಿಯು ಪೃಥ್ವಿಯಲ್ಲೆಲ್ಲೂ ಇರಲಾರಳೆಂದು ನಾನಂದು ಕೊಂಡೆ.

ಇರಲಿ, ಮಲ್ಲಿಕ್ಕನಲ್ಲಿ ನಿನಗಿದ್ದ ಸೇಡಿಗೆ ಕಾರಣವೇನು? ಹಾಗೂ ಅವನು ನಿನಗೆ ದ್ರೋಹ ಮಾಡಿದ್ದರೆ ಈ ರೀತಿ ಸಂತರ್ಪಣೆಗೆಂದು ಕರೆಸಿ ಅತಿಥಿ ಯನ್ನು ಮದ್ಯಪಾನದಿಂದ ಉನ್ಮತ್ತನನ್ನಾಗಿಸಿ ಕೊಲೆಮಾಡುವುದು ಖುರಾನಿಗೆ

ಒಪ್ಪಿತವೇ ? ಹೆಂಗಸಿನ ಕೊಲೆಮಾಡಿದುದು ಹೇಡಿತನವಲ್ಲವೇ ? ಕೊಲೆ ಮಾಡಿಯೂ ಏನೂ ಅರಿಯದಂತೆ ಇದ್ದುಬಿಡುವುದೂ ಇನ್ನೂ ಹೆಚ್ಚಿನ ಅಪರಾಧ ವಲ್ಲವೇ ?

ನನ್ನ ಮಾತೇ ತೆಗೆದುಕೊಳ್ಳೋಣ. ನೀನಾಗಿ ನನಗೆ ಹೇಳಿ ಹೋಗ ದಿದ್ದುದನ್ನ ನಾನು ಮರೆತುಬಿಡುತ್ತೇನೆ. ನಾನಾಗಿ ಹುಡುಕಿ ಬಂದಾಗಲೂ ನನ್ನನ್ನು ಅಸಡ್ಡೆಯಿಂದ ಕಂಡು, ನಾನು ನನ್ನ ದೇಶದಿಂದ ತಂದ ನೂರು ಚೀಲದ ಹೊನ್ನನ್ನು ನಿನ್ನ ಸೇವೆಗಾಗಿ ವ್ಯಯಮಾಡಿದುದನ್ನು ಕಂಡು, ನನ್ನ ಪ್ರೇಮ ಭಿಕ್ಷೆಯು ಅಪವಿತ್ರವಾದುದೆಂದೂ, ಅಸಮಂಜಸವೆಂದೂ, ನಿನ್ನ ಅಂತಸ್ತಿಗೆ ಚ್ಯುತಿ ತರತಕ್ಕುದೆಂದೂ ತಿಳಿದು—ನೂರು ಚೀಲ ಹೊನ್ನನ್ನು ಕೊಟ್ಟು ಹೊರ ಗಟ್ಟಲು ಪ್ರಯತ್ನಿಸಿ—ಮಹಾದಾನಿಯೆಂದು ನೀನು! ಹೆಮ್ಮೆಗೊಂಡ ಆ ವಿಲಾಸ! 'ನಿನ್ನ ಹೊನ್ನನ್ನು ನಾನು ಒಲ್ಲೆ. ನನ್ನ ಹೊನ್ನೆಲ್ಲವನ್ನೂ ನಿನಗಾಗಿ ವ್ಯಯ ಮಾಡಿದೆ ; ನನ್ನ ನಿಷ್ಕಲ್ಮಷ ಸೇವೆಯನ್ನು ಸಲ್ಲಿಸಿದೆ ; ನನ್ನನ್ನು ಅಂಗೀಕರಿಸಿ ಕಾಪಾಡು' ಎಂದು ಅರ್ತನಾಗಿ ಬೇಡಿದ ನನ್ನನ್ನು—ದುರಹಂಕಾರಿಯೆಂದೂ, ಮಟ್ಟ ಅರಿತುಕೊಳ್ಳದ ಅಲ್ಪನೆಂದೂ ನಿಂದಿಸಿ—ನನ್ನನ್ನು ಗುಡ್ಡಕಾಡುಗಳಿಗೆ ಅಟ್ಟಿದೆ. ನಲವತ್ತು ದಿವಸ ಮಹತ್ತರ ಯಾತನೆಗಳಿಗೆ ಗುರಿಯಾದ ನಾನು ಮತ್ತೆ ತೆವಳಿಕೊಂಡು ನಿನ್ನ ಭವನದ ಮುಂದಿರುವ ಮರದಡಿಯಲ್ಲಿ ಸಾಯುತ್ತಾ ಬಿದ್ದಿದಾಗ 'ನಿನ್ನನ್ನು ಗುರುತಿಸಲಾರೆ' ಎಂದಿತು ನಿನ್ನ ನಾಲಿಗೆ. ನೀನು ಮರಣ ಶಯ್ಯೆಯಲ್ಲಿದ್ದಾಗ—ಬಾಯೊಣಗಿ ನಾಲಿಗೆಯು ಬಿಗಿದು ಹೋದಾಗ, ಎಲ್ಲಿಂದ ಲೋ ಆ ನಿಮಿಷದಲ್ಲಿ, ಮರಣ ಮುಹೂರ್ತವು ಅಡರಿಸಿದ ಅದೇ ಮುಹೂರ್ತ ದಲ್ಲಿ, ನಿನ್ನ ಸೇವೆ ಉದ್ಧಾರಗಳಿಗೆ ಭಗವಂತನು ನನ್ನನ್ನು ಕರೆತಂದು ನಿನ್ನ ಸಮ್ಮುಖದಲ್ಲಿ ಬಿಟ್ಟಾಗ, ನಿನ್ನ ಗುರುತು ಪರಿಚಯಗಳು ನನಗಿದ್ದವೇನು ? ಮಾನವರಿಗೆ ಮಾನವರು ಮಾಡಬೇಕಾದ ಆದ್ಯ ಕರ್ತವ್ಯವಲ್ಲವೇ ಅದು ? ನಿನ್ನ ಸೇವೆಗಾಗಿ ಎಲ್ಲಿಂದಲೋ ಸಕಾಲದಲ್ಲಿ ಬಂದು ಸೇರಿ—ನಿನ್ನ ಆಪತ್ತಿನಲ್ಲಿ ನೆರವಾದ ನನ್ನನ್ನು ನೀನು ನೆನೆಯದಿದ್ದರೂ ಬೇಡ ; ನನ್ನನ್ನು ನಿನ್ನಬಳಿ ಕರೆ ತಂದ ದೇವೇಶನನ್ನು ನೀನು ಮರೆತುದರ ಮರ್ಮವಾದರೂ ಏನು ? ಹೆಚ್ಚು ಮಾತಾಡಿ ಕಳೆದುಹೋದ ಸಂಕಟಕರ ಸನ್ನಿವೇಶಗಳನ್ನು ಜ್ಞಾಪಿಸಿ ನಿನ್ನ ಮನ

ಸ್ಸನ್ನು ಹುಣ್ಣುಮಾಡುವುದು ಬೇಡ. ನಿನ್ನ ಸೇಡು ತೀರಿತು. ನೀನು ಸಂಕಟದಿಂದ ಉದ್ಧಾರವಾದೆ. ನಿನ್ನದು ಒಂದು ಬಗೆಯ ಸಂಕಟವಾಗಿತ್ತು. ನನ್ನದು ನಾನಾ ಬಗೆಯವು. ನಿನಗಾದರೂ ಶಕ್ತಿ, ಯುಕ್ತಿ, ಸಾಮರ್ಥ್ಯ, ಅಧಿಕಾರ, ಅಂತಸ್ತು, ಪದವಿ, ಪರಿವಾರ ಎಲ್ಲದರ ಬೆಂಬಲ ಮೇಲಾಗಿ ನೀನಿರುವುದು ನಿನ್ನ ಹುಟ್ಟೂರು ಈ ರಾಜ್ಯದ ಅರಸುಕುಮಾರಿ. ನಾನು ಹೊರ ಊರಿನವ; ನಿನ್ನೊಳಿಗದಲ್ಲಿ ತನುಮನಧನಗಳನ್ನು ನೀರಿನಂತೆ ವ್ಯಯಮಾಡಿ ಬರಿಗೈಯಲ್ಲಿ ಬಳಲಿದಾಗ 'ಅಯ್ಯೋ!' ಎನ್ನುವರಿಲ್ಲದಂತಾಯಿತು. ಇದರ ಮರ್ಮ! ಇರಲಿ; ನಾವೀಗ ಸತಿಪತಿಯರು. ದೇವಸಾಕ್ಷಿಯಾಗಿ ನೀನು ನನ್ನ ಕೈಹಿಡಿದವಳು. ನಿನ್ನನ್ನು ಕೇಳುವ ಅಧಿಕಾರವು ನನಗೀಗ ಉಂಟು. ಈ ಮರ್ಮವನ್ನು ಬಿಡಿಸಿ ಹೇಳಬೇಕಾದುದು ನಿನ್ನ ಧರ್ಮ. ಒಲ್ಲೆ ಎಂದರೆ ದ್ರೋಹಮಾಡಿದಂತಾಗುತ್ತದೆ. ಹೇಳು, ನನ್ನ ತವಕವು ನೀಗಲಿ."

"ಆಗಲಿ" ಎಂದಳು ನನ್ನರಸಿ. ತನ್ನ ಕಥೆಯನ್ನು ಹೇಳತೊಡಗಿದಳು.

## ೨೨

ನನ್ನ ವಾದ ಸರಣಿಯನ್ನು ಕೇಳಿ ಮೋಹನಾಂಗಿಯು ತಲೆದೂಗಿದಳು. "ಹೃದಯೇಶ್ವರ! ನೀನು ಪರೋಪಕಾರಿ, ನಿಸ್ಪೃಹಸೇವಕ, ಅತುಳ ಸಹನಾ ಶೀಲ, ಎಂದು ಮಾತ್ರ ನನಗೆ ಈವರೆಗೆ ಮನವರಿಕೆಯಾಗಿದ್ದಿತು. ನಿನಗಿಷ್ಟು ಲೋಕಾನುಭವ, ವಿಚಾರಶಕ್ತಿ, ಇಂಗಿತ ಜ್ಞಾನವು ಇದ್ದೀತೆಂದು ನಾನು ಊಹಿಸಿರಲಿಲ್ಲ. ಬಹಳ ಸಂತೋಷವಾಯಿತು. ನೀನು ನನ್ನ ಪ್ರಾಣವನ್ನು ಕಾಪಾಡಿದವನಾದುದರಿಂದ ನನ್ನ ಪ್ರಾಣೇಶ್ವರನೇ ಆದೆ. ಮೇಲಾಗಿ ನೀನು ಪ್ರಣಯ ತೋರಿ, ಪಾಣಿಗ್ರಹಣಮಾಡಿ ನನ್ನ ಪತಿಯಾದೆ. ಎಲ್ಲ ಬಗೆ ಯಲ್ಲಿಯೂ ನಿನಗೆ ನನ್ನಮೇಲೆ ಅಧಿಕಾರವಿರುವುದು ನಿಜ. ನೀನಾಡಿದ ಮಾತುಗಳು ಸತ್ಯವಾದುವು. ಎಷ್ಟೇ ಅರಿತವಳೆಂದು ನನ್ನನ್ನು ಕುರಿತು ನಾನೇ ಅರಿತುಕೊಂಡಿದ್ದರೂ, ನಿನ್ನ ಅರಿವು ನನಗಿಲ್ಲವೆಂದು ನಾನು ಒಪ್ಪಿಕೊಳ್ಳು ತ್ತೇನೆ. ನಿನ್ನ ಹೃದಯವು ಉಪಕಾರ ಪ್ರೇರಿತವಾದುದು; ನನ್ನದು ಇದು ವರೆಗೂ ಎಂದು ಹೇಳಲೇ?— ಅಧಿಕಾರ ಪ್ರೇರಿತವಾದುದು. ನಾನಾಳುತ್ತ ಬಂದುದು ಅಪಾರ ಧನದಿಂದ; ನೀನಾಳುತ್ತ ಬಂದುದು ನಿರ್ಮಲ ಮನಸ್ಸಿಂದ. ನೀನೆನ್ನ ಹೃದಯದ ಅರಸ! ನನ್ನ ವೃತ್ತಾಂತವೇನು? ಅದನ್ನು ಕೇಳುವುದಕ್ಕೆ ನಿನಗಿಂತಲೂ ಮತ್ತಾರಿಗೆ ಅಧಿಕಾರವುಂಟು? ಇದುವರೆಗೆ ನಾನಾಚರಿಸಿದ ರೀತಿನೀತಿಗಳ ಮರ್ಮವನ್ನು ನನ್ನ ಕಥೆಯೇ ಭೇದಿಸಬಲ್ಲುದು. ಅದನ್ನು ಕೇಳಿದ ಬಳಿಕ ನನ್ನಲ್ಲಿ ಮರುಕಗೊಳ್ಳದಿರೆ. ನನ್ನಲ್ಲಿ ನಿನ್ನ ಮಮತೆಯು ಮತ್ತಷ್ಟು ಹೆಚ್ಚದಿರದು. ನನ್ನಅಪರಾಧವೇನಿದ್ದರೂ ಮನ್ನಿಸಿ ಕಥೆಯನ್ನುಕೇಳಿ."

ಒಡನಾಡಿ ಫಕೀರರೇ! ನನ್ನ ಪತ್ನಿಯು ಈ ರೀತಿ ಆಡಿದ ಮಾತುಗಳ ನನಗೆ ಕರ್ಣಾನಂದಕರವಾದುವು. ನನ್ನ ಸಂತಾಪವೆಲ್ಲ ಅಳಿದು ಸಂತಸ ಸ್ವರೂಪವನ್ನು ತಾಳಿತು. ಮೋಹನಾಂಗಿಯು ಹೇಳಿದ ಆತ್ಮ ಕಥೆಯನ್ನು ನನಗೆ ನೆನಪಾದಷ್ಟು ಅವಳ ಮಾತಿನಲ್ಲೇ ಹೇಳುತ್ತೇನೆ; ಕೇಳಿ.

ನನ್ನ ಪತ್ನಿಯು ಹೇಳಿದ ಆತ್ಮ ಕಥೆ:—"ದುರದೃಷ್ಟೆಯಾದ ನಾನು ಡಮಾಸ್ಕಸ್ಸ್ ಸುಲ್ತಾನನ ಏಕಮಾತ್ರ ಕುವರಿ. ನಾನು ಹುಟ್ಟಿದಂದಿನಿಂದ ನನ್ನ ತಾಯ್ತಂದೆಯರು ನನ್ನನ್ನು ಅತ್ಯಂತ ಮುದ್ದಾಗಿ ಸಾಕಿಸಲಹಿದರು. ನಾನು ಏಳೆಂಟು ವರ್ಷದ ಹುಡುಗಿಯಾಗಿದ್ದಾಗ ನನ್ನಷ್ಟೇ ವಯಸ್ಸಾದ—ಡಮಾಸ್ಕಸ್ ನಗರದ ಪ್ರಮುಖ ಅಧಿಕಾರಿಗಳ ಮಕ್ಕಳಾದ ಅನೇಕ ಹುಡುಗಿಯರು ನನ್ನ ಸಂಗಾತಿಗಳಾಗಿರುವಂತೆ ನನ್ನ ತಂದೆಯು ಏರ್ಪಡಿಸಿದನು, ಅಂತೆಯೇ ನನ್ನ ಶುಶ್ರೂಷೆಗಾಗಿ ಅನೇಕಾನೇಕ ಸೇವಕ ಸೇವಕಿಯರ (ಗುಲಾಮರು) ನ್ನೂ ಏರ್ಪಡಿಸಿದ್ದನು. ನನಗಾಗಿ ಈ ದಿವ್ಯ ಭವನವನ್ನೂ ಸಹ ಕಟ್ಟಿಸಿ ಕೊಟ್ಟನು. ನಾನು ನನ್ನ ಸಂಗಾತಿಗಳೊಂದಿಗೆ ಆಟಪಾಟಗಳನ್ನು, ನಾಟ್ಯನರ್ತನಗಳನ್ನೂ ಕಲಿತೆನು. ನನಗೆ ಹನ್ನೆರಡು ವರ್ಷಗಳು ತುಂಬಿದೊಡನೆಯೇ ಅಸ್ತ್ರ ಶಸ್ತ್ರ ಪ್ರಯೋಗದಲ್ಲಿಯೂ ಕುದುರೆ ಸವಾರಿಯಲ್ಲಿಯೂ ಶಿಕ್ಷಣ ದೊರೆಯಿತು. ನಾನೀಗ ತಕ್ಕಮಟ್ಟಿನ ದಾಷ್ಟೀಕವುಳ್ಳ ಬಿಲ್ಲುಗಾತಿ. ಕತ್ತಿ ಗುರಾಣಿಗಳನ್ನು ಹಿಡಿದು ಸೈನಿಕರಂತೆ ಕಾದಬಲ್ಲೆ. ಆದಿನ—ಶಸ್ತ್ರ ಘಾತಕ್ಕೆ ಒಳಗಾದ ಆ ದುರ್ದಿನದಲ್ಲಿ—ನಾನು ಶಸ್ತ್ರಪಾಣಿಯಾಗಿದ್ದಿದ್ದರೆ ನನ್ನನ್ನು ಇರಿಯಬಂದವರು ನನ್ನೆದುರಿಗೇ ಸಾವನ್ನು ಅಪ್ಪಿಕೊಳ್ಳುತ್ತಿದ್ದರು. ಕಳೆದುಹೋದ ಮಾತು. ಈಗೇತಕ್ಕೆ ಅದರ ಪ್ರಸ್ತಾಪ ?

ನನ್ನ ಸಂಗಾತಿಗಳು ಸುಂದರಿಯರು ; ಸ್ಫುರದ್ರೂಪಿಗಳು ; ಸುಶಿಕ್ಷಿತರು ; ಸಂಗೀತ ಪ್ರಿಯರು ; ಸ್ನೇಹವಾತ್ಸಲ್ಯವುಳ್ಳವರು ; ಸುಪ್ರೀತರು. ಅವರೊಡನಾಟವು ನನ್ನನ್ನು ಆನಂದ ಸಾಗರದಲ್ಲಿ ಓಲಾಡುವಂತೆ ಮಾಡುತ್ತಿತ್ತು. ಮೂರು ನಾಲ್ಕು ವರ್ಷಗಳ ಕಾಲ ನಮ್ಮ ವಿನೋದಕ್ಕೆ ಮನೋಲ್ಲಾಸಕರ ಸ್ನೇಹಸಲ್ಲಾಪಗಳಿಗೆ ಕೊನೆಮಿತಿಯಿರಲಿಲ್ಲ. ನಾನು ಎಲ್ಲ ಬಗೆಯ ಸಂತೋಷದಲ್ಲಿ ಓಲಾಡಿದೆ ; ಮನೋಹರ ನೃತ್ಯ, ಮಂಜುಳ ಗಾನ, ಮೃದು ಮಧುರ ಗೀತೆ, ಆನಂದದಾಯಕ ಆಟಪಾಟಗಳು, ಉಲ್ಲಾಸಕರ ವಿಹಾರಗಳು, ವಿನೋದಕರ ಅಸ್ತ್ರಶಸ್ತ್ರಾಭ್ಯಾಸ, ಸರಸವಾದ ಸಲ್ಲಾಪ, ಶಕ್ತಿವರ್ಧಕ ಈಜಾಟ, ಆಹ್ಲಾದಕರ ನಲಿದಾಟ, ಸುಖಕರ ಸುಳಿದಾಟ, ಒಟ್ಟಿನಲ್ಲಿ ಎಲ್ಲ ಬಗೆಯ ಸಂತೋಷ ಸಮಾಧಾನಗಳನ್ನೂ ನಾನೂ ನನ್ನ ಸಂಗಾತಿಗಳೂ ಸೂರೆಗೊಂಡಿದ್ದೆವು. ನಿಜ

ಹೇಳುವುದಾದರೆ ಆ ನನ್ನ ಯೌವನ ಭರದಲ್ಲಿ ಸುಖದುಃಖ, ಪ್ರೇಮ, ದ್ವೇಷ, ಒಳಿತು—ಕೆಡುಕು, ಆಶೆ—ನಿರಾಶೆ, ಮೋಹ—ಮಾತ್ಸರ್ಯ ಇತ್ಯಾದಿ ವಿಷಯಗಳ ದ್ವಂದ್ವಾರ್ಥಗಳು ನನಗೆ ಗೊತ್ತೇ ಇರಲಿಲ್ಲ. ಇದು ನನಗೆ ದೊರೆತ ಶಿಕ್ಷಣೆಯ ತಪ್ಪು. ಏಕಮುಖವಾದ ನನ್ನ ಶಿಕ್ಷಣೆಯಿಂದ ಸ್ವಸುಖದ ಪೂರ್ಣಾನುಭವದಿಂದ ನನಗೆ ಪರರ ದುಃಖದ ಕಡೆ ಗಮನವೇ ಚಲಿಸದಂತಾಯಿತು. ಪ್ರಪಂಚದಲ್ಲಿ ದುಃಖವೆಂಬುದೊಂದಿದೆಯೆಂದು, ಕೆಡುಕು ಹಬ್ಬಿ ಹರಡಿದೆಯೆಂದು ನಾನರಿಯದಾದೆ. ಆದುದರಿಂದ ನನಗೆ ಲೋಕಾನುಭವವೇ ಲೋಪವಾಯಿತು. ನನ್ನ ದೃಷ್ಟಿಕೋಣವು ಸಂಕುಚಿತವೂ, ದೋಷಮಯವೂ ಆಗುವುದಕ್ಕೆ ನನ್ನ ಇಂತಹ ಏಕಮುಖವಾದ ಶಿಕ್ಷಣೆಯೇ ಕಾರಣವಾಯಿತು. ಇತರರಲ್ಲಿ ಅಹಂಕಾರದಿಂದ ವರ್ತಿಸುವುದಕ್ಕೆ, ದುಃಖಿತರನ್ನು ಕಂಡು ಪರಿಹಾರ ನೀಡದಿರುವುದಕ್ಕೆ ನನ್ನ ಶಿಕ್ಷಣೆಯೇ ಕಾರಣವಾಯಿತು. ನಾನು ಮಹಾ ಉದಾರಿಯಂತೆ ನಡೆದುಕೊಂಡ ಪ್ರಮೇಯಗಳಲ್ಲಿ ನನ್ನ ಉದಾರತೆಯು ದಯೆಯಿಂದ ಪ್ರೇರಿತವಾದುದೆಂದು—ಸೌಜನ್ಯತೆಯಿಂದ ಉತ್ಪನ್ನವಾದುದೆಂದು ನಾನು ಹೇಳಿಕೊಳ್ಳಲಾರೆ. ಅದು ನನ್ನ ದರ್ಪದಿಂದ ಪ್ರೇರಿತವಾದುದಷ್ಟೆ. ನಾನು ಚೆಲ್ಲಿದ ಹಣವನ್ನು ಅಳೆಯುವಂತಿಲ್ಲ. ಆದರೂ ಅದು ಸಾರ್ಥಕವಾಯಿತೋ, ವ್ಯರ್ಥವಾಯಿತೋ ನಾನರಿಯೆ. ಸತ್ಪಾತ್ರ ಅಪಾತ್ರಗಳ ಅರಿವು ನನಗುಂಟಾಗಲೇ ಇಲ್ಲ. ಹಣವನ್ನು ಎರಚುವ ಶಕ್ತಿ ನನಗಿತ್ತು, ಈಗಲೂ ಇದೆ. ಅದನ್ನು ಗಳಿಸುವ ವಿಧಾನ, ಉಳಿಸುವ ಕ್ರಮ ಇವುಗಳನ್ನು ನಾನೇನು ಬಲ್ಲೆ? ಇಷ್ಟಾದರೂ ನಡತೆಯ ವಿಚಾರಗಳಲ್ಲಿ ನನ್ನ ತಾಯ್ತಂದೆಯರ ಕೀರ್ತಿಗೆ ಚ್ಯುತಿ ಬರುವಂತೆ—ನನಗೆ ಪಾಪವು ತಟ್ಟುವಂತೆ ನಾನೊಂದು ದಿನವೂ ನಡೆದುಕೊಳ್ಳಲಿಲ್ಲ. ನನ್ನ ದರ್ಪ ನನಗಿಂತ ಇತರರೆಲ್ಲರೂ ಕೀಳಾದವರು ಎಂಬ ದರ್ಪವೇ ನನ್ನನ್ನು ಪಾಪದ ದಾರಿಯಿಂದ ತಡೆದು ರಕ್ಷಿಸಿತು. ನೀನು ಮದುವೆ ಮಾಡಿಕೊಂಡಿರುವ ನಾನು ಪರಿಶುದ್ಧಳು ಎಂದು ನನ್ನ ಎದೆಯನ್ನು ಮುಟ್ಟಿ ಹೇಳಬಲ್ಲೆ.

"ನನಗೆ ಹದಿನೆಂಟು ವರ್ಷಗಳು ತುಂಬಿದುವು. ಆಗ ನನಗರಿವಾಯಿತು. ಎಡೆಬಿಡದ ಸುಖಸಮೃದ್ಧಿಯಲ್ಲಿ ಲೋಲುಪ್ತರಾದವರಿಗೆ—ದುಃಖದ ಸ್ವರೂಪ

ವನ್ನೂ ಎಳ್ಳಷ್ಟೂ ಕಣ್ಣಾರೆ ಕಾಣದವರ ಗತಿ ಏನೆಂಬುದು ನನಗೆ ಅನುಭವಕ್ಕೆ ಬರತೊಡಗಿತು. ಹಣ್ಣು ತಿನ್ನುವವರು ಒಂದು ತಿಂದಾರು, ಹತ್ತು ತಿಂದಾರು ; ಸಿಹಿಯಾದ ಷರಬತ್ತುಗಳನ್ನು ಒಮ್ಮೆ ಕುಡಿದಾರು, ಹತ್ತುಸಲ ಕುಡಿದಾರು ; ಪ್ರಿಯವಾದ ಗಾನಗಳನ್ನು ಒಮ್ಮೆ ಹಾಡಿಯಾರು ; ನೂರು ಸಲ ಹಾಡಿಯಾರು; ಉಲ್ಲಾಸಕರ ನೋಟವನ್ನು ಒಮ್ಮೆ ನೋಡಿಯಾರು, ಹತ್ತಿಪ್ಪತ್ತು ಸಲ ನೋಡಿ ಯಾರು. ಅಂತೆಯೇ ನೃತ್ಯ, ಗೀತೆ, ವಿನೋದ, ಈಜುವಿಕೆ, ಸಲ್ಲಾಪ, ಉಡುಗೆ, ತೊಡಿಗೆ, ಆಭರಣ, ಅಲಂಕಾರ, ಊಟ, ಉಪಚಾರ, ಓದುವಿಕೆ, ಬರೆಯುವಿಕೆ—ಒಟ್ಟಿನಲ್ಲಿ ಎಲ್ಲಾ ನೋಡಿದ್ದನ್ನೇ ನೋಡುವುದು ; ಮಾಡಿದ್ದನ್ನೇ ಮಾಡುವುದು ; ಆಡಿದ್ದನ್ನೇ ಆಡುವುದು ; ಹಾಡಿದ್ದನ್ನೇ ಹಾಡುವುದು : ತೊಟ್ಟಿದ್ದನ್ನೇ ತೊಡುವುದು. ಇತ್ಯಾದಿ ಎಷ್ಟೇ ಪ್ರಿಯವಾಗಿರಲಿ,ಎಷ್ಟೇ ಆನಂದಕರವಾಗಿ ರಲಿ—ಅವುಗಳಿಗೂ ಒಂದು ಮಿತಿಯುಂಟು. ಬರಿಯ ಸುಖದಲ್ಲೇ ಸುಖವಿಲ್ಲ. ಸುಖದೊಂದಿಗೆ ದುಃಖವು ಮಿಶ್ರವಾಗಿದ್ದರೆ ಸುಖಾನುಭವವು ಹೆಚ್ಚಿನದೆನಿಸೀತು! ಸಕ್ಕರೆಯು ಸಿಹಿಯೇನೋ ಅಹುದು. ಆದರೆ ಬರಿಯ ಸಕ್ಕರೆಯನ್ನು ಎಷ್ಟೆಂದು ತಿನ್ನಲಾದೀತು ? ಪ್ರತಿಮಾನವನಿಗೂ, ಒಂದೇ ತೆರನಾದ ಜೀವನದಿಂದ— ಅದು ಆರಂಭದಲ್ಲಿ ಎಷ್ಟೇ ಸಂತೋಷಕರವಾಗಿದ್ದರೂ—ಬರಬರುತ್ತ ಬೇಸರ ಹುಟ್ಟುವುದರಲ್ಲಿ ಸಂದೇಹವಿಲ್ಲ. ನನ್ನ ಅವಸ್ಥೆಯೂ ಈ ರೀತಿಯದಾಯಿತು. ನನ್ನ ಬಾಳಲ್ಲಿ ಸ್ವಲ್ಪವಾದರೂ ವೈವಿಧ್ಯತೆ ಇದ್ದಿದ್ದರೆ ಚಿನ್ನಕ್ಕೆ ಮೆರಗು ಕೊಟ್ಟಂತೆ ನನ್ನ ಸುಖಕ್ಕೊಂದು ಬಣ್ಣ ಬರುತ್ತಿತ್ತು. ಹಾಗಾಗುವುದು ಆಗ ನನ್ನ ಹಣೆ ಯಲ್ಲಿ ಬರೆದಿರಲಿಲ್ಲ."

"ನನಗೆ ಇಪ್ಪತ್ತುವರ್ಷಗಳು ತುಂಬಿದುವು. ನನ್ನ ದಿನವಹಿ ಕ್ರಮಗಳು ಸೂರ್ಯೋದಯ ಸೂರ್ಯಾಸ್ತಮಾನದಂತೆ ಕಾಲಕ್ಕೆ ಬಲಿಯಾಗಿ ಹೋಗಿದ್ದುವು ಎಲ್ಲಕ್ಕೂ ಒಂದು ಕಾಲ. ನಾನು ಸ್ನಾನಮಾಡುವ ಕಾಲ, ವಿಧಾನ, ಊಟ ಮಾಡುವ ಕಾಲ—ವಿಧಾನ, ಆಟವಾಡುವ ಕಾಲ—ವಿಧಾನ—ಇವೆಲ್ಲ ನನಗೆ ಕಂಠಪಾಠವಾಗಿ ಹೋದುವು. ಅದೇ ಬೇಸರಿಕೆಗೆ ಕಾರಣ. ಹೊಸ ಜನರ ಪರಿಚಯವೇ ? ಹೊಸ ಹೊಸ ಪ್ರದೇಶಗಳಲ್ಲಿ ಸಂಚಾರವೇ? ಹೊಸದೃಶ್ಯಗಳನ್ನು ನೋಡುವುದೇ ? ಹೊಸ ರೀತಿಯಲ್ಲಿ ಅಹ್ಲಾದಕರವಾಗಿ ಆಟವಾಡುವುದೇ ?

ಏನೊಂದೂ ಇಲ್ಲ. ಹೀಗಾಗಿ ಬರಬರುತ್ತ ನನ್ನ ಮಿತಿ ಮಿಂಚಿದ—ಗೊತ್ತು ವಳಿಗೆ ಮೀಸಲಾಗಿ ಹೋದ—ಸುಖಸಮೃದ್ಧಿಯಿಂದ ಕೂಡಿದ ಜೀವನವು ನನಗೆ ಜುಗುಪ್ಸೆಯನ್ನು ಹುಟ್ಟಿಸಿತು. ಚಮತ್ಕಾರವಿಲ್ಲ, ಅಧ್ಭುತವಿಲ್ಲ, ಕಲ್ಪನೆಯಿಲ್ಲ, ಕಲ್ಪನಾಸೃಷ್ಟಿ ಮೊದಲೇ ಇಲ್ಲ. ಅದುವರೆಗೆ ನಾಕಂಡ—ನಾನನುಭವಿಸಿದರಿ ವಿನೋದಕ್ಕೆ—ಕುರಾಲಿಗೆ ವಿಲಾಸಕ್ಕೆ—ಕ್ರೀಡೆಗಳಿಗೆ ವಿವಿಧತೆಯನ್ನು ತೋ ಸುವ ಮತ್ತೊಂದು ಮಾದರಿಯಿರಲಿಲ್ಲ ಹಿತಕರವಾದ, ಪ್ರಯೋಜನಕರವಾದ, ಸಾಹಸ ಪ್ರದರ್ಶನವಿಲ್ಲ; ಸಾಮರ್ಥ್ಯದ ಸಂಗತಿಯಿಲ್ಲ; ಬುದ್ಧಿ ಚುರುಕ ನ್ನುಂಟುಮಾಡುವ ಒಂದು ಕೆಲಸವಿಲ್ಲ; ಯೋಗ್ಯತೆಯನ್ನು ನಿರ್ಧರಿಸುವ ಒಂದು ವಿಚಾರವಿಲ್ಲ; ಇಂತಹ ರೀತಿಯ ಸುಖಕ್ಕೆ ನನ್ನಲ್ಲಿ ಧಿಕ್ಕಾರಹುಟ್ಟಿತು. ನನ್ನ ಬುದ್ಧಿ ಬೆಳವಣಿಗೆಯು ಅಷ್ಟಕ್ಕೇ ತಟಸ್ಥವಾಗಿ ನಿಂತಿತು. ನಾನು ನಿರಾಶಳಾದೆ; ದಿನೇ ದಿನೇ ಖಿನ್ನಳಾದೆ; ಚಿಂತೆಯು ನನ್ನನ್ನು ಆವರಿಸಿತು; ನಾನು ಭಗ್ನ ಮನೋರಥಳಾದೆ. ನನ್ನ ಸಂಗಾತಿಗಳನ್ನು ಬೀಳ್ಕೊಟ್ಟೆ ಸೇವಕಸೇವಕಿಯರನ್ನು ಕಡಿಮೆಮಾಡಿದೆ. ಯಾರೊಂದಿಗೂ ನನಗೆ ಸಂಭಾಷಣೆಯು ರುಚಿಸಲಿಲ್ಲ ಎಲ್ಲವೂ ಕಹಿಯಾಯಿತು. ಕರ್ಕಶವಾಯಿತು. ನನ್ನ ಬುದ್ಧಿಗೆ ಭ್ರಮೆ ತಟ್ಟಿತು. ಯಾವುದನ್ನು ಕಂಡರೂ ನನಗೆ ಹಿಡಿಸದೆ ಹೋಯಿತು. ನನ್ನ ಚಿಂತೆ ಏನೆಂಬುದು ಆಗ ನನಗೇ ಅರಿವಾಗದೆ ಹೋಯಿತು. ಇಂತಹ ಗುಪ್ತ ಚಿಂತೆ—ಅದನ್ನು ಯಾರಲ್ಲಿ ಹೇಳಿಕೊಳ್ಳಲಿ ? ಹೇಗೆ ಹೇಳಿಕೊಳ್ಳಲಿ ? ನನ್ನಲ್ಲಿ ತಾಮಸ ಗುಣವು ಹೆಚ್ಚು ತ್ತಿತ್ತು. ನನ್ನ ಸ್ಥಿತಿ ವಿಪರೀತಕ್ಕೆ ಬಂತು. ಇದನ್ನು ಕಂಡು ನನ್ನ ಸೇವಕಿ ಯರು ಕಾತುರರಾದರು."

"ನನ್ನ ಆಪ್ತ ಸೇವಕಿಯೊಬ್ಬಳು ವೃದ್ಧೆ. ನನ್ನಚೈತನ್ಯವು ಕುಂದಿ ನಶಿಸು ತ್ತಿರುವುದನ್ನು ಅವಳು ಕಂಡುಕೊಂಡಳು. ಮಾದಕ ಪದಾರ್ಥಗಳ ತಯಾರಿಕೆ ಯಲ್ಲಿ ಅವಳು ಅತಿ ನಿಪುಣೆ. ವೃದ್ಧೆಯು ನನಗೊಂದು ತರಹೆಯ ಮಾದಕ ಪಾನೀಯವನ್ನು ತಯಾರಿಸಿ ತಂದು ಕುಡಿಸಿದಳು. ಬಹು ಶೀಘ್ರದಲ್ಲೆ ನಿಷೆಯು ನನ್ನ ಅಂಗಾಂಗಗಳಲ್ಲಿ ವ್ಯಾಪಿಸಿ ನನ್ನಲ್ಲೊಂದು ಹೊಸ ಬಗೆಯ ಚೈತನ್ಯ ವನ್ನುಂಟುಮಾಡತೊಡಗಿತು. ಕ್ರಮಕ್ರಮವಾಗಿ ನನಗೆ (ಅಮಲು) ಮತ್ತು ಏರತೊಡಗಿತು. ಅದೊಂದು ಬಗೆಯ ಹೊಸ ಸುಖಾನುಭವವು ನನಗುಂಟಾ

ದಂತಾಯಿತು. ಆ ಮಾದಕ ದ್ರವ್ಯವನ್ನು ನಾನು ಮನಸಾರೆ ಮೆಚ್ಚಿದೆ. ಅದನ್ನು ನನಗೆ ತಂದುಕೊಟ್ಟ ವೃದ್ಧೆಗೆ ನಾನು ಅತಿಶಯ ಬಹುಮಾನಗಳನ್ನು ಕೊಟ್ಟೆ. ಸ್ವಲ್ಪಕಾಲಾನಂತರ ನನ್ನೆಲ್ಲ ಚಿಂತೆಯೂ ನನ್ನಿಂದ ದೂರವಾದಂತಾಯಿತು. ನನ್ನ ಕಣ್ಣುಗಳು ಎಳೆದುವು. ಆಕಳಿಕೆಯುಂಟಾಯಿತು. ನನ್ನನ್ನೂ ಅರಿಯದೆ ನನಗೆ ಸುಖನಿದ್ರೆಯುಂಟಾಯಿತು. ಮರುದಿನ ಪ್ರಾತಃಕಾಲ ನಾನು ಮೇಲೆದ್ದಾಗ ಉದಯವಾಗಿ ಎಷ್ಟೋಕಾಲವಾಗಿತ್ತು. ರಾತ್ರಿ ಕೆಟ್ಟ ಕನಸಿಲ್ಲ; ನಿದ್ರೆಗೆಡಿಸುವ ವಿಚಾರವಿಲ್ಲ. ಎಲ್ಲರನ್ನೂ, ಎಲ್ಲವನ್ನೂ ಮರೆತು ನಾನು ನಿದ್ರಿಸಿದ್ದೆ."

"ಮರುದಿನ ಎಚ್ಚರವಾದ ಸ್ವಲ್ಪ ಕಾಲದಲ್ಲೆ ಮಾದಕ ದ್ರವ್ಯದ ಅಮಲು ಇಳಿದು ಹೋಯಿತು. ಪುನಃ ಪುರಾತನ ಚಿಂತೆಗಳು. ಚೈತನ್ಯನಾಶ. ಸಂಜೆಯಾವಾಗ ಆಗುತ್ತದೋ ಎಂದು ನಾನು ತವಕದಿಂದ ಹಂಬಲಿಸುತ್ತಿದ್ದೆ. ನಿಶ್ಚಿತ ಕಾಲದಲ್ಲಿ ವೃದ್ಧೆ ತನ್ನ ಮಾದಕ ದ್ರವ್ಯದೊಂದಿಗೆ ಕಾಣಿಸಿಕೊಂಡಳು. ಆದರೆ ಈ ಸಲ ಅದರ ಶಕ್ತಿಯನ್ನು ಹೆಚ್ಚಿಸುವುದಕ್ಕಾಗಿ ಮದ್ಯದಲ್ಲಿ ಒಂದು ಚಿಟಿಕೆ ಪುಡಿ ಹಾಕಿದಳು. ಮತ್ತೆ ನೂತನ ಸುಖಾನುಭವ; ಚೈತನ್ಯಲಾಭ; ಆನಂದ ಲಹರಿ; ಸುಖನಿದ್ರೆ, ಮೂರನೆಯದಿನ ನಿಷೆಯಿಳಿದ ಬಳಿಕ ಮತ್ತೆ ಚೈತನ್ಯನಾಶ, ಸಂಧ್ಯಾಕಾಲದವರೆಗೆ ಹಂಬಲ, ಹೀಗೆ ಹತ್ತು ದಿವಸಗಳು ಎಡಬಿಡದೆ ಮಾದಕ ದ್ರವ್ಯವನ್ನೂ ಸೇವಿಸುತ್ತ ಬಂದೆ. ಅದರ ಪ್ರಭಾವವು ಕಡಿಮೆಯಾಗದಿರಬೇಕಾದರೆ ಅದರ ತ್ರಾಣವನ್ನು ಹೆಚ್ಚಿಸಲಿಕ್ಕೆ ವೃದ್ಧೆಯು ಪ್ರತಿದಿನವೂ ಹಿಂದಿನ ದಿನಕ್ಕಿಂತ ಒಂದೊಂದು ಚಿಟಿಕೆ ಹೆಚ್ಚಿಗೆ ಪುಡಿಯನ್ನು ಮಾದಕಕ್ಕೆ ಸೇರಿಸುತ್ತಲೇ ಬಂದಳು. ಚಿಟಿಕೆಯ ಪ್ರಮಾಣವು ಕಡಿಮೆಯಾದಲ್ಲಿ ಮಾದಕವು ಅಂಗಾಂಗಗಳಲ್ಲಿ ವ್ಯಾಪಿಸದೆಂದೂ, ನನಗೆ ನಿದ್ರೆಯೇ ಹಿಡಿಸದೆಂದೂ ವೃದ್ಧೆಯು ಒತ್ತಿ ಹೇಳಿದಳು. ಮಾತ್ರವಲ್ಲ; ಒಂದುದಿನ ವಸ್ತುತಃ ನಿರೂಪಿಸಿಯೂ ನಿರೂಪಿಸಿದಳು. ಹೀಗಾಗಿ ಕೇವಲ ಹತ್ತೇ ದಿವಸಗಳಲ್ಲಿ ನಾನು ಮಾದಕ ದ್ರವ್ಯದ ದಾಸಿಯಾಗಿ ಹೋದೆ!"

"ಹೀಗೆ ಕೆಲ ತಿಂಗಳುಗಳು ಕಳೆದುವು. ನಿಪುಣೆಯಾದ ವೃದ್ಧೆಯು ಮಾಡಿಕೊಡುವ ನಿಷಾದ್ರವ್ಯದ ಪ್ರಭಾವವು ಬರಬರುತ್ತ ನನ್ನ ಕ್ಷಣಿಕ ಚೈತನ್ಯದ

ಉತ್ಪತ್ತಿಗೆ ಸಾಲದಂತಾಯಿತು. ಆ ತೆರನಾದ ನಿಸೆಗೆ ಎಷ್ಟೆಷ್ಟು ನಾವು ದಾಸಿಯು ರಾಗುವೆವೋ ಅಷ್ಟಷ್ಟು ಪ್ರಮಾಣದಲ್ಲಿ ಅದರ ತ್ರಾಣವನ್ನು ಹೆಚ್ಚಿಸುತ್ತಲೇ ಹೋಗಬೇಕಂತೆ!"

"ಒಂದು ದಿನ ಮಾದಕ ದ್ರವ್ಯವು ನನ್ನಲ್ಲಿ ಯಾವ ಮಾರ್ಪಾಡನ್ನೂ ಹುಟ್ಟಿಸದೆ ನಿರ್ಜೀವವಾಯಿತು. ಇದನ್ನು ಕಂಡು ವೃದ್ಧೆಯು ಕಡುನೊಂದು ನಗರದೊಳಗೆ ಹೋಗಿ ಮಿನುಮಿನುಗುಟ್ಟುವ ಮದ್ಯದಿಂದ ತುಂಬಿದ ಒಂದು ಗಾಜಿನ ಹೂಜಿಯನ್ನೂ ಹಿಡಿದ ಒಬ್ಬ ತರುಣನನ್ನು ನನ್ನ ಬಳಿ ಕರೆತಂದಳು. 'ಇವರ ಅಂಗಡಿಯ ಯಜಮಾನನು ಉತ್ತಮ ಮಾದಕಗಳನ್ನೂ ತಯಾರಿಸು ತ್ತಾನೆ. ಇವನಿಗೆ ಹೇಳಿದ್ದೇನೆ. ದಿನವಹಿ ತಂದುಕೊಡುತ್ತಾನೆ' ಎಂದಳು. ಹುಡುಗನ ವಯಸ್ಸು ಇಪ್ಪತ್ತುಮೂರು ಇಪ್ಪತ್ತುನಾಲ್ಕು ಇರಬಹುದು. ಅವನ ಬಟ್ಟೆಬರೆಗಳು ಮಲಿನವಾಗಿದ್ದುವು, ಅವನ ಮುಖಲಕ್ಷಣಗಳು ಸುಂದರ ಸುಮ ನೋಹರವಾಗಿದ್ದುವು, ಅವನನ್ನು ಕುಳಿತುಕೊಳ್ಳ ಹೇಳಿ ಅವನು ತಂದ ಮಾದಕ ವನ್ನು ನಾನು ಸೇವಿಸಿದೆ. ಅದು ಅತಿ ಮಧುರವಾಗಿದ್ದಿತು. ಮಿಂಚಿನಂತೆ ಅದರ ಪ್ರಭಾವವು ನನ್ನ ಅಂಗಾಂಗಳಲ್ಲೆಲ್ಲ ವ್ಯಾಪಿಸತೊಡಗಿತು. ನಾನೊಂದು ಅನಿರ್ವಚನೀಯ ಆನಂದವನ್ನು ಅನುಭವಿಸಿದೆ. ಹುಡುಗನಲ್ಲಿ ನನಗೆ ಪ್ರೀತಿಯು ಹುಟ್ಟಿತು. ಅವನಿಗೆ ಯಥೇಚ್ಛವಾಗಿ ಹೊನ್ನು ಕೊಡಿಸಿದೆ. ದಿನವಹಿ ಅದೇ ಹೊತ್ತಿಗೆ ಮಾದಕ ದ್ರವ್ಯವನ್ನು ತಂದು ಕೊಡುವಂತೆ ಅವನಿಗೆ ಆಜ್ಞಾಪಿ ಸಿದೆ. ಮರುದಿನ ಉತ್ತಮವಾದ ಉಡುಗೆ ತೊಡುಗೆಗಳನ್ನು ತೊಟ್ಟು ಬರ ಬೇಕೆಂದೂ ಅವನಿಗೆ ಸೂಚಿಸಿದೆ. ನನ್ನ ಸೇವಕಿಯರನ್ನೂ ಕುರಿತು ಅವನ ಪ್ರವೇಶಕ್ಕೆ ಅಡಚಣೆ ಇಲ್ಲದಿರಬೇಕೆಂದು ಕಟ್ಟಪ್ಪಣೆ ಮಾಡಿದೆ. ಎಷ್ಟೋ ದಿವಸ ಹುಡುಗನು ಮಾದಕವನ್ನು ತಪ್ಪದೆ ತಂದು ಕೊಡುತ್ತಿದ್ದನು."

"ಒಂದು ದಿನ ಹುಡುಗನನ್ನು ಕಂಡು ಅವನ ಸ್ಥಿತಿಗತಿಗಳನ್ನೂ ವಿಚಾರಿ ಸಿದೆ. ಅವನ ಮಾತಿನಿಂದ ಅವನು ಕಡುಬಡವನೆಂದೂ, ನಾನು ಅವನಿಗಿತ್ತ ಸನ್ಮಾನಗಳನ್ನೂ ಅವನ ಯಜಮಾನನೇ ಕಸಿದುಕೊಳ್ಳುತ್ತಿದ್ದಾನೆಂದೂ ನನಗೆ ತಿಳಿಯ ಬಂತು. ಆಗ ನಾನು ಹುಡುಗನನ್ನು ಅವನ ಯಜಮಾನನ ಹಿಡಿತ ದಿಂದ ತಪ್ಪಿಸಿದೆ. ಅಪಾರವಾದ ಹೊನ್ನನ್ನು ಅವನಿಗೆ ಕೊಟ್ಟು ಬೇರೊಂದು

ಸರಾಫ್ ಅಂಗಡಿಯನ್ನು ಇಟ್ಟುಕೊಳ್ಳುವಂತೆ ಅವನಿಗೆ ಸಲಹೆಯಿತ್ತೆ. ಅವನು ನನ್ನ ಮಾತಿನಂತೆ ವರ್ತಕತನವನ್ನು ಆರಂಭಿಸಿದ, ಚತುರನೂ, ಅಂದಚೆಂದ ವಾದ ಸ್ವರೂಪವುಳ್ಳವನೂ, ಘನತೆಗಾಂಭೀರ್ಯಗಳನ್ನೂ ಅರಿತವನೂ ಆದ ಅವನು ಅತಿ ಶೀಘ್ರದಲ್ಲೆ ತನ್ನ ವ್ಯಾಪಾರವನ್ನು ಹೆಚ್ಚಿಸಿಕೊಂಡ. ಅರಮನೆಯ ವ್ಯಾಪಾರವೆಲ್ಲ ಅವನ ಕೈಸೇರಿತು, ಒಂದಕ್ಕೆ ಹತ್ತರಂತೆ ಲಾಭ ಸಂಪಾದಿಸಿದ. ಕೃತಜ್ಞತೆಯಿಂದ ನಾನವನಿಗೆ ಕೊಟ್ಟಿದ್ದ ಮೂಲಧನವನ್ನು ಒಂದಕ್ಕೆ ಎರಡರಂತೆ ನನಗೆ ತಿರುಗಿಸಿ ಕೊಟ್ಟ."

"ಕೊನೆಗೆ ಅವನು ಸರಾಫ್ ವ್ಯಾಪಾರದಿಂದ ಜವುಳಿ ವ್ಯಾಪಾರವನ್ನೂ ತೊಡಗಿದ. ಅವನ ಅಂಗಡಿ ಗಿರಾಕಿಗಳೆಲ್ಲ ನವಾಬರು, ನಾಯಕರು, ಉನ್ನತ ಅಧಿಕಾರಿಗಳು, ನಮ್ಮ ರಾಜಮನೆತನದವರು, ಅತ್ಯಲ್ಪ ಕಾಲದಲ್ಲಿ ಅವನು ಧನ ರಾಶಿಯಮೇಲೆ ಕುಳಿತ. ನಗರದ ಅಂಚಿನಲ್ಲಿ ಕೋಟೆಯ ಬಳಿ ವಿಶಾಲವಾದ ನಿವೇಶನವನ್ನು ಕೊಂಡ. ಬಹು ಅಂದಚಂದದ ಉದ್ಯಾನವನ್ನು ಕೊಂಡುಕೊಂಡ. ಮಧ್ಯಭಾಗದಲ್ಲಿ ಸುಂದರವಾದ ಭವನವೊಂದನ್ನು ಕಟ್ಟಿಸಿಕೊಂಡ. ಆ ಹುಡುಗ ನಾರು ಬಲ್ಲೆಯಾ ? ಅವನೇ ಮಲ್ಲಿಕ್ ಹಸನ್ ಎಂಬುವನು ! "

"ಮಲ್ಲಿಕ್ ಹಸನ್ !" ಎಂದು ನಾನು ಆಶ್ಚರ್ಯದಿಂದ ದನಿಗೂಡಿಸಿದೆ. ನನ್ನ ಮೋಹದ ಅರಗಿಣಿ ತನ್ನ ಮಾತನ್ನು ಮುಂದುವರಿಸಿದಳು :

"ಅಹುದು ; ಅವನೇ ಮಲ್ಲಿಕ್ ಹಸನ್ ! ಅವನು ಆ ಉದ್ಯಾನವನ್ನು ಕೊಂಡಾಗ ಅದರೊಂದಿಗೆ ಅದರ ಕಾವಲುಗಾತಿಯಾದ—ನಿನಗೆ ಇತ್ತೀಚೆಗೆ ಪರಿಚಿತಳಾದ— ಆ ಕಪ್ಪನೆಯ ಕುಬ್ಜೆ, ಅವಳನ್ನೂ ಕೊಳ್ಳಬೇಕಾಯಿತು ; ಉದ್ಯಾನ ವನವು, ಆ ವೇಳೆಗೆ ಎಷ್ಟೋ ಕೈ ಮಾರಿತ್ತಂತೆ, ಒಂದೊಂದು ಸಲ ಕೈ ಮಾರುವಾಗಲೂ ಕುಬ್ಜೆಯೂ ಹೊಸಮಾಲೀಕರಲ್ಲಿ ಕೆಲಕಾಲ ಸೇವೆಗೆ ನಿಲ್ಲುತ್ತಿದ್ದಳಂತೆ. ಆದರೆ ಅವಳು ಮಾಯುಗಾತಿ—ಹೊಸದಾಗಿ ಉದ್ಯಾನವನಕ್ಕೆ ಮಾಲಿಕರಾದವರನ್ನು-ಅದೇನು ಅವಳ ಮಾಯೆಯೋ ಸಂಪೂರ್ಣವಾಗಿ ತನ್ನ ವಶಪಡಿಸಿಕೊಳ್ಳುತ್ತಿದ್ದಾಳಂತೆ. ಮಾಲಿಕರು ಎಷ್ಟೇ ಗುಣಸಂಪನ್ನಾರಾಗಿರಲಿ; ಸುಂದರ ಸ್ವರೂಪಿಗಳಾಗಿರಲಿ, ಅವಳ ವಶಕ್ಕೆ ಒಳಪಟ್ಟಮೇಲೆ ಅವರು ಅವಳನ್ನೇ ನಾಯಕಿಯನ್ನಾಗಿ ಪರಿಗ್ರಹಿಸಿ ಅವಳಲ್ಲಿ ಮೋಹಪರವಶರಾಗಿ,ಅವಳನ್ನು ಅಗಲಿ

ಅರಕ್ಷಣ ಇರಲಾಗದೆ ಅವಳ ದಾಸಾನುದಾಸರಾಗಿರುತ್ತಿರಬೇಕಂತೆ. ಇದೆಲ್ಲ ನನಗೆ ಇತ್ತೀಚೆಗೆ ತಿಳಿದ ಸಮಾಚಾರ."

"ಅದು ಹೇಗಾದರೂ ಇರಲಿ; ನಾನವನ ಸ್ವಾರ್ಥಿಯೂ ಕೇಡಿಗನೂ ಆದ ಅವನ ಯಜಮಾನನ ಹಿಡಿತದಿಂದ ಮಲ್ಲಿಕ್ ಹಸನನನ್ನೂ ತಪ್ಪಿಸಿ ಅವನಿಗೇ ಮೂಲಧನವನ್ನು ಕೊಟ್ಟು, ಅವನ ಬಡತನ ನೀಗಿಸಿದ್ದೆ. ಅವನು ವರ್ತಕತನವನ್ನು ಸ್ವತಂತ್ರವಾಗಿ ತೊಡಗಬೇಕೆಂದು ಸಲಹೆಯಿತ್ತೆ; ಅವನ ಸರಕುಗಳಿಗೆ ಪ್ರೋತ್ಸಾಹವಿತ್ತು—ಅವನ ಅಪಾರ ಅಭಿವೃದ್ಧಿ ಅಭ್ಯುದಯಗಳಿಗೆ ನಾನೇ ಆದಿಕಾರಣಳೆಂದು ಗ್ರಹಿಸಿದ ಮಲ್ಲಿಕ್ ಹಸನನು ನನ್ನನ್ನು ಕೃತಜ್ಞತೆ ಯಿಂದ ವಂದಿಸ ಬಯಸಿದ. ಒಮ್ಮೆ ತನ್ನ ಉದ್ಯಾನವನದಲ್ಲಿ ಒಂದು ಸತ್ಕಾರ ಕೂಟವನ್ನು ಏರ್ಪಡಿಸಿದ, ಆಹ್ವಾನಿತಳಾದ ನಾನು ಏಕಾಕಿನಿಯಾಗಿ ಮಲ್ಲಿಕ್ಕನ ಭವನಕ್ಕೆ ಹೋದೆ."

"ಎರಡು ದಿವಸಗಳು ಕೋಲಾಹಲವಾಗಿ ನೃತ್ಯ—ಗೀತೆ—ಊಟ—ಉಪಚಾರ, ಮದ್ಯಪಾನಗಳು ನಡೆದುವು ಮೂರನೆಯ ದಿನ ರಾತ್ರಿ ಮದ್ಯಪಾ ನದ ಘಟ್ಟಕ್ಕೆ ಬಂದಿದ್ದೆವು. ಆಗ ಆ ಕುಬ್ಜೆಯು ಓಡಿಬಂದು ಮಲ್ಲಿಕ್ಕನನ್ನು ತಬ್ಬಿಕೊಂಡು ಅವನ ಕಿವಿಯಲ್ಲಿ ಏನೇನೋ ಹೇಳಿದಳು, ಮಲ್ಲಿಕ್ಕನು ತನ್ನ ಭವನಮೊಳಗೆ ಓಡಿಹೋಗಿ ತನ್ನ ಖಡ್ಗವನ್ನು ಹಿಡಿದುದೊಂಡು ಬಂದ. ನನಗೆ ಏನೊಂದೂ ಬಗೆಹರಿಯಲಿಲ್ಲ. ಕುಬ್ಜೆಯು ಎದುರಿಗೆ ನಿಂತು ಮಲ್ಲಿಕ್ಕನನ್ನು ದುರದುರನೆ ದಿಟ್ಟಿಸಿ ನೋಡಿದಳು, ಮಲ್ಲಿಕ್ಕನು ಏಕಾಏಕಿ ನಿಷ್ಕಾರಣವಾಗಿ ನನ್ನನ್ನು ಬರಬರನೆ ತಿವಿದು ಗಾಯಗೊಳಿಸಿದ. ನನಗೆ ಪ್ರಜ್ಞೆ ತಪ್ಪಿತು. ಬಳಿಕ ಎಷ್ಟೋ ಹೊತ್ತಾದಮೇಲೆ ನನಗೆ ಜ್ಞಾನ ಬರತೊಡಗಿತು. ನೋವು ತಡೆಯ ಲಾರದಷ್ಟು ಅಧಿಕರಿಸಿತ್ತು, ನಾನು ಮರಣಸಂಕಟವನ್ನು ಅನುಭವಿಸುತ್ತಿದ್ದೆ. ಒಮ್ಮೆ ನಾನು ಕಣ್ಣುಬಿಟ್ಟು ನೋಡಿದೆ. ಆಗ ನೀನು ನನ್ನ ಎದುರಿಗಿದ್ದೆ. ಮುಂದೆ ನಡೆದುದೆಲ್ಲವನ್ನೂ ನೀನೇ ಬಲ್ಲೆ."

ಹೀಗೆಂದು ಹೇಳಿ ನನ್ನಪ್ರೇಮಪುತ್ಥಳಿಯು ಸುಮ್ಮನಾದಳು. ನಾನು ವಿಸ್ಮಯ ದಿಂದ ತುಂಬಿಹೋದೆ. ಅವಳು ಹೇಳಿದ ಒಂದೊಂದು ಮಾತನ್ನೂನನ್ನ ಮನಸ್ಸಿ ನಲ್ಲೇ ತುಲನಮಾಡುತ್ತಿದ್ದೆ. ಆಗ ಅವಳು ನನ್ನನ್ನುನೋಡಿಮತ್ತೆ ಹೇಳಿದಳು :

"ಹೃದಯೇಶ್ವರ! ಏನು ನಿನ್ನ ಯೋಚನೆ? ಇಷ್ಟಾದರೂ ಮಲ್ಲಿಕ್ಕನು ನನ್ನನ್ನು ಮುಟ್ಟಲಿಲ್ಲ. ನನ್ನ ದರ್ಪದ ವಿಚಾರ ನಿನ್ನಲ್ಲಿ ಮೊದಲೇ ಹೇಳಿದ್ದೇನೆ ನನ್ನ ನಡತೆಯಬಗ್ಗೆ ನೀನು ಈಷದಪಿ ಶಂಕಿಸಬೇಕಾದುದಿಲ್ಲ. ನನ್ನ ಇಡೀ ಜೀವಮಾನದಲ್ಲೇ ಯಾರಿಗೂ ನಾನು ವಶವರ್ತಿನಿಯಾಗಿರಲಿಲ್ಲ. ಇಷ್ಟು ಉಪಕಾರಮಾಡಿದ ನೀನು—ಅಂತಹ ಕೃತ್ಯಾವಸ್ಥೆಯಲ್ಲಿದ್ದ ನನ್ನನ್ನು ಮೃತ್ಯುವಿನ ಹಿಡಿತದಿಂದ ತಪ್ಪಿಸಿದ ನೀನು ನನ್ನಲ್ಲಿ ಹೊಸ ಜೀವವನ್ನು ತುಂಬಿ ಮತ್ತೇ ಮಾನವ ಕೂಟದಲ್ಲಿ ಸೇರಿಸಲು ಸರ್ವಸ್ವವನ್ನೂ ತ್ಯಾಗಮಾಡಿದ ನೀನು ನಿನ್ನಂತಹ ನಿಸ್ಪೃಹನನ್ನೇ—ನಾನು ಅಷ್ಟೊಂದು ಧಿಕ್ಕಾರದಿಂದ ಮಾತನಾಡಿಸಿದೆನಲ್ಲವೇ? ಇನ್ನು ಬಡಹುಡುಗನಾಗಿ ನನ್ನಲ್ಲಿ ಬಂದು ನನ್ನಿಂದ ಅಭ್ಯುದಯ ಹೊಂದಿದ ಆ ನಿರ್ನಾಮನನ್ನು ನಾನು ಲಕ್ಷಿಸಬಲ್ಲೆನೇ? ನೀನು ನನ್ನ ಪತಿ. ನನ್ನಲ್ಲಿ ನಿನಗಿರುವ ಅಚಲವಾದ ಪ್ರೇಮದಂತೆಯೇ ನನಗೂ ನಿನ್ನಲ್ಲಿ ಅಚಲವಾದ ಪ್ರೇಮವುಂಟು. ಪ್ರೇಮಮಾತ್ರವಲ್ಲ; ಮೆಚ್ಚಿಕೆಯುಂಟು; ಕೃತಜ್ಞತೆಯೂ ಉಂಟು. ನನ್ನ ಜೀವಮಾನದಲ್ಲೆಲ್ಲಾ ನಾನು ನೋಡಿದ ನಿಜವಾದ ವೀರನೆಂದರೆ ನೀನು; ತ್ಯಾಗಿಯೆಂದರೆ ನೀನು; ಸಾಹಸಿ ಯೆಂದರೆ ನೀನು; ಸಹನಾಶಾಲಿ ಎಂದರೆ ನೀನು; ಪ್ರೇಮಿ ಎಂದರೆ ನೀನು; ಹೆಚ್ಚೇಕೆ? ನನ್ನನ್ನು ಮೊಟ್ಟಮೊದಲು ಮುಟ್ಟಿದ ಪುರುಷನೂ ನೀನೇ!"

ಈಗ—ಈ ಅಪ್ಪೃತ ಸದೃಶ್ಯ ಮಾತುಗಳನ್ನು ಕೇಳಿ ನನ್ನ ಹೃದಯವು ತೃಪ್ತಿಯಿಂದ ತುಂಬಿ ಹೋಯಿತು. ಆನಂದಲಹರಿಯು ಉಕ್ಕಿ ಹರಿಯಿತು. ನಾನು ಲತಾಂಗಿಯ ಬೈತಲೆಯನ್ನು ನೇವರಿಸಿದೆ. ಅವಳು ಶಾಂತತೆಯಿಂದ ನನ್ನ ತೊಡೆಯಮೇಲೆ ತಲೆಯಿಟ್ಟು ಒರಗಿದಳು ಅವಳ ಕಣ್ಣುಗಳಿಂದ ಕೃತಜ್ಞತೆಯ ಧಾರೆಯು ಹರಿಯುತ್ತಿದ್ದಿತು. ನಾನದನ್ನು ಕರವಸ್ತ್ರದಿಂದಒರಸುತ್ತ "ಮಲ್ಲಿಕ್ಕನ ಮತ್ತು ಕುಬ್ಜೆಯ ಹತ್ಯೆಯು ನಿನ್ನಿಂದಲೇ ಅಲ್ಲವೆ?" ಎಂದೆ. ಇಲ್ಲ ಎಂದಳು ಅವಳು ಮೆಲುದನಿಯಲ್ಲಿ. "ಹಾಗಾದರೆ?" ನಾನುಮತ್ತೆಕೇಳಿದೆ "ನನ್ನನ್ನು ಗುಲಾಮು ಅವರಿಬ್ಬರ ತಲೆಯನ್ನೂ ತರಿದನು" ಎಂದಳವಳು. "ಹೌದೆ?" ಎನ್ನುತ್ತ ನಾನವಳನ್ನು ಮುತ್ತಿಟ್ಟೆ.

## ೨೩

ತನ್ನ ಕಥೆಯನ್ನೂ ಮುಗಿಸಿದನಂತರ ರಾಜಕುಮಾರಿ ಹೇಳಿದಳು: "ಮಲ್ಲಿಕ್ ಹಸನನೂ ಅವನ ಪ್ರೇಯಸಿ ಆ ಕುರೂಪಿ ಕುಬ್ಜೆ—ಇವರಿಬ್ಬರೂ ನಿಷ್ಕಾರಣವಾಗಿ ನನಗುಂಟುಮಾಡಿದ ಘಾತಕ್ಕಾಗಿ ಅವರಮೇಲೆ ಸೇಡು ತೀರಿಸಿ ಕೊಳ್ಳಲು ನಾನು ಹಾತೊರೆಯುತ್ತಿದ್ದೆ. ನನ್ನ ತಂದೆಯಾದ ಡಮಾಸ್ಕಸ್ ಸುಲ್ತಾನನು ಆ ಸಮಯದಲ್ಲಿ ದೇಶ ಸಂಚಾರಕ್ಕೆ ಹೊರಟು ಹೋಗಿದ್ದನು. ನನಗೊದಗಿದ ಆಪತ್ತು, ನೀನು ಮಾಡಿದ ಉಪಕಾರ, ವಂಚಕರಿಗೆ ನಾನು ಮಾಡಲೆಳಸಿದ ಪ್ರತೀಕಾರ, ಅದಕ್ಕಾಗಿ ಮಲ್ಲಿಕ್ಕನನ್ನು ಕರೆತರಲು ನಿನ್ನನ್ನು ಒಪ್ಪಿಸಿ ಸಹಾಯ—ಹೊಂದಲು ನಾನು ಹೂಡಿದ ಹಂಚಿಕೆ, ನಾನಿದ್ದಮನೆ—ಇವೇ ಮುಂತಾದೆಲ್ಲ ವ್ಯವಹಾರಗಳನ್ನೂ ಸಿದ್ದಿಬಹಾರನ ಮುಖೇಣ ನನ್ನ ತಾಯಿಗೆ ತಿಳಿಯಪಡಿಸಿದ್ದೆ. ಅವಳು ಅರಮನೆಯ ನೌಕರರನ್ನೂ ಊಳಿಗದವರನ್ನೂ, ವಸ್ತು ವಸ್ತ್ರಗಳನ್ನೂ ಕಳುಹಿಸಿಕೊಟ್ಟು ಔತಣಕೂಟವು ಅಂತ್ಯಾತ ಸಂಭ್ರಮ ವಿಜೃಂಭಣೆಗಳಿಂದ ನಡೆಯುವಂತೆ ಸಹಾಯ ಮಾಡಿದಳು. ಮಲ್ಲಿಕ್ಕನನ್ನೂ ಅವನ ಕರಿಯ ನಾಯಕಿಯನ್ನೂ ಕರೆತರಲು ನೀನು ಸಹಾಯ ಮಾಡಿದೆ. ಆ ನೀಚವಂಚಕರು ರಕ್ತದಲ್ಲಿ ಕತ್ತಿಯನ್ನು ತೋಯಿಸಲು ನನ್ನ ಮನಸ್ಸೊಪ್ಪಲಿಲ್ಲ. ನನ್ನ ಇಂಗಿತವನ್ನರಿತ ಗುಲಾಮನೇ ಕಣ್ಣುಮುಚ್ಚಿತೆರೆಯುವುದರೊಳಗೆ ಕುಡಿದು ಪ್ರಜ್ಞೆತಪ್ಪಿ ಬಿದ್ದಿದ್ದ ಅವರಿಬ್ಬರ ರುಂಡಗಳನ್ನೂ ತರಿದು, ರತ್ನಗಂಬಳಿಯಲ್ಲಿ ಸುರುಳಿಸುತ್ತಿ ಶವಗಳನ್ನೂ ಮೂಲೆಗೊತ್ತರಿಸಿದ್ದನು. ನಿನ್ನ ಉಪಕಾರಕ್ಕೆ ನಾನು ಉಸಿರಿರುವ ತನಕ ಋಣಿ, ನೀನೀಗ ನನ್ನ ಪತಿ; ನನ್ನ ಯಜಮಾನ. ರಾಜಕುಮಾರಿಯಾದರೂ ನಿನ್ನ ಪತ್ನಿಯಾದ ನಾನು ನಿನ್ನ ಚರಣ ದಾಸಿ, ನಿನ್ನ ಆಜ್ಞೆಯಂತೆ ನಾನು ನಡೆಯುತ್ತೇನೆ."

ನನ್ನ ಮಡದಿಯ ಮಾತನ್ನು ಕೇಳಿ ನನಗೆ ಆನಂದವು ಉಕ್ಕಿ ಹರಿಯಿತು. ಅವಳಲ್ಲುಂಟಾದ ಮಾರ್ಪಾಡಿಗೆ ನಾನು ದೇವರನ್ನು ವಂದಿಸಿದೆ. ಡಮಾಸ್ಕಸ್ಸನ್ನೂ ಬಿಟ್ಟು ನಾವಿಬ್ಬರೂ ನಮ್ಮ ದೇಶಕ್ಕೆ ಹೋಗಿಬಿಡಬೇಕೆಂದು ಅವಳು ಸೂಚಿಸಿದಳು. ಅದಕ್ಕೆ ಕಾರಣವಾದರೂ ಇಷ್ಟೇ, ನಮ್ಮಿಬ್ಬರ ಮದುವೆಯೂ ನ್ಯಾಯ ಸಮ್ಮತವಾಗಿ ನೆರವೇರಿದ್ದರೂ ಅದು ರಹಸ್ಯವಾಗಿ ಮುಗಿದಿತ್ತು. ಅದಕ್ಕಾಗಿ ಅವಳು ಹುಟ್ಟೂರಿನಲ್ಲಿ ನಿಲ್ಲಲು ಅನುಮತಿಸಲಿಲ್ಲ.

"ನನ್ನ ಜನ್ಮಭೂಮಿಗಿಂತಲೂ, ಜನ್ಮದಾತರಿಗಿಂತಲೂ, ಪುನರ್ಜನ್ಮವನ್ನು ನೀಡಿ ಕೈಹಿಡಿದು ಉದ್ಧರಿಸಿದ ನೀನೇ ನನಗೆ ಹೆಚ್ಚು ನಿನ್ನನ್ನಗಲಿ ಇರಲಾರೆ. ನಡೆ, ನಿಮ್ಮ ನಾಡಿಗೆ ಹೋಗುವ" ಎಂದಳು ನನ್ನ ಹೃದಯೇಶ್ವರಿ!

ಒಡನಾಡಿ ಫಕೀರರೇ! ನಾನು ನನ್ನ ಪತ್ನಿಯ ಸಲಹೆಯನ್ನು ಅಂಗೀಕರಿಸಿದೆನು. ಅವಳು ತಕ್ಷಣವೇ ಅನೇಕ ಅಮೂಲ್ಯ ಆಭರಣಗಳನ್ನೂ, ಅಪಾರ ದ್ರವ್ಯವನ್ನೂ ಸಿದ್ಧಗೊಳಿಸಿಕೊಂಡಳು. ಎರಡು ಉತ್ತಮಾಶ್ವಗಳನ್ನೂ ತರಿಸಿ ಧನಕನಕ ವಸ್ತ್ರಭೂಷಣಗಳನ್ನು ಸರಿಸಮನಾಗಿ ಅವುಗಳೆರಡರಮೇಲೂ ಹೇರಿಸಿದಳು. ನಾವಿಬ್ಬರೂ ಒಂದೊಂದು ಅಶ್ವವನ್ನು ಹತ್ತಿ ಡಮಾಸ್ಕಸ್ಸಿಗೆ ಸಲಾಂ ಹೇಳಿ ಅತಿವೇಗದಿಂದ ನಮ್ಮಾನಾಡಿನ ಕಡೆ ಹೊರಟೆವು.

ಹೊರಡುವ ಮುನ್ನ ರಾಜಕುಮಾರಿಯು ತನ್ನ ಪರಿಚಯವನ್ನು ಮರೆಸಿಕೊಳ್ಳ ಬಯಸಿದಳು. ಏತಕ್ಕೆಂದು ನಾನು ಕೇಳಿದೆ. ತಮ್ಮನಾಡಿನ ನಾಯಕರಾಗಲಿ, ಅಧಿಕಾರಿಗಳಾಗಲಿ ತನ್ನನ್ನು ಗುರುತಿಸಬಾರದು. ಹಾಗವರು ಗುರುತಿಸಿದರೆ ತನ್ನ ತಂದೆಯಾದ ಸುಲ್ತಾನನಿಗೆ ನಮ್ಮ ವಿವಾಹವಾದ ಸುದ್ದಿಯನ್ನು ಮುಟ್ಟಿಸಿಯಾರು. ರಾಜಮನೆತನಕ್ಕೆ ಕಲೆಯದ, ಮಂತ್ರಿ ಪ್ರಧಾನಿಗಳಂತಹ ಕುಲೀನ ಕುಲಕ್ಕೂ ಸೇರಿದ, ಕೊನೆಗೆ ರಾಷ್ಟ್ರದ ಯಾವುದಾದರೂ ಉನ್ನತ ನಾಯಕರ ಮನೆತನಕ್ಕೂ ಸಂಬಂಧಿಸದ, ಅನ್ಯದೇಶದ, ಅಪರಿಚಿತ, ಅನಾಮಧೇಯನೊಬ್ಬನನ್ನೂ ನಾನು ರಹಸ್ಯವಾಗಿ ವಿವಾಹ ಮಾಡಿಕೊಂಡೆನೆಂದು ನನ್ನ ತಂದೆ, ಕುಪಿತನಾದಾನು. ಅಷ್ಟಕ್ಕೆ ನಿಲ್ಲದೆ ನಮ್ಮಿಬ್ಬರನ್ನೂ ಅವಿಧೇಯರೆಂದೂ, ದ್ರೋಹಿಗಳೆಂದೂ ಬಗೆದು ನಮಗೆ ಕ್ರೂರದಂಡನೆಯನ್ನೂ ವಿಧಿಸಿಯಾನು. ಕೊನೆಗೆ ನಮ್ಮನ್ನು ಮರಣ ಶಿಕ್ಷೆಗೂ ಗುರಿಪಡಿಸಿಯಾನು. ಆದುದ

ರಿಂದ ತಾನು ಪುರಷ ವೇಷಧಾರಿಯಾಗಿ ತನ್ನ ಪ್ರೀತಿಪಾತ್ರ ಪತಿಯಾದ ನನ್ನೊಡನೆ ನಗರವನ್ನು ದಾಟಿ ಆದಷ್ಟು ಬೇಗ ನಮ್ಮ ನಾಡಿನಕಡೆ ಹೊರಟುಹೋಗವುದು ಮೇಲೆಂದು ವಾದಿಸಿದಳು.

ನನ್ನ ಪತ್ನಿಯ ವಾದವು ಸಮಯೋಚಿತವೂ ಸಮಂಜಸವೂ ಆದುದೆಂದು ಪರಿಗಣಿಸಿ ನಾನದಕ್ಕೆ ಸಮ್ಮತಿಸಿದೆನು. ಸುಂದರಿಯು ಪುರುಷ ವೇಷಧಾರಣೆಯನ್ನು ಮಾಡಿ ನನ್ನ ಬಳಿ ಬಂದಾಗ ಅವಳನ್ನು ಕಂಡು ನಾನೇ ಭ್ರಮಿಸಿ ಹೋದೆ. ಆವಳ ಚಾತುರ್ಯವು ಎಷ್ಟರ ಮಟ್ಟಿನದು—ಕಲಾಕೌಶಲ್ಯವು ಎಷ್ಟು ಉನ್ನತ ಮಟ್ಟದ್ದು ಎಂದು ನಾನು ಬೆರಗಾದೆ. ಅಚ್ಚುಮೆಚ್ಚಾಗಿ ಕೃತಕ ಗಡ್ಡಮೀಸೆಗಳನ್ನು ಧರಿಸಿ, ಕತ್ತಿ, ಕವಚ, ಗುರಾಣಿ, ಭಲ್ಲೆ, ಈಟಿ, ಭರ್ಜಿ, ಮುಂತಾದ ರಣವೀರರಿಗೆ ಯೋಗ್ಯವಾದ ಅಸ್ತ್ರಶಸ್ತ್ರಗಳನ್ನು ಧರಿಸಿ ಸೇನಾನಾಯಕನ ಉಡುಪಿನೊಂದಿಗೆ ಅವಳು ನನ್ನೆದುರಿಗೆ ಬಂದು ನಿಂತಾಗ ನಾನವಳನ್ನೂ ನಿಜವಾಗಿಯೂ ಗುರುತಿಸಲಾರದೆ ಹೋದೆ. ಹಾಗೂ ನಾನು ಅವಳಿಗೆ "ಬಿಲ್ಲು ಬಾಣಗಳನ್ನೂ ಧರಿಸಿದರೆ ವೇಷಧಾರಣೆಯು ಸಂಪೂರ್ಣವಾದೀತು" ಎಂದು ಸೂಚಿಸಿದೆ. ಅವಳು ಅದನ್ನು ಅನುಮೋದಿಸಿ ಧನುಸ್ಸನ್ನು ಧರಿಸಿ, ಬಾಣ ಬತ್ತಳಿಕೆಗಳನ್ನೂ ಸಜ್ಜುಪಡಿಸಿಕೊಂಡಳು.

ನಾವು ಹತ್ತಿದ್ದ ಕುದುರೆಗಳು ಅತ್ಯುತ್ತಮವಾದುವು. ಆವು ನಾಗಾಲೋಟದಿಂದ ಓಡಿದುವು. ದಾರಿಯುದ್ದಕ್ಕೂ ನಾವು ಸಂತೋಷವಾಗಿ ಇಬ್ಬರನ್ನು ಬಿಡದೆ ಒಬ್ಬರು ಹೆಚ್ಚು ಕಮ್ಮಿ ಕೂಡಕೂಡವೇ ಹೋದೆವು. ಅಲ್ಲಲ್ಲಿ ವಿಶಾಲ ವೃಕ್ಷಗಳ ನೆರಳಿನಲ್ಲಿ, ನದೀ ನದಗಳ ದಡದಲ್ಲಿ, ಬುಗ್ಗೆಗಳ ಬದಿಯಲ್ಲಿ, ಮಸೀದಿಗಳ ಹೊರಭಾಗದಲ್ಲಿ ತಂಗುತ್ತಿದ್ದೆವು. ಅಲ್ಲಲ್ಲಿ ದೊರಕುವ ಹಣ್ಣು ಹಂಪಲುಗಳನ್ನೂ, ಊಟದ ಸಾಮಗ್ರಿಗಳನ್ನೂ ಕೊಳ್ಳುತ್ತಿದ್ದೆವು. ತಂಗಿದೆಡೆಗಳಲ್ಲಿ ಹೊಟ್ಟೆ ತುಂಬ ಊಟಮಾಡಿ, ಸಂತೋಷದಿಂದ ಮಾತುಕತೆಗಳನ್ನಾಡುತ್ತ ಸುಖವಾಗಿ ವಿಶ್ರಾಂತಿ ಪಡೆಯುತ್ತಿದ್ದೆವು. ನಮ್ಮ ಕುದುರೆಗಳೂ ದಣಿವಾರಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ಕಲ್ಪಿಸಿ ಕೊಟ್ಟೆವು. ಕೆಲ ಪ್ರದೇಶಗಳಲ್ಲಿ ಕುದುರೆಗೆ ಮಾಲೀಸು ಮಾಡಿ ಹುಲ್ಲು ಹುರುಳಿ ತಿನ್ನಿಸುವ ಸೇವಕರೂ ದೊರೆತದ್ದು ನಮ್ಮ ಸುಯೋಗವೆಂದೇ ಹೇಳಬೇಕು.

ಒಮ್ಮೆ ಒಂದು ಕೌತುಕವು ನಡೆಯಿತು. ದಾರಿಯಲ್ಲಿ ಒಂದೆಡೆ ಒಂದು ವಿಶಾಲ ವೃಕ್ಷವನ್ನು ಕಂಡೆವು. ಅದರ ನೆರಳು ನಮ್ಮನ್ನು ಆಕರ್ಷಿಸಿತು. ನನ್ನ ಪ್ರಾಣೇಶ್ವರಿಯು ನಾವಿಲ್ಲಿ ಸ್ವಲ್ಪಕಾಲ ವಿಶ್ರಮಿಸಿಕೊಳ್ಳೋಣ ಎಂದಳು. ನಾವಿಬ್ಬರೂ ನಮ್ಮ ಕುದುರೆಗಳಿಂದ ಇಳಿದೆವು. ಪಕ್ಕದಲ್ಲಿ ಹಚ್ಚಹಸಿರು ಹುಲ್ಲು ಬೆಳೆದಿತ್ತು. ಕುದುರೆಗಳು ಆನಂದದಿಂದ ಮೇಯತೊಡಗಿದುವು. ಸ್ವಲ್ಪದೂರದಲ್ಲಿ ಒಂದು ಬುಗ್ಗೆ ಇರುವುದಾಗಿ ಕಂಡಿತು. ನಾನು ಹೂಜಿಗಳನ್ನು ಹೊತ್ತು ನೀರು ತರಲಿಕ್ಕೆ ಹೋದೆ ನಾನೆಣಿಸಿದಂತೆ ಬುಗ್ಗೆ ಹತ್ತಿರದಲ್ಲಿರಲಿಲ್ಲ. ಸ್ವಲ್ಪ ಹೆಚ್ಚಾಗಿಯೇ ನಡೆದು ಹೋಗಬೇಕಾಗಿತ್ತು. ಹೇಗೂ ನೀರು ಸ್ವಚ್ಛವಾಗಿತ್ತು. ನನ್ನ ದಣಿವಾರುವಷ್ಟು ನೀರನ್ನು ಕುಡಿದು ಹೂಜಿಗಳನ್ನು ತುಂಬಿಕೊಂಡು ಹಿಂತಿರುಗಿದೆ. ವೃಕ್ಷದಬಳಿ ಬಂದಾಗ ಸುಂದರಿ ತನ್ನ ಕುದುರೆಯೊಡನೆ ಮಾಯವಾಗಿದ್ದಳು. ನನಗೆ ಎದೆಯಲ್ಲಿ ಧಿಗ್ಗೆಂದಿತು. ಕೊನೆಗೂ ಮೋಸವಾಯಿತಲ್ಲ ಎಂದು ಸುತ್ತುಮುತ್ತ ಹುಡುಕಿದೆ. ಎಲ್ಲಿಯೂ ಅವಳ ಸುಳಿವೇ ಕಾಣಿಸಲಿಲ್ಲ. ಅವಳ ಅಗಲಿಕೆಯಿಂದ ನನ್ನ ತಲೆಯ ಮೇಲೆ ಸಿಡಿಲು ಬಡಿದಂತಾಯಿತು. ಹೀಗೆ ಹೆಚ್ಚುಹೊತ್ತೇನೂ ಕಳೆದಿರಲಾರದು. ಕ್ಷಣಕಾಲ ನಾನವಳ ಆಸೆಯನ್ನು ತೊರೆದು ಮುಂದೇನು ಮಾಡಲಿ ಎಂದು ಆಲೋಚಿಸುತ್ತಿದ್ದೆ. ಆಗ ವೃಕ್ಷದ ಹಿಂಭಾಗದಲ್ಲಿ ಯಾರೋ ನನ್ನನ್ನು ಕಂಡು ಗಹಗಹಿಸಿ ನಕ್ಕಂತಾಯಿತು. ಹೋಗಿ ನೋಡಿದೆ – ನನ್ನಪತ್ನಿ ! ನನಗೆ ಆಶ್ಚರ್ಯವಾಯಿತು. ಏನಿದು ನಿನ್ನ ವಿನೋದ ಎಂದು ಕೇಳಿದೆ. 'ನಿನ್ನ ಪ್ರೀತಿಯನ್ನು ಈ ಸಲ ಪರೀಕ್ಷಿಸಬೇಕೆಂದು ಹೀಗೆ ಮಾಡಿದೆ' ಎಂದಳವಳು. 'ಕುದುರೆಯೆಲ್ಲಿ ?' ಎಂದು ಕೇಳಿದೆ. ಅದಕ್ಕೆ ನೀರು ಕುಡಿಸಿಕೊಂಡು ಬಂದೆ. ಅದೋ ಅಲ್ಲಿ ಮೇಯುತ್ತಿದೆ ಕಾಣುವುದಿಲ್ಲವೇ ?' ಎಂದು ಮತ್ತೆ ನಕ್ಕಳು. ಅವಳ ರಸಿಕತೆಯನ್ನೂ, ಪ್ರಾಣಿಗಳ ಮೇಲಣ ಪ್ರೇಮವನ್ನೂ ಕಂಡು ನಾನು ಸಂತಸಗೊಂಡೆ. ಬಳಿಕ ಹತ್ತಿರದಲ್ಲೇ ಇದ್ದ ಆ ಚಿಲುಮೆಯಲ್ಲಿ ನಾನೂ ನನ್ನ ಕುದುರೆಗೆ ನೀರು ಕುಡಿಸಿದೆ. ಪೂರ್ಣವಿಶ್ರಾಂತಿಯು ದೊರೆತನಂತರ ನಾವಿಬ್ಬರೂ ಮತ್ತೆ ನಮ್ಮ ಪ್ರಯಾಣವನ್ನು ಮುಂದುವರಿಸಿದೆವು.

ಮತ್ತೊಂದೆಡೆ ಒಂದು ಊರು ಕಾಣಿಸಿತು. ಊರಹೊರಗೆ ಒಂದು ವಿಶಾಲವಾದ ಭವನ. ಅದು ನಿರ್ಜನವಾಗಿದ್ದಿತ್ತು. ದಾರಿಗರಾದ ನಮ್ಮಿಬ್ಬರನ್ನೂ

ಕಂಡು ಭವನದ ಕಾವಲುಗಾರನಾದ ಒಬ್ಬ ಮುದಿಗುಲಾಮನು ನಮ್ಮ ಬಳಿ ಬಂದು ಮರ್ಯಾದೆಯಿಂದ 'ಸಲಾಂ' ಮಾಡಿದನು. ಆಗ ಕತ್ತಲೆ ಕವಿಯು ವುದರಲ್ಲಿತ್ತು. ಈ ಭವನವು ನನ್ನ ಕಾವಲಿನಲ್ಲಿದೆ. ಬಾಡಿಗೆ ಕೊಟ್ಟು ಪ್ರಯಾಣಿಕರು ಇಲ್ಲಿ ತಮಗೆ ಬೇಕಾದಷ್ಟು ದಿನ ತಂಗಬಹುದು ಎಂದು ಅವನು ಹೇಳಿದ. ನನ್ನ ಪತ್ನಿ ನನ್ನನ್ನು ಕಂಡು ಸನ್ನೆಮಾಡಿದಳು. ಗುಲಾಮ ನನ್ನು ಕುರಿತು ನಾನು 'ಆಗಲಿ' ಎಂದೆ. ನಾವಿಬ್ಬರೂ ಭವನದ ಬಳಿ ಹೋದೆವು. ಸೇವೆಗೆ ನಾಲ್ಕಾರು ಗುಲಾಮರು ಸಿದ್ಧನಾಗಿದ್ದರು. ಜೀನುಗಳನ್ನು ಭವನ ದೊಳಗೆ ಕೊಂಡು ಹೋಗಿ ಇಟ್ಟರು.

ಕುದುರೆಗಳನ್ನು ಲಾಯದಲ್ಲಿ ಬಿಟ್ಟೆವು. ಸಾಕಷ್ಟು ಹೊನ್ನನ್ನು ವೆಚ್ಚಕ್ಕೆ ಕೊಟ್ಟೆವು. ಕುದುರೆಗಳಿಗೆ ಏಳೆಂಟು ದಿವಸಗಳಿಗೆ ಬೇಕಾದಷ್ಟು ಹುಲ್ಲು, ಹುರುಳಿ, 'ಓಟ್ಸ್' ಎಲ್ಲಾ ದೊರಕಿದುವು.

ನಾವು ಭವನದೊಳಗೆ ಹೊಕ್ಕೆವು. ಒಳಗಡೆ ಎಲ್ಲಾ ಸುಸಜ್ಜಿತವಾಗಿತ್ತು. ಮಂಚಗಳು, ಹಾಸಿಗೆಗಳು, ಒರಗು ದಿಂಬುಗಳು, ತಲೆದಿಂಬುಗಳು, ನೀರಿನ ಹೂಜಿಗಳು, ಅಡುಗೆಯ ಪಾತ್ರೆಗಳು—ಏನುಬೇಕೋ, ಎಲ್ಲಾ ನಾನೂ ನನ್ನ ಪತ್ನಿಯೂ ಆ ಭವನದಲ್ಲೇ ಏಳೆಂಟು ದಿನಗಳು ತಂಗಿದ್ದು ಸುಧಾರಿಸಿಕೊಳ್ಳ ಬೇಕೆಂದು ತೀರ್ಮಾನಿಸಿದೆವು. ಕೈಬಿಚ್ಚಿ ಗುಲಾಮರಿಗೆ ಹೊನ್ನನ್ನು ಕೊಟ್ಟೆವು. ಅವರು ಊರೊಳಗೆ ಹೋಗಿ ಹಾಲು, ಹಣ್ಣು ರೊಟ್ಟಿ ಮಾಂಸ ಮುಂತಾದುವನ್ನು ತಂದು ಕೊಟ್ಟರು. ಹೊಟ್ಟೆತುಂಬ ಊಟಮಾಡಿ, ಸಂತಸದಿಂದ ಮಾತುಕತೆ ಗಳನ್ನಾಡುತ್ತ ಆನಂದ ವಿನೋದಗಳಿಂದ ಆರಾತ್ರಿಯನ್ನು ದೂಡಿದೆವು. ನನ್ನ ಇಡೀ ಜೀವಮಾನದಲ್ಲೇ ಆ ರಾತ್ರಿಯಂತಹ ಅತ್ಯಂತ ಆನಂದದ ಕಾಲವನ್ನು ಮತ್ತೊಮ್ಮೆ ಕಾಣಲಾರೆ ಎಂದೆನ್ನಿಸುತ್ತದೆ.

ಮರುದಿನ ನಾವು ಹೊಸ ಉಡುಪುಗಳನ್ನು ಊರಿನಿಂದ ತರಿಸಿಕೊಂಡೆವು. ಸ್ನಾನಮಾಡಿ ಊಟ ಮುಗಿದಮೇಲೆ ಮತ್ತೆ ಕೋಲಾಹಲವಾಗಿ ಸರಸಸಲ್ಲಾಪ ಗಳಲ್ಲಿ ಕಾಲವನ್ನು ಕಳೆಯುತ್ತಿದ್ದೆವು. ನನ್ನ ಪತ್ನಿಯು ಆಗ ನನ್ನಲ್ಲಿ ಹೇಳಿದಳು:

"ನೋಡು, ನಾನು ನಿನಗಾಗಿ ನನ್ನ ಜನ್ಮಭೂಮಿಯನ್ನು, ಹೆತ್ತವರನ್ನು ರಾಜಭೋಗವನ್ನು—ಎಲ್ಲವನ್ನೂ ಬಿಟ್ಟು ಬಂದಿರುವೆನು. ನೀನೇ ನನ್ನ

ಸರ್ವಸ್ವವೆಂದು ನಾನು ಭಾವಿಸಿರುವೆನು. ಮದುವೆಗೆ ಮುನ್ನ ನೀನು ನನ್ನ ದಾಸನಂತೆ ವರ್ತಿಸುತ್ತಿದ್ದೆ. ಮದುವೆಯಾದ ನಂತರ ನಾನು ನಿನ್ನ ದಾಸಿಯಂತೆ ವರ್ತಿಸುತ್ತಿದ್ದೇನೆ. ನನ್ನ ಸಂಪತ್ತು, ಕೀರ್ತಿ, ಎಲ್ಲವನ್ನೂ ತೊರೆದು ನಿನ್ನನ್ನೇ ದೃಢವಾಗಿ ನಂಬಿ ಬಂದಿದ್ದೇನೆ. ಆ ದುಡುಕ, ಸಿಡುಕ, ವಂಚಕ—ದ್ರೋಹಿ ಮಲ್ಲಿಕ್ಕನು ಮಾಡಿದಂತೆ ಎಲ್ಲಿಯಾದರೂ ಮಾಡೀಯೆ – ಎಚ್ಚರಿಕೆ!" ಎಂದಳು.

ಅವಳ ಸಂಶಯವನ್ನು ಕಂಡು ನನಗೆ ತಾಳಲಾರವಷ್ಟು ಸಂಕಟವುಂಟಾಯಿತು. ಇವಳೇಕೆ ಮಲ್ಲಿಕ್ಕನೊಡನೆ ನನ್ನನ್ನು ಹೋಲಿಸಿ ಎಚ್ಚರಿಸಬೇಕು ಎಂದು ನನಗರ್ಥವಾಗಲಿಲ್ಲ. ಆದರೂ ಸ್ವಲ್ಪ ದೀರ್ಘವಾಗಿ ಆಲೋಚನೆ ಮಾಡಿ ನೋಡಿದ್ದರಲ್ಲಿ ಅವಳು ಹೇಳಿದ್ದು ಅಸಮಂಜಸವಲ್ಲ ಎಂದು ನನಗೆ ಅರಿವಾಯಿತು. ಮದುವೆಗೆ ಮುನ್ನ ಅವಳು ನನ್ನಲ್ಲಿ ತೋರಿದ ಧಿಕ್ಕಾರದಿಂದ ನನಗೆ ಮನಸ್ಸಿನಲ್ಲಿ ಖೇದವೂ, ಬಾಳಲ್ಲಿ ಬೇಸರವೂ ಪ್ರಬಲವಾಗಿ ತಲೆದೋರಿತ್ತು ನಿಜ. ಆದರೆ ಅವಳ ಮನಸ್ಸು ಮಾರ್ಪಟ್ಟು, ನನ್ನಲ್ಲಿ ಒಲಿದು ನನ್ನನ್ನು ಮದುವೆಯಾದನಂತರ ನಿಜವಾಗಿಯೂ ಅವಳು ತನ್ನ ಅಧಿಕಾರವನ್ನು ತ್ಯಜಿಸಿದಳು; ದರ್ಪದಿಂದ ದೂರವಾದಳು. ದಯಾಭರಿತಳಾದಳು; ಹೆಚ್ಚೇಕೆ? ಅವಳು ನಿಜವಾಗಿಯೂ ಅಂದಿನಿಂದ ಈಕ್ಷಣದವರೆಗೆ ನನ್ನ ಮಾತಿಗೆ ವಿರೋಧ ನುಡಿಯಲಿಲ್ಲ. ಬದಲಾಗಿ ನನ್ನ ದಾಸಿಯಂತೆ, ವರ್ತಿಸುತ್ತಿರುವಳು. ನನ್ನ ನೆರಳಿನಂತೆ ನನ್ನನ್ನು ಹಿಂಬಾಲಿಸುತ್ತಿರುವಳು. ನನಗಾಗಿ ಅವಳು ತನ್ನ ರಾಜ್ಯವನ್ನೂ, ಕೋಶವನ್ನೂ, ತಾಯ್ತಂದೆಯರನ್ನೂ, ಪದವಿಯನ್ನೂ, ಕೀರ್ತಿಯನ್ನೂ, ದಿವ್ಯವಾದ ಭವನವನ್ನೂ, ಸೇವಕ ವೃಂದವನ್ನೂ—ಎಲ್ಲವನ್ನೂ ತೊರೆದು ಬಂದಿರುವಳು. ಮಾರ್ಗಾಯಾಸವನ್ನು ಗಮನಿಸದೆ ನನಗೆ ಸರಿಸಮನಾಗಿ ಕುದುರೆಯ ಸವಾರಿ ಮಾಡುತ್ತ ಬರುತ್ತಿರುವಳು. ಇಂತಹ ಪ್ರೇಮದ ಕಣಿಗೆ ನಾನು ದ್ರೋಹಮಾಡಲೇ?

ನನ್ನ ಆಳವಾದ ಯೋಚನೆಯನ್ನು ಕಂಡು ರಾಜಕುಮಾರಿ ಕೇಳಿದಳು. "ಏನು? ನಾನು ಕೇಳಿದ್ದು ತಪ್ಪಾಯಿತೇ? ತಪ್ಪಾಗಿದ್ದರೆ ಮನ್ನಿಸು." ಅವಳ ದೀನ ನುಡಿಯನ್ನೂ ನಮ್ರ ಭಾವವನ್ನೂ ಕಂಡು ಅವಳಲ್ಲಿ ನನಗಿದ್ದ ಪ್ರೇಮವು ಅಧಿಕರಿಸಿತು. ಪ್ರೇಮದ ಭರದಲ್ಲಿ ಅವಳನ್ನು ಗಾಢವಾಗಿ ಆಲಂಗಿಸಿ ಹೇಳಿದೆ:

"ನನ್ನ ಜೀವಿತ ಸರ್ವಸ್ವವೇ! ನಿನ್ನನ್ನು ನನ್ನ ಹೃದಯದ ರಾಣಿಯನ್ನಾಗಿ ಪಡೆಯಲು ನಾನು ಹೆಣಗಾಡಿದ ಅನೇಕಾನೇಕ ಸನ್ನಿವೇಶಗಳನ್ನು ಕಂಡೆಯಲ್ಲವೆ? ನೀನಾಗಿ ಒಲಿದು ನನಗೆ ಪ್ರೇಮ ಭಿಕ್ಷೆಯನ್ನು ನೀಡದಿದ್ದರೆ ನಾನು ಸಾಯುವುದಕ್ಕೆ ಸಿದ್ಧವೆಂದು ಹೇಳಿ ಕಾಡುಗುಡ್ಡಗಳಲ್ಲಿ ಹುಚ್ಚನಂತೆ ಅಲೆದು, ಅನ್ನ ನೀರುಗಳನ್ನು ತೊರೆದು, ಕೊರಗಿ, ಕೃಶನಾಗಿ, ಮೇಲೇಳಲು ಚೈತನ್ಯವಿಲ್ಲದೆ ನಿನ್ನ ಭವನದ ಮುಂದೆ ಮರದಡಿಯಲ್ಲಿ ಬಿದ್ದಿದ್ದುದನ್ನು ನೀನು ಮರೆತಿರಬಹುದೇ? ಇಷ್ಟಾದರೂ ಮಲ್ಲಿಕ್ಕನಂತೆ ನಾನು ನಿನಗೆ ದ್ರೋಹ ಮಾಡತಕ್ಕವನೇ ಎಂಬ ವಿಚಾರವು ನಿನ್ನ ತಲೆಯೊಳಗೆ ಹೊಕ್ಕ ಬಗೆಯೆಂತು ಎಂದು ನಾನು ಯೋಚಿಸುತ್ತಿದ್ದೇನೆ. ಪ್ರಾಣೇಶ್ವರಿ! ಸುಮಧುರ ಪುಷ್ಪಗಳಿಂದ ಅಲಂಕರಿಸಲ್ಪಡಲು ಯೋಗ್ಯವಾದ ನಿನ್ನಂತಹ ಭುವನ ಮೋಹನ ಸುಂದರಿಯ ಸುಕೋಮಲ ಶರೀರವನ್ನು ಕಪಟದಿಂದ ಕೂರಲಗಿನ ಕತ್ತಿಯಿಂದ ತಿವಿದು ಕೋಟೆಯಾಚೆ ಎಸೆದವನು—ಆ ಕಡು ಪಾಪಿ—ಮಲ್ಲಿಕ! ನಿನ್ನ ದಾರುಣ ಸಂಕಟದಲ್ಲಿ ನಿನ್ನಲ್ಲಿ ಮರುಕಗೊಂಡು ಬತ್ತಿ ಹೋಗುತ್ತಿದ್ದ ನಿನ್ನ ಪ್ರಾಣವನ್ನು ನಿಲ್ಲಿಸಲು ನೆರವಾಗಲೆಂದು ದೇವರಿಂದಲೇ ಪ್ರೇರಿತನಾದವನು ನಾನು. ನಾನು ನಿನ್ನನ್ನು ಆ ಸಂಕಟಕರ ಪರಿಸ್ಥಿತಿಯಲ್ಲಿ ಕಾಣುವೆನೆಂದು ಕನಸು ಕಂಡಿದ್ದೇನೆ? ಡಮಾಸ್ಕಸ್ಸಿಗೆ ನಾನು ಬಂದದ್ದು ನನ್ನ ಸರಕುಗಳ ಮಾರಾಟಕ್ಕೆ. ಆ ನಿಶಿ ರಾತ್ರಿಯಲ್ಲಿ ಎಷ್ಟು ಬೇಡಿದರೂ ಕೋಟೆಯ ದ್ವಾರಪಾಲಕರು ನನ್ನನ್ನು ಒಳಗೆ ಬಿಡಲು ಒಪ್ಪಲಿಲ್ಲ. ಬಿಟ್ಟಿದ್ದರೆ ನಾನು ನೆಟ್ಟಗೆ ನಗರವನ್ನು ಪ್ರವೇಶಿಸುತ್ತಿದ್ದೆ. ಹಾಗೆ ಮಾಡಿದ್ದರೆ ನಿನ್ನನ್ನು ನಾನು ಸಂಧಿಸುವ ಅವಕಾಶವೇ ಇರುತ್ತಿರಲಿಲ್ಲ. ಬಳಲಿಕೆಯು ಮಿತಿಮೀರಿ ಹೇಳಿಕೇಳುವವರಿಲ್ಲದೆ ನೀನೂ ಮಣ್ಣುಪಾಲಾಗುತ್ತಿದ್ದೆ. ಪ್ರತಿಯಾಗಿ, ನಗರ ಪ್ರವೇಶಕ್ಕೆ ಅಡ್ಡಿಯುಂಟಾಗಲು ಕುದುರೆಯನ್ನು ಹಿಡಿದು ಅಡ್ಡಾಡುತ್ತ ನಿನ್ನನ್ನು ಪೆಟ್ಟಿಗೆಯಲ್ಲಿಳಿಸಿದ ಸಮಯಕ್ಕೆ ಸರಿಯಾಗಿ ಆ ಸ್ಥಳಕ್ಕೆ ಬಂದು ಸೇರಿದೆ. ಈ ಒಂದು ಸಂಘಟನೆ—ಒಂದು ಸಂಯೋಗವೇ ಸಾಲದೇ—ನೀನು ನನಗಾಗಿಯೂ—ನಾನು ನಿನಗಾಗಿಯೂ ದೇವರ ಇಚ್ಛೆಯಿಂದ ಹುಟ್ಟಿದವರು ಎಂದು ನಿರೂಪಿಸುವುದಕ್ಕೆ? ಮೇಲಾಗಿ ದೈವೇಚ್ಛೆಯಿಲ್ಲದಿದ್ದರೆ ನಾನು ನಿನ್ನನ್ನು ನೋಡುವಂತಿರಲಿಲ್ಲ. ನೀನು ನನ್ನನ್ನು ನೋಡುವ

ಮಾತು ಮೊದಲೇ ಇಲ್ಲ. ಹೀಗಿರುವಾಗ ನಿನ್ನ ಕೊಲೆಗೆ ಕೈಹಾಕಿದವನು ಮಲ್ಲಿಕ. ಅದನ್ನು ತಪ್ಪಿಸಬಂದವನು—ತಪ್ಪಿಸಿದವನು ದೇವರ ಕರುಣೆಗೆ ಪಾತ್ರನಾದ ನಾನು. ಮಲ್ಲಿಕನಂತೆ ನಾನು ದ್ರೋಹಮಾಡುವೆನೆಂದು ನಿನೇಣಿಸು ವುದಾದರೂ ಏತಕ್ಕೆ ನನ್ನ ಪ್ರಾಣಪ್ರಿಯೆ ?"

"ಬೇಡ ; ಹೆಚ್ಚು ಹೇಳಬೇಡ. ನಾನಾಡಿದುದು ತಪ್ಪಾಯಿತು. ನನ್ನದು ಅಜ್ಞಾನ. ನಿಮಿಷ ನಿಮಿಷಕ್ಕೂ ನಿನ್ನ ವಿವೇಕವೂ, ಉದಾರತೆಯೂ, ದಯಾದೃಷ್ಟಿಯೂ ನನ್ನದಕ್ಕಿಂತ ಎಷ್ಟೋಂದು ಹೆಚ್ಚಿನದೆಂದು ನನಗೆ ಎತ್ತಿ ಕಾಣುತ್ತದೆ. ನನ್ನನ್ನು ಮನ್ನಿಸು. ಇನ್ನೊಮ್ಮೆ ಹೀಗೆ ಮಾತನಾಡಲಾರೆ,"

ಹೀಗೆಂದು ಪಶ್ಚಾತ್ತಾಪದಿಂದ ನನ್ನ ರಮಣಿಯು ಕಂಬನಿಗರೆದಳು, ನಾನವಳ ಕಣ್ಣೀರನ್ನು ನನ್ನ ಕರವಸ್ತ್ರದಿಂದೊರಸುತ್ತ "ಎಂದೆಂದಿಗೂ ನಿನ್ನನ್ನು ನಾನು ಬಿಟ್ಟಗಲಲಾರೆ ನನ್ನ ಕಣ್ಮಣಿ! ನೀನು ಆ ವಿಚಾರದಲ್ಲಿ ಎಳ್ಳಷ್ಟೂ ಸಂಶಯಗೊಳ್ಳದಿರು " ಎಂದು ನಾನು ಹೊಸದಾಗಿ ಭರವಸೆಯನ್ನು ನೀಡಿದೆ. ನಾವು ತಂಗಿದ್ದ ಭವನದಲ್ಲಿ ಎಳೆಂಟು ದಿನಗಳು ನಮ್ಮ ಕಾಲವು ಅತ್ಯಂತ ಆನಂದದಿಂದ ಕಳೆದೆವು. ಅಂಗಾಂಗಗಳಿಗೆ ಸಾಕಷ್ಟು ವಿಶ್ರಾಂತಿ ದೊರೆತಂತಾ ಯಿತು. ನಮ್ಮ ಕುದುರೆಗಳೂ ಸಮೃದ್ಧಿಯಾದ ಮೇವು, ತೀನಿಗಳಿಂದ ಪುಷ್ಟಿ ಗೊಂಡುವು. ನಮ್ಮಿಬ್ಬರಲ್ಲಿಯೂ ನಮ್ಮ ಇರು ಕುದುರೆಗಳಲ್ಲಿಯೂ ಈಗ ನವ ಉತ್ಸಾಹ, ನವ ಚೈತನ್ಯ, ನವಸ್ಫೂರ್ತಿಗಳು ತುಂಬಿಹೋಗಿದ್ದುವು. ಭವನದ ಕಾವಲುಗಾರನಿಗೂ, ಇತರ ಗುಲಾಮರಿಗೂ ಯಥೇಚ್ಛವಾಗಿ ಬಹುಮಾನ ಗಳನ್ನು ಕೊಟ್ಟು, ಕುದುರೆಗಳನ್ನು ಹತ್ತಿ ನಾವು ನಮ್ಮ ಪ್ರಯಾಣವನ್ನು ಮುಂದುವರಿಸಿದೆವು.

ಅಲ್ಲಲ್ಲಿ ವಿಶ್ರಾಂತಿಗಾಗಿ ತಂಗುತ್ತ ನಾಲ್ಕು ದಿವಸಗಳನಂತರ ನಾವು ಸಿರಿಯ ಎಂಬ ಪ್ರಾಂತ್ಯದ ಒಂದು ಭಾಗವನ್ನು ಸೇರಿದೆವು. ಅಲ್ಲೊಂದು ತುಂಬಿದ ಅಗಲವಾದ ನದಿ. ಅದನ್ನು ದಾಟಿ ಹೋಗಬೇಕು. ಹೇಗೆ ಹೋಗುವುದು ? ನದಿ ದಡದಲ್ಲಿ ಅತಿ ವಿಶಾಲವಾದ ಒಂದು ಆಲದ ಮರ. ನಾವು ನಮ್ಮ ಕುದುರೆಗಳನ್ನು ಬಿಚ್ಚಿ ಆ ವೃಕ್ಷದಡಿ ಸ್ವಲ್ಪ ಹೊತ್ತು ಕುಳಿತು ವಿಶ್ರಮಿಸಿಕೊಂಡೆವು. ಪೆಡಂಭೂತದಂತೆ ನಮ್ಮೆದುರಿಗೆ ಸಮಸ್ಯೆ ! ನದಿಯನ್ನು

ದಾಟುವ ಬಗೆ ? ನನ್ನ ಪತ್ನಿ ಚತುರೆ. ನದಿ ಇದ್ದೆಡೆ ದೋಣಿ ಇದ್ದೇ ಇರಬೇಕು. ಸುತ್ತಮುತ್ತ ವಿಚಾರಿಸಿದರೆ ಗೊತ್ತಾಗುತ್ತದೆ'' ಎಂದಳು. ಅವಳ ಸೂಚನೆಯನ್ನು ಗ್ರಹಿಸಿ ನಾನು ದೋಣಿಯನ್ನೂ ಅಂಬಿಗರನ್ನೂ ಹುಡುಕುತ್ತ ಹೋದೆ. ಸ್ವಲ್ಪ ದೂರದಲ್ಲಿ ಅಂಬಿಗರು ನನಗೆ ಎದುರಾದರು. ನಮ್ಮನ್ನೂ ನಮ್ಮ ಕುದುರೆಗಳನ್ನೂ ತಮ್ಮ ದೊಡ್ಡದಾದ ದೋಣಿಯಲ್ಲಿ ದಾಟಿಸಿ ಆಚೆ ದಡಕ್ಕೆ ಕೊಂಡೊಯ್ಯಲು ಒಪ್ಪಿದರು. ಅನತಿ ದೂರದಲ್ಲಿದ್ದ ತಮ್ಮ ದೋಣಿಯನ್ನು ನಡೆಸಿಕೊಂಡುಬರಲು ಅವರು ಹೊರಟರು.

ಅಂಬಿಗರನ್ನು ಗೊತ್ತುಮಾಡಿ ನಾನು ಮತ್ತೆ ಆ ವಿಶಾಲವಾದ ವೃಕ್ಷದ ಬಳಿ ಬಂದು ಸೇರಿದೆ. ನಮ್ಮ ಎರಡು ಕುದುರೆಗಳೂ ನೆಮ್ಮದಿಯಾಗಿ ಮೇಯುತ್ತಿವೆ. ಆದರೆ....ಹಾಯ್ ! ಹಾಯ್ ! ಈಗಲೂ ನೆನೆಸಿಕೊಂಡರೆ ನನ್ನ ಒಡನಾಡಿಗಳೇ ! ನನ್ನ ಎದೆಯೊಡೆಯುತ್ತಿದೆ. ನನ್ನ ಪ್ರಾಣೇಶ್ವರಿ ಮಾಯವಾಗಿದ್ದಳು ! ಅವಳನ್ನು ಹುಡುಕಿದೆ, ಹುಡುಕಿದೆ, ಹಾಗೆ ಹುಡುಕಿದೆ. ಎಷ್ಟು ಹುಡುಕಿದರೂ ಅವಳ ಸುಳಿವೇ ಕಾಣಿಸಲಿಲ್ಲ. ಸುತ್ತಮುತ್ತ ನೋಡಿದೆ ; ಅರಚಿದೆ, ಅಂಗಲಾಚಿದೆ ; ಕೂಗಾಡಿದೆ. ಅವಳು ಕಾಣಿಸಲಿಲ್ಲ. ಮರಹತ್ತಿ ಸುತ್ತಲೂ ನೋಡಿದೆ ; ಎಲ್ಲೂ ಇಲ್ಲ. ಕುದುರೆಹತ್ತಿ ಬರಬರನೆ ಹುಡುಕಿದೆ. ನನ್ನ ಮೋಹನಾಂಗಿಯು ಎಲ್ಲೋ ಅಂತರ್ಧಾನವಾಗಿ ಹೋಗಿದ್ದಳು. ಅಷ್ಟರಲ್ಲಿ ಅಂಬಿಗರು ದೋಣಿಯನ್ನು ತಂದು ದಡದಲ್ಲಿ ನಿಲ್ಲಿಸಿ ನನ್ನನ್ನು ಕರೆದರು. ನನ್ನ ಪ್ರಾಣೇಶ್ವರಿಯನ್ನು ಬಿಟ್ಟು ನಾನು ಮಾತ್ರ ದೋಣಿಯಲ್ಲಿ ಎಲ್ಲಿಗೆ ಹೋಗಲಿ ? ಅವಳು ಕಣ್ಣಿಗೆ ಕಾಣಿಸದಿದ್ದರೆ ದೋಣಿಯಲ್ಲಿ ಹತ್ತುವುದಕ್ಕೆ ಬದಲು, ಆಳವಾದ ಆ ನದಿಯಲ್ಲಿ ಪ್ರಾಣಬಿಡುವುದೇ ಲೇಸು ಎಂದು ನನಗನ್ನಿಸಿತು. ಆದರೂ ಆಶೆ ಪ್ರೇರೇಪಿಸಿತು. ಅಂಬಿಗರಿಗೆ ಸಾಕಷ್ಟು ಹೊನ್ನನ್ನು ಬಹುಮಾನವಾಗಿ ಕೊಟ್ಟೆ. ಸುಂದರಿಯ ಗುರುತುಗಳನ್ನು ಹೇಳಿ ಅವಳನ್ನು ಹುಡುಕುವಂತೆ ಅಂಬಿಗರನ್ನು ನಾನಾಕಡೆ ಅಟ್ಟಿದೆ.

ಆದರೇನು ? ವಿಧಿಯವಿಲಾಸ ! ಅಂಬಿಗರು ತಗ್ಗಿಸಿದ ತಲೆಯೇ ಹೇಳಿತು ಅವರ ಹುಡುಕುವಿಕೆಯು ನಿಷ್ಫಲವಾಯಿತೆಂದು. ಏನು ಮಾಡಲೂ ತೋರದೆ ಹುಚ್ಚು ಹಿಡಿದಂತಹವನಾಗಿ, ತಲೆಗೂದಲನ್ನು ಕೆದರಿಕೊಂಡು ವ್ಯಸನದಿಂದ

ಎದೆಯನ್ನು ಕುಟ್ಟಿಕೊಂಡೆ. ಯಾರೋ ಯಕ್ಷರು(JINN) ಅವಳನ್ನು ಹೊತ್ತು ಕೊಂಡು ಹೋಗಿರಬಹುದೆಂದೇ ತೀರ್ಮಾನಿಸಿದೆ. ಅವಳಿಲ್ಲದ ನನ್ನ ಬಾಳು ಶೂನ್ಯವಾಯಿತು; ನೀರಸವಾಯಿತು. ತುಂಬಿದ ಖೇದದಿಂದ ತಾಳಲಾರದ ನಿರುತ್ಸಾಹದಿಂದ, ಪ್ರಾಣವನ್ನು ಕಳೆದುಕೊಳ್ಳಬೇಕೆಂದು ನಿಶ್ಚಯಿಸಿದೆ. ಇನ್ನು ಮುಂದೆ ನನ್ನ ಪ್ರಾಣಕಾಂತೆಯನ್ನು ನಾನು ನೋಡಲಾರೆ ಎಂದು ನನ ಗನ್ನಿಸಿಹೋಯಿತು. ಸ್ವಲ್ಪದೂರದಲ್ಲಿ ಒಂದು ಗುಡ್ಡವು ಕಂಡಿತು. ಅದರ ಮೇಲ್ಭಾಗಕ್ಕೆ ಹತ್ತಿ, ಎತ್ತರವಾದ ಒಂದು ಬಂಡೆಯ ಮೇಲೆ ನಿಂತು ಅಲ್ಲಿಂದ ಕೆಳಗೆ ಬಿದ್ದು ಪ್ರಾಣವನ್ನು ಕಳೆದುಕೊಳ್ಳಲು ಸಿದ್ಧನಾದೆ. ಇನ್ನೇನು? ಅಷ್ಟು ಎತ್ತರದಿಂದ ತಪ್ಪಲಲ್ಲಿ ಬಿದ್ದು ನಾನು ಪುಡಿಪುಡಿಯಾಗಿ ಹೋಗಬೇಕಿತ್ತು.

ಅಷ್ಟರಲ್ಲಿ ಕುದುರೆಯನ್ನು ಹತ್ತಿ ಬಂದ ಒಬ್ಬ ಸವಾರ. ಅವನು ಹಸುರು ಬಣ್ಣದ ಉಡುಪನ್ನು ತೊಟ್ಟಿದ್ದ. ಅವನು ಮುಖಕ್ಕೆ ಗೌಸುಹಾಕಿಕೊಂಡಿದ್ದ. ಸಮಯಕ್ಕೆ ಸರಿಯಾಗಿ ನನ್ನ ಬೆನ್ನಹಿಂದೆ ಬಂದ; ನನ್ನ ಕೈಹಿಡಿದೆಳೆದ; ಗಡು ಸಾದ ಧ್ವನಿಯಲ್ಲಿ ಕೇಳಿದ :

"ನಿನ್ನ ಪ್ರಾಣವನ್ನು ಕಳೆದುಕೊಳ್ಳುವಿಯೇತಕ್ಕೆ? ದೇವರ ದಯೆ ಯಲ್ಲಿ ನಿನಗೆ ನಂಬಿಕೆ ಅಳಿದು ಹೋಯಿತೇ? ದೈವನ್ಯಾಯಕ್ಕೆ ವಿರೋಧವಾಗಿ ನಡೆಯುವುದು ಇದು ಯಾವ ನೀತಿ? ಜೀವವಿರುವರೆಗೂ ನೆಚ್ಚಿಕೆ ಇದ್ದೇ ಇದೆ. ಪ್ರಾಣತ್ಯಾಗದ ಹಂಚಿಕೆಯನ್ನು ತೊರೆ. ದಾರಿ ನಡೆದು ದೈವವನ್ನು ನೆನೆ ಯುತ್ತ ರೂಮ್ ದೇಶಕ್ಕೆ ಹೋಗು. ಇನ್ನು ಕೆಲವು ದಿವಸಗಳಲ್ಲಿಯೇ ನಿನ್ನಂತೆಯೇ ವ್ಯಸನ ಪೀಡಿತರಾದ ಇನ್ನು ಮೂವರು ಫಕೀರರು ಅಲ್ಲಿ ಬಂದು ಸೇರುವವರಿದ್ದಾರೆ. ಅವರೊಡನೆ ಕಲೆತುಕೋ. ರೂಮ್ ರಾಷ್ಟ್ರದ ಸುಲ್ತಾನ ನಾದ ಆಜಾದ್ ಭಕ್ತನೂ ವ್ಯಸನಕ್ರಾಂತನಾಗಿದ್ದಾನೆ. ನೀವು ಐದು ಜನರೂ ಒಬ್ಬರನ್ನೊಬ್ಬರು ಸಂಧಿಸಿರಿ. ಆಗ ನಿಮ್ಮ ನಿಮ್ಮ ಬಯಕೆಗಳು ಏನೇ ಇರಲಿ— ಅವೆಲ್ಲವೂ ದಯಾಮಯನ ಮಹಿಮೆಯಿಂದ ಈಡೇರಬಲ್ಲುವು."

ಹಸುರು ಹುಡುಪನ್ನು ಧರಿಸಿದ ಸವಾರನ ಅಮೃತವಾಣಿಯನ್ನು ಕೇಳಿ ನಿರಾಶೆಯಿಂದ ಬತ್ತಿಹೋದ ನನ್ನ ಎದೆಯಲ್ಲಿ ಆಶಾಚಿಲುಮೆಯು ಹೊಸದಾಗಿ ಉದ್ಭವಿಸಿದಂತಾಯಿತು. ಇಂತಹ ಅಸಹನೀಯ ರೀತಿಯಲ್ಲಿ ಚಿಂತಾಕ್ರಾಂತ

ನಾದ ನನ್ನನ್ನು ಆತ್ಮಹತ್ಯೆಯ ಪ್ರಯತ್ನದಿಂದ ತಪ್ಪಿಸಿ, ನೆಚ್ಚಿಕೆಯನ್ನು ನೆಲೆಗೊಳಿಸಬಂದ ಆ ಸವಾರನ ಪಾದಗಳನ್ನು ಮುತ್ತಿಟ್ಟು "ದೇವದೂತನಾಗಿ ಬಂದ ನೀನಾರು?" ಎಂದು ನಮ್ರತೆಯಿಂದ ಕೇಳಿದೆ.

"ನಾನು ಮುರ್‌ತಾಜಾ ಅಲಿ, ಮಹಮ್ಮದ್ ಪೈಗಂಬರನ ಅಳಿಯ. ದಾರುಣ ಸಂಕಟಕ್ಕೊಳಗಾದವರ ದುಃಖವನ್ನು ನೀಗುವುದೇ ನನ್ನ ಕರ್ತವ್ಯ."

ಹೀಗೆಂದು ಹೇಳಿ ಸವಾರನು ಅದೃಶ್ಯನಾದ.

ಸವಾರನ ಹಿತವಾದದಿಂದ ನಾನು ನವೋತ್ಸಾಹವನ್ನು ತಾಳಿದೆ. ನನ್ನ ಉಡುಗೆ ತೊಡುಗೆಗಳನ್ನು ಕಿತ್ತೊಗೆದು ಫಕೀರ ವೇಷವನ್ನು ಧರಿಸಿ, ಫಕೀರನಂತೆಯೇ ಜೀವಿಸುತ್ತ, ಕಾಲುನಡಿಗೆಯಲ್ಲೆ ದಾರಿ ನಡೆದು, ಪಡಲಾರದ ಕಷ್ಟನಷ್ಟಗಳನ್ನು ಪಟ್ಟು, ಎಷ್ಟೋ ಅಪಾಯ ಆಪತ್ತುಗಳಿಂದ ಪಾರಾಗಿ, ನನ್ನಂತೆ ಸಂಕಟಕ್ಕೀಡಾದ ನಿಮ್ಮನ್ನು ಕಲೆತುಕೊಂಡಿರುವೆನು. ಈಗ ನಾಲ್ವರೂ ಒಂದಾಗಿ ಸೇರಿದಂತಾಯಿತು. ಇನ್ನುಳಿದಿರುವುದು ದೇವದೂತನು ಹೇಳಿದಂತೆ ರೂಮ್ ಸುಲ್ತಾನನಾದ ಆಜಾದ್ ಭಕ್ತನೊಂದಿಗೆ ಕಲೆಯುವುದು. ಆಗ ನಮ್ಮ ಐವರ ಬಯಕೆಗಳೂ ಖಂಡಿತವಾಗಿ ಈಡೇರಬಲ್ಲುದೆಂಬುದೇ ಪೈಗಂಬರ ಸಾಕ್ಷಿಯಾಗಿ (ಆತನ ಆತ್ಮವು ಸುಕ್ಷೇಮದಿಂದ ಸಶಾಂತವಾಗಿರಲಿ!) ನನ್ನ ನೆಚ್ಚಿಕೆ. ನನ್ನ ಕಥೆಯು ಇಲ್ಲಿಗೆ ಮುಗಿಯಿತು. ಇನ್ನು ನಿಮ್ಮ ಮೂವರಲ್ಲಿ ಯಾರಾದರೊಬ್ಬರು ನಿಮ್ಮ ಕಥೆಯನ್ನು ಹೇಳಬಹುದು.—ಎಂದೆ ನಾನು.

(ಮರೆಯಲ್ಲಿ ಅಡಗಿ ಕುಳಿತಿದ್ದ ಆಜಾದ ಭಕ್ತನು ಎರಡನೆಯ ಫಕೀರನು ತನ್ನ ಕಥೆಯನ್ನು ಆರಂಭಿಸುವುದನ್ನೇ ತವಕದಿಂದ ನಿರೀಕ್ಷಿಸುತ್ತಿದ್ದನು).

# ಎರಡನೆಯ ಫಕೀರನು ಹೇಳಿದ ಕಥೆ

೨೪

ಬಳಿಕ ಎರಡನೆಯ ಫಕೀರನು ತನ್ನ ವೃತ್ತಾಂತವನ್ನು ಹೇಳ ತೊಡಗಿದನು. ಉಳಿದ ಮೂವರು ಫಕೀರರೂ ಅತ್ಯಂತ ಕುತೂಹಲದಿಂದ ಅವನ ಕಥೆಯನ್ನು ಕೇಳಲನುವಾದರು. ಮರೆಯಲ್ಲಿ ಅಡಗಿ ಕುಳಿತಿದ್ದ ಆಜಾದ್ ಭಕ್ತನು ಮೊದಲನೆಯ ಫಕೀರನ ಕಥೆಯನ್ನು ಕೇಳಿ ಅದರ ಸ್ವಾರಸ್ಯವನ್ನು ಬಹುವಾಗಿ ಮೆಚ್ಚಿದೆ. ಅಂತೆಯೇ ಆ ಕಥೆಯ ಅಂತ್ಯ ಭಾಗದಲ್ಲಿ ಹಸುರು ಉಡುಪಿನಲ್ಲಿ—ಕುದುರೆ ಸವಾರನಾಗಿ ಕಾಣಿಸಿಕೊಂಡ ಪೈಗಂಬರನ ಅಳಿಯನಾದ ಮುರ್‌ತಾಜಾ ಆಲಿಯ ಹೇಳಿಕೆಯಲ್ಲಿ ತನ್ನ ಹೆಸರು ನಮೂದಿತವಾದುದನ್ನೂ, ನಾಲ್ಕು ಫಕೀರರೊಂದಿಗೆ ಕಲೆತಾಗ ತನ್ನ ಕಷ್ಟಗಳೂ ಪರಿಹಾರವಾಗಿ ಸಂತೋಷವು ನೆಲೆಸುವುದೆಂಬ ಭರವಸೆಯ ಮಾತನ್ನೂ ಕೇಳಿ ಹಿಗ್ಗಿ ಮುಂದಿನ ಕಥೆಯನ್ನು ಕೇಳಲು ಉತ್ಸುಕತೆಯಿಂದ ಕಿವಿ ತೆರೆದುಕೊಂಡು ಕುಳಿತನು. ಆಗ ಎರಡನೆಯ ಫಕೀರನು ತನ್ನ ಕಥೆಯನ್ನ ಹೇಳಿದನು :

ಒಡನಾಡಿ ಫಕೀರರೇ ! ನಮ್ಮ ಬಟ್ಟೆಗಳು ಚಿಂದಿಯಾಗಿ ಹರಿದು ಮಾಸಿ ಹೋಗಿವೆ. ನಡೆನಡೆದು ನಮ್ಮ ಕಾಲುಗಳು ಬಾತುಹೋಗಿವೆ. ನೊಂದು ನರಳಿ ನಮ್ಮ ಮನಸ್ಸೂ ಅಂತೆಯೇ ಯಾತನೆಗಳಿಗೊಳಗಾಗಿದೆ. ನನ್ನ ಕಥೆಯನ್ನು ಕೇಳಿ. ಅದು ವ್ಯಸನ ಪರಂಪರೆಗಳಿಂದ ತುಂಬಿ ಹೋಗಿದೆ. ನನ್ನ ಮನೋರೋಗಕ್ಕೆ ಎಂತಹ ವೈದ್ಯನಿಂದಲೂ ಚಿಕಿತ್ಸೆಯು ದೊರೆಯದೆಂದೇ ನಾನು ಭಾವಿಸಿದ್ದೆ. ಆದರೆ ನಮ್ಮ ಒಡನಾಡಿ ಫಕೀರನು ಈಗತಾನೇ ತನ್ನ ಕಥಾಂತ್ಯದಲ್ಲಿ ಹೇಳಿದಂತೆ ಮುರ್‌ತಾಜಾ ಆಲಿಯ ಭರವಸೆ ಸತ್ಯವಾದಲ್ಲಿ ನಾವೊಬ್ಬೊಬ್ಬರೂ ನಮ್ಮ ನಮ್ಮ ದುಃಖದ ಕಡಲಿನಿಂದ ಹೊರಬಿದ್ದು ಸಂತೋಷದ ತೀರದಲ್ಲಿ ಓಲಾಡುವಂತೆ ಆದೀತೆಂದು ಬಯಸುತ್ತೇನೆ. ದೇವರ ಕೃಪೆಯಿಂದ ನಮ್ಮ ಬಯಕೆಗಳು ಈಡೇರಲೆಂದು ಹಾರೈಸಿ ನನ್ನ ಕಥೆಯನ್ನು ಪ್ರಾರಂಭಿಸುತ್ತೇನೆ. ಸಾವಧಾನದಿಂದ ಲಾಲಿಸಿ.

ನಾನು ಪರ್ಷಿಯಾದೇಶದ ರಾಜ. ನನ್ನ ರಾಜ್ಯದಲ್ಲಿ ಪಂಡಿತರಿಗಾಗಲಿ, ಕುಶಲಕಲೆಗಳ ಅಭಿವೃದ್ಧಿಗಾಗಲಿ, ಸಂಸ್ಕೃತಿಯ ಪ್ರಕಾಶಕ್ಕಾಗಲಿ, ಪ್ರಜಾ ಕೋಟಿಯ ಕ್ಷೇಮ ಸಂಕೇತಗಳಿಗಾಗಲಿ ಕೊರತೆಯಿರಲಿಲ್ಲ. ಇಸ್‌ಪಹಾನ್ ನಗರವೇ ನನ್ನರಾಜಧಾನಿಯಾಗಿದ್ದಿತು. ನನ್ನ ಸಭಿಕರು ಸುಶಿಕ್ಷಿತರು; ನಾಗರಿಕರು; ನ್ಯಾಯಮಾರ್ಗಾನುವರ್ತಿಗಳು. ನನ್ನ ಚಿಕ್ಕಂದಿನಲ್ಲಿ ನನಗೆ ಸಕಲ ತೆರನಾದ ರಾಜಯೋಗ್ಯ ಶಿಕ್ಷಣವೂ ದೊರೆತು ನಾನು ಸುಸಂಸ್ಕೃತನಾದೆ.

ನಾನು ಪ್ರಾಪ್ತವಯಸ್ಕನಾಗುವ ವೇಳೆಗೆ ನನ್ನ ತಂದೆಯು ಕಾಲವಾದನು. ನಾನು ಗದ್ದುಗೆಯನ್ನೇರಿದೆ. ಒಂದಾನೊಂದು ದಿವಸ ನಾನು ಸಿಂಹಾಸನಾರೂಢನಾಗಿ ದರ್ಬಾರು ನಡೆಸುತ್ತಿದ್ದೆ. ಅಂದು ರಾಷ್ಟ್ರದ ಯಾವುದೋ ಒಂದು ಭಾಗದಿಂದ ಮುಲ್ಲಾನೊಬ್ಬನು ನನ್ನ ಸಭೆಗೆ ಬಂದಿದ್ದನು. ಸಭೆಯ ಮುಕ್ತಾಯದಲ್ಲಿ ಅವನು ಸಿಂಹಾಸನದ ಬಳಿ ಬಂದು ನನ್ನ ಕ್ಷೇಮಸಮಾಚಾರಗಳನ್ನು ವಿಚಾರಿಸಿದನು. ನಾನವನನ್ನು ಉಚಿತಾಸನದಲ್ಲಿ ಕುಳ್ಳಿರಿಸಿ ಅವನೊಡನೆ ಸಂಭಾಷಣೆಗೆ ತೊಡಗಿದೆ. ಲೋಕಾನುಭವದಲ್ಲಿಯೂ, ಇತಿಹಾಸ ವಿಷಯಗಳಲ್ಲೂ ಮುಲ್ಲಾನು ಪ್ರಾಜ್ಞನೆಂದು ನನಗೆ ಭಾಸವಾಯಿತು. ಆಗ ನಾನವನನ್ನು ಕುರಿತು ಕೇಳಿದೆ:

"ಪ್ರಪಂಚದಲ್ಲಿ ಅತ್ಯುತ್ತಮನು ಮಾನವನೆಂದರೆ ಯಾರು?

"ಯಾರು ತಮ್ಮ ಕಾಲಾನಂತರವೂ ಜನಗಣದ ಸ್ಮೃತಿಪಥದಲ್ಲಿ ಚಿರಕಾಲ ಉಳಿದು ಅವರ ಜೀವನದ ರೀತಿನೀತಿಗಳನ್ನು ರೂಪಗೊಳಿಸುವರೋ ಅಂತಹ ಉದಾತ್ತ ಮಹನೀಯರೇ ಮಾನವರಲ್ಲಿ ಉತ್ತಮರು; ದೇವರ ದೃಷ್ಟಿಯಲ್ಲಿ ದೊಡ್ಡವರು"

ಹೀಗೆಂದು ಮುಲ್ಲಾನು ಹೇಳಿದ. ನನ್ನ ಉತ್ಸುಕತೆಯು ಕೆರಳಿತು. ನಾನು ಕೇಳಿದೆ:

ಇತಿಹಾಸದಿಂದ ಒಂದು ದೃಷ್ಟಾಂತವನ್ನು ಹೇಳಬಲ್ಲೆಯಾ? "ಆಗಬಹುದು; 'ಹತೀಮ್ ತಾಯ್' ವೃತ್ತಾಂತವು ಆದರ್ಶಭರಿತವಾದುದು" ಎನ್ನುತ್ತ ಅದನ್ನು ಪ್ರಸ್ತಾಪಿಸಿದ:

ಇತಿಹಾಸದಲ್ಲಿ ಅತಿ ಪ್ರಾಜ್ಞನಾದ ಮುಲ್ಲಾನು ನನಗೆ ಉದಾತ್ತ ಚರಿತ ಹತೀಮತಾಯ್ ವಿಚಾರವಾಗಿ ಮೂರು ಆದರ್ಶಭರಿತ ವೃತ್ತಾಂತಗಳನ್ನು ರಸವತ್ತಾಗಿ ಹೇಳಿ ಮುಗಿಸುವ ವೇಳೆಗೆ ನನ್ನ ಮನಸ್ಸಿನ ಮೇಲೆ ಅತ್ಯಂತ ಪ್ರಭಾವಯುತ ಪರಿಣಾಮವುಂಟಾಯಿತು. ಹತೀಮನ ವಿಚಾರವನ್ನು ಕುರಿತು ಯೋಚಿಸಿದಷ್ಟೂ, ಮಾನವರಲ್ಲಿ ಅಗ್ರಗಣ್ಯನಾದ ಆ ಅಜ್ಞಾತ ಪುರುಷನಲ್ಲಿ ಅತ್ಯಧಿಕವಾದ ಪ್ರೀತಿ ಗೌರವಗಳು ಹುಟ್ಟಿದುವು. ಆಗ ನಾನು ನನ್ನ ಮನಸ್ಸಿನಲ್ಲೇ ಅಂದುಕೊಂಡೆ. " ಒಂದು ಪಂಗಡದ ನಾಯಕನಾದ ಹತೀಮ್‌ತಾಯ್ ತನ್ನ ಉದಾರತೆಯಿಂದಲೂ, ಉತ್ತಮ ನಡತೆಯಿಂದಲೂ ಇಷ್ಟೊಂದು ಪ್ರಖ್ಯಾತನಾಗಿ ಆತನ ಬಾಳು ಉಳಿದವರ ಬೆಳಕಾಗಿ ನಿಲ್ಲಬಲ್ಲುದಾದರೆ ಇರಾನಿನಂತಹ ವಿಸ್ತಾರವಾದ ಪ್ರಾಂತ್ಯಕ್ಕೆ ಅಧಿಪತಿಯಾದ ನಾನೇತಕ್ಕೆ ಹತೀಮನ ಆದರ್ಶವನ್ನನುಸರಿಸಿ, ಉತ್ತಮ ಸತ್ಕೃತಿಗಳನ್ನೆಸಗಿ, ಕೀರ್ತಿ ಪ್ರತಿಷ್ಠೆಗಳನ್ನು ಗಳಿಸಬಾರದು? ಹೌದು , ಪೃಥ್ವಿಯಲ್ಲಿ ಉದಾರತೆಯನ್ನು ಮಿಂಚಿದ ಮತ್ತೊಂದು ಗುಣವಿರುವುದೆ ? ಒಂದೇ ಒಂದು ಬೀಜವನ್ನು ಚೆಲ್ಲಿ ಬೇಸಾಯಗಾರನು ಸಾವಿರಾರು ಕಾಳುಗಳನ್ನು ಬೆಳೆಯುವನಲ್ಲವೆ ? ಅಂತೆಯೆ ಉದಾರತೆಯು. ಮಾನವನ ಒಂದೊಂದು ಸತ್ಕೃತಿಗೂ ನೂರಾರು ಸಾವಿರಾರು ಪ್ರತಿಫಲಗಳನ್ನು ಪರಮಾತ್ಮನು ಕರುಣಿಸಿಯೇ ಕರುಣಿಸುತ್ತಾನೆ.

ಈ ಭಾವನೆಗಳನ್ನು ತಳೆದ ನಾನು ನನ್ನ ರಾಜ್ಯದ ಮುಖ್ಯ ಶಿಲ್ಪಿಯನ್ನು ಬರಮಾಡಿಕೊಂಡೆ. ನಗರದ ಹೊರಗಡೆ ನಲವತ್ತು ಬಾಗಿಲುಗಳುಳ್ಳ ವಿಶಾಲವೂ ಅತ್ಯದ್ಭುತವೂ. ಮನೋಹರವೂ ಆದ ಒಂದು ರಾಜಸೌಧ (ಅರಮನೆ) ವನ್ನು ಕಟ್ಟುವಂತೆ ಅಪ್ಪಣೆಮಾಡಿದೆ. ಅತ್ಯಲ್ಪ ಕಾಲದಲ್ಲೆ ಆ ಸುಂದರ ಸೌಧವು ನಿರ್ಮಿತವಾಯಿತು. ದಾರಿದ್ರ್ಯಾವಸ್ಥೆಯಲ್ಲಿರುವ ಎಲ್ಲ ಬಡವರೂ ಆ ನಲವತ್ತು ಬಾಗಿಲುಗಳಲ್ಲಿ ಯಾವ ಬಾಗಿಲಿನಲ್ಲಿ ಬೇಕಾದರೂ ಪ್ರವೇಶಿಸಿ ತಮತಮಗೆ ಬೇಕಾದಷ್ಟು ಧರ್ಮವನ್ನು ಪಡೆಯಬಹುದೆಂದು ಪ್ರೋತ್ಸಾಹಿಸಿದೆ. ನನ್ನ ಕೈಯಾರೆ ನಾನೇ ದಾನವನ್ನು ಮಾಡುತ್ತ ಬಂದೆ.

ಒಂದಾನೊಂದು ದಿವಸ ಒಬ್ಬ ಫಕೀರನು ಮುಂಬಾಗಿಲಿನಲ್ಲಿ ಪ್ರವೇಶಿಸಿ ತನಗೇನಾದರೂ ಧರ್ಮವಾಡಬೇಕೆಂದು ಬೇಡಿದನು. ನಾನು ಅವನಿಗೆ

ಒಂದು ಚಿನ್ನದ ನಾಣ್ಯವನ್ನು ದಾನಮಾಡಿದೆ. ಅದೇ ಫಕೀರನು ಮಾರನೆಯ ದಿನ ಎರಡನೆಯ ಬಾಗಿಲಲ್ಲಿ ಒಳಹೊಕ್ಕು ಈ ಸಲ ಎರಡು ಮೊಹರುಗಳನ್ನು ಕೇಳಿದ: ಅವನು ಕೇಳಿದ ಎರಡು ಚಿನ್ನದ ಮೊಹರುಗಳನ್ನು ನಾನವನಿಗೆ ಕೊಟ್ಟೆ. ಮಾರನೆಯ ದಿನ ಅದೇ ಫಕೀರನು ಮೂರನೆಯ ಬಾಗಿಲಲ್ಲಿ ಒಳ ಹೊಕ್ಕವನೇ ಮೂರು ಮೊಹರುಗಳನ್ನು ಕೇಳಿದ. ನಾನು ಅವನು ಕೇಳಿದ್ದನ್ನು ಕೊಟ್ಟೆ. ಹೀಗೆಯೇ ಪ್ರತಿದಿವಸವೂ ಅವನು ಒಂದೊಂದು ಬಾಗಿಲಲ್ಲಿ ಹೊಕ್ಕು ಆಯಾದಿನ ನಾಲ್ಕು, ಐದು, ಆರು, ಏಳು, ಎಂಟು ಇತ್ಯಾದಿಯಾಗಿ ಮೊಹರು ಗಳನ್ನು ಪಡೆಯುತ್ತಲೇ ಬಂದ. ಕೊನೆಗೆ ನಲವತ್ತನೆಯ ದಿನ ನಲವತ್ತನೆಯ ಬಾಗಿಲಲ್ಲಿ ಪ್ರವೇಶಿಸಿ ನಲವತ್ತು ಮೊಹರುಗಳನ್ನು ದಾನವಾಗಿ ಕೇಳಿದ. ನಾನದನ್ನು ಅವನಿಗೆ ಕೊಟ್ಟೆ.

ನಲವತ್ತನೆಯ ದಿನ ನಲವತ್ತು ಮೊಹರುಗಳನ್ನು ಪಡೆದ ಆ ಫಕೀರನ ಇಷ್ಟಾರ್ಥವು ಸಂಪೂರ್ಣಗೊಂಡಿದ್ದೀತೆಂದೂ ಮತ್ತೆ ದಾನಬೇಡಲು ಅವನು ನನ್ನ ಬಳಿ ಬರಲಾರನೆಂದೂ ನಾನೆಣಿಸಿದ್ದೆ. ಆದರೆ ಅವನು ಮತ್ತೆ ಅರಮನೆಗೆ ಬರಲು ಪ್ರಾರಂಭಿಸಿದ. ನಲವತ್ತೊಂದನೆಯ ದಿನ ಅವನು ಮೊದಲನೆಯ ದ್ವಾರದಲ್ಲಿ ಅರಮನೆಯನ್ನು ಪ್ರವೇಶಿಸಿ ನನ್ನೆದುರಿಗೆ ನಿಂತು 'ದಾನ ಕೊಡಿ ಸುಲ್ತಾನ ಸಾಹೇಬರೇ!' ಎಂದ. ನನ್ನ ಸಹನೆಯೆಲ್ಲವೂ ಕಳಚಿಬಿದ್ದಂತಾ ಯಿತು. ನಾನು ಫಕೀರನನ್ನು ಗದರಿಸಿ 'ಎಂತಹ ಫಕೀರನಯ್ಯಾ ನೀನು? ನಿನ್ನ ದುರಾಸೆಗೆ ಮಿತಿಮೇರೆಗಳೇ ಇಲ್ಲವೆ? ಫಕೀರನೆಂದು ಬಾಯಲ್ಲಿ ಜಂಭ ಕೊಚ್ಚುತ್ತೀಯೆ! ಫಕೀರನೆಂದರೆ ಅರ್ಥ ಗೊತ್ತಿದೆಯೆ ನಿನಗೆ? ಅರ್ಥ ತಿಳಿದು ಅದರಂತೆ ನಡೆದುಕೊಳ್ಳಬೇಕೆಂಬ ಪರಿಜ್ಞಾನವಿದೆಯೆ?

"ಹಾಗೇನು? ಎಲೈ ದಯೆಯ ಅವತಾರವೇ! ಆ ಪದದ ಅರ್ಥವೇನು? ಕೇಳಿ ತಿಳಿದುಕೊಳ್ಳಬಯಸುತ್ತೇನೆ".

"ಅರ್ಥ!" ನಾನು ಕೇಳಿದೆ. "ಅರ್ಥ ತಿಳಿಯದೆ ಈ ಸೋಗನ್ನು ಹಾಕಿರುವುದೇತಕ್ಕೆ? ಫಕೀರನು ಧ್ಯಾನ, ಮೌನ, ಉಪವಾಸ ವ್ರತಗಳನ್ನು ಆಚರಿಸಬೇಕು. ಸಿಕ್ಕಿದುದರಲ್ಲಿ ಅವನು ತೃಪ್ತಿ ಸಂತೋಷಗಳನ್ನು ಪಡೆಯ ಬೇಕು. ಆಸೆ-ಅತ್ಯಾಸೆ, ದುರಾಸೆಗಳನ್ನು ತೊರೆದು ಅವನು ಆಧ್ಯಾತ್ಮಿಕ ದೃಷ್ಟಿ

ಯುಳ್ಳವನಾಗಬೇಕು. ಆಗಲೇ ದೇವರನ್ನು ಕಾಣಲು ಅರ್ಹನಾದಾನು! ಏಕೆ? ಇತರರಿಗೂ ತಾನು ಕಂಡ ದೇವರನ್ನು ತೋರಿಸುವ ಸಿದ್ಧಿಪಡೆದಾನು! ಆದರೆ ನೀನು! ನೀನೊಬ್ಬ ವಿಚಿತ್ರ ಮನುಷ್ಯ. ಹೆಸರಿಗೆ ಫಕೀರನೆಂದು ಕೊಚ್ಚಿಕೊಳ್ಳುತ್ತೀಯೆ. ನೀನು ಉಪವಾಸವನ್ನು ಮಾಡಲಾರೆ; ನಿನಗೆ ತೃಪ್ತಿಯಿಲ್ಲ; ದೈವಧ್ಯಾನ ಮೊದಲೇ ಇದ್ದಂತೆ ಕಾಣಿಸಲಿಲ್ಲ. ಇನ್ನು ಹೇಗೆ ತಾನೇ ನೀನು ಫಕೀರನಾಗಬಲ್ಲೆ? ಈ ವೇಳೆಗೆ ನೀನು ಪಡೆದಿರುವ ಧನ ಮೊತ್ತವು ಹೇರಳವಾದುದು. ಅದನ್ನೆಲ್ಲ ಉಪಯೋಗಿಸಿ ನಿನ್ನ ಹೊಟ್ಟೆ ತುಂಬಿಸಿಕೋ. ಅದೆಲ್ಲ ಮುಗಿದುಹೋದಮೇಲೆ ನನ್ನ ಬಳಿ ಬಾ. ಮತ್ತೆ ಕೇಳಿ ತೆಗೆದುಕೊಳ್ಳುವಿಯಂತೆ! ಅದುವರಗೆ ನಿನ್ನ ದುರಾಸೆಯ ಮೋರೆಯನ್ನು ತೋರಿಸಿ ಹಲ್ಲು ಕಿರಿಯಬೇಡ; ಎಚ್ಚರಿಕೆ! ಹೋಗು, ಇಲ್ಲಿಂದ ಬೇಗ ಹೊರಟು ಹೋಗು. ಇಲ್ಲಿ ನಿಲ್ಲಬೇಡ; ನಿಂತರೆ ಸೇವಕರು ಕತ್ತು ಹಿಡಿದು ತಳ್ಳಿಬಿಟ್ಟಾರು. ಅದರಿಂದ ನನ್ನ ಉದಾರತೆಗೆ ಅಪರಾಧವು ತಟ್ಟೀತು!"

"ಉದಾರತೆ"! ಫಕೀರನು ಹೇಳಿದ. ಆವನ ಮಾತಿನಲ್ಲಿ ಕ್ರೋಧದ ಕಿಡಿಗಳು ಅಡಗಿದ್ದುವು. ದುರುಗುಟ್ಟುವ ಅವನ ದೃಷ್ಟಿಯಲ್ಲಿ ತಾತ್ಸಾರ ಭಾವನೆಯು ತುಂಬಿ ಹೊರಚೆಲ್ಲುತ್ತಿತ್ತು. "ಉದಾರತೆ! ಇಂತಹ ಉದಾರತೆಯ ಪ್ರದರ್ಶನವನ್ನು ಹತೀಮತಾಯ್ ನೋಡಿದ್ದರೆ ಉರುಲು ಹಾಕಿಕೊಂಡು ಪ್ರಾಣಬಿಡುತ್ತಿದ್ದನು. ಸುಲ್ತಾನ ಮಹಾಶಯ! ಈ ಉದ್ರೇಕವೆಲ್ಲ ಏತಕ್ಕೆ? ನೀನು ನಲವತ್ತು ದಿನಗಳೂ ಕೊಟ್ಟ ಮೊಹರುಗಳ ಮೊತ್ತ ಎಂಟುನೂರು ಹತ್ತು ಈ ಚೀಲದಲ್ಲೆ ಇವೆ. ಎಣಿಸಿಕೋ; ಎಂಟನೂರುಹತ್ತು ಇವೆಯೋ ಇಲ್ಲವೋ—ನೋಡಿಕೋ. ಈ ದಿನ ನೀನು ಹೀಗೆ ಹೇಳುವೆ ಎಂದು ನಾನು ಬಲ್ಲೆ. ನಾನು ನಿಜವಾದ ಫಕೀರನಾದುದರಿಂದ ಇದು ಹೀಗೆಯೇ ಆಗುತ್ತದೆಂದು ಮೊದಲು ದಿವಸವೇ ನಾನು ಬಲ್ಲೆ. ಆದುದರಿಂದ ದಾನದ ಹೆಸರಿನಲ್ಲಿ ನೀನಿತ್ತ ಚಿನ್ನದ ಮೊಹರುಗಳಲ್ಲಿ ಒಂದನ್ನೂ ನಾನು ಮುಟ್ಟಲಿಲ್ಲ. ಮುಟ್ಟಬೇಕಾದ ಪ್ರಮೇಯವೂ ಇಲ್ಲ. ಮುಟ್ಟಿದ್ದರೆ ನನಗೆ ಪಾಪವು ತಟ್ಟಿ ನನ್ನ ಫಕೀರವೃತ್ತಿಗೆ ಭಂಗವುಂಟಾಗುತ್ತಿತ್ತು!"

ಹೀಗೆಂದು ಹೇಳಿ ಫಕೀರನು 'ಝಣ-ಝಣ-ಝಣ' ಎಂದು ತಾನು ಹೊತ್ತು ತಂದಿದ್ದ ಚೀಲದ ಬಾಯನ್ನು ಬಿಚ್ಚಿ ಮೊಹರುಗಳನ್ನು ನೆಲದಮೇಲೆ

ಸುರಿದನು. “ಸುಲ್ತಾನರೇ! ಅಪಾತ್ರನಾದ ನನ್ನ ಮೇಲೆ ಅಪಾರವಾಗಿ ಚಿನ್ನವನ್ನು ಸುರಿದುಬಿಟ್ಟರೆಂಬ ತಮ್ಮ ವ್ಯಥೆಯು ನೀಗಿ ಹೋಗಿ ತಮ್ಮ ಮನಸ್ಸಿಗೆ ನೆಮ್ಮದಿಯುಂಟಾಗಲಿ! ಆರಿಸಿಕೊಳ್ಳಿ; ಭದ್ರವಾಗಿ ಇರಿಸಿಕೊಳ್ಳಿ; ಈ ಮೊಹರುಗಳನ್ನು ನಾನು ಅಪೇಕ್ಷಿಸುವುದಿಲ್ಲ. ಇಂತಹ ದಾನವನ್ನು ನಾನು ಒಲ್ಲೆ. ಮತ್ತೊಮ್ಮೆ ಉದಾರತೆಯ ಸೋಗನ್ನು ಹಾಕಿ ನಲವತ್ತು ದ್ವಾರಗಳಲ್ಲಿ ಮೊಹರುಗಳನ್ನು ದಾನ ಮಾಡುವ ಹಿರಿಯ ಹಂಚಿಕೆಗೆ ಕೈಹಾಕಬೇಡಿ, ತತ್ಸಮಯದಲ್ಲಿ ನಿಮ್ಮಲ್ಲಿ ಉದಾರ ಗುಣವಿರುವುದಕ್ಕೆ ತಕ್ಕ ಸೂಚನೆಗಳೇನೂ ಕಂಡು ಬರುವುದಿಲ್ಲ. ದಾನ ಪಡೆಯಲು ಬಂದವರು ನೋಡಬೇಕಾದುದು ನಿಮ್ಮನ್ನೋ ನಿಮ್ಮ ಈ ಸುಂದರ ಸೌಧವನ್ನೋ ಅಥವಾ ನಿಮ್ಮ ಉದಾರತೆಯನ್ನೋ? ನಿರ್ಮಲ ಉದಾರಿಗೆ ಈ ಅಪಾರ ವ್ಯಾಪಾರಗಳು—ವಿವಿಧ ವೇಷಗಳು—ಇವೆಲ್ಲ ಏತಕ್ಕೆ? ಹಾಗಾದರೆ ಸ್ವಚ್ಛಂದವಾದ ಉದಾರ ಗುಣಕ್ಕೆ ಲಕ್ಷಣಗಳೇನೆಂದು ನೀವು ಕೇಳಬಹುದು. ಕೇಳುವುದಕ್ಕೆ ಮುನ್ನ ನಾನೇ ಹೇಳಿಬಿಡುವುದೋಳಿತಲ್ಲವೆ?

ಸಹನೆ, ಸೃಷ್ಟೀಶನಲ್ಲಿ ಭಯ, ಮರಣಕ್ಕೆ ಸಿದ್ಧತೆ, ಇವು ಮೂರೂ ಉದಾರತೆಯ ಮುಖ್ಯ ಲಕ್ಷಣಗಳು. ದಾನಕೊಟ್ಟು ಕೋಪಿಸಿಕೊಂಡಿರಿ—ನಿಮಗೆ ಸಹನೆಯಿಲ್ಲ. ಅವ್ಯಕ್ತನಾಗಿ ನಮಗೆ ಸೃಷ್ಟೀಶನು ಕರುಣಿಸಿದ ಧನವನ್ನು ನೀವು ವ್ಯಕ್ತವಾಗಿ, ವೇಷಪೂರಿತವಾಗಿ, ದಾನಮಾಡಲು ಹೊರಿಟಿರಿ; ದಾನಮಾಡಿದುದರ ವಿಚಾರವಾಗಿ—ದಾನಪಡೆದವರಲ್ಲಿ—ತರ್ಕಕ್ಕೆ ನಿಂತು ಅವರನ್ನು ಅಲ್ಲಗಳೆಯುವ ನಿಮ್ಮ ವರ್ತನೆ—ಅದು ನಿಜವಾಗಿಯೂ ದಯಾಮಯನ ದೃಷ್ಟಿಯಲ್ಲಿ ಸಾಧುವಾದುದಲ್ಲ. ಎಂದ ಮೇಲೆ ನಿಮಗವನ ಭಯವಿದ್ದಿದ್ದರೆ—ಅವನು ಒಪ್ಪುವನೇ ಒಪ್ಪಲಾರನೇ ಎಂಬ ವಿವೇಚನೆ ಇದ್ದಿದ್ದರೆ ಆ ತೆರನೆ ನಿಮ್ಮ ದಾನವನ್ನು ಕುರಿತು ನೀವೇ ದರ್ಪ, ದುರ್ಮದಗಳಿಂದ ವಿಚಾರಣೆಗೆ ನಿಂತು ಅವಹೇಳನ ಮಾಡುತ್ತಿರಲಿಲ್ಲ. ಮಾನವನ ಬಾಳು ಅಸ್ಥಿರ; ಹುಟ್ಟಿದವರೆಲ್ಲ ಎಂದಾದರೊಂದು ಸಲ ಸಾಯಲೇಬೇಕು. ಆದರೆ ಯಾವ ಕ್ಷಣದಲ್ಲಿ ಎಂದು ಹೇಳಲಾಗದು. ಆದುದರಿಂದಲೇ ಹತೀಮನಂತಹ ಉತ್ತಮ ದೈವಭಕ್ತ ಉದಾರಿಗಳು ಮರುಕ್ಷಣದಲ್ಲಿ ಬದುಕಿ ಉಳಿಯುವ ಭರವಸೆಯನ್ನು ತೊರೆದು

ಮರುಕ್ಷಣಕ್ಕೆ ಮುನ್ನ ಪ್ರತಿಕ್ಷಣವೂ ಉದಾರಿಯಾಗಿ ಬಾಳಬೇಕೆಂದು ಬಯಸು ತ್ತಿದ್ದರು. ಅದನ್ನೇ ನಾನು ಮರಣಕ್ಕೆ ಸಿದ್ಧತೆ ಎಂದು ಹೇಳುವುದು. ಆ ನಿಯ ಮದ ಪ್ರಕಾರವಾಗಿ ಪ್ರತಿಯೊಬ್ಬ ಮಾನವನೂ ಮರುಕ್ಷಣವನ್ನು ನಂಬದೆ ಉದಾರಿಯಾಗಿದ್ದು ಸೃಷ್ಟೀಶನ ಕರುಣೆಯನ್ನು ಕೂಡಿಸುತ್ತ ಬರಬೇಕು. ಯಾವ ಕ್ಷಣದಲ್ಲಿಯೂ ಮರಣಕ್ಕೆ ಸಿದ್ಧವಾಗಿರಬೇಕು. ಈ ಮೂರು ಗುಣಗಳನ್ನು ಕರಗತಮಾಡಿಕೊಳ್ಳಬೇಕು. ಅದು ಹೊರತು ಯಾವ ಮಾನವನೂ ತಾನು ದಯಾವಂತನೆಂದೂ—ಉದಾರವೀರನೆಂದೂ–ಕೊಚ್ಚಿಕೊಳ್ಳಕೂಡದು. ಉದಾ ರಿಗೆ ಮತ್ತೊಂದು ದಿವ್ಯವಾದ ಕವಚವುಂಟು. ಅದಾಗಿ, ಅವನು ಅರಿತೂ, ಅರಿ ಯದ ಬಾಳ ಇತರ ಹಾದಿಗಳಲ್ಲಿ ಅಗೊಮ್ಮೆ ಈಗೊಮ್ಮೆ ತಪ್ಪು ಹೆಜ್ಜೆಗಳನ್ನೂ ಇಟ್ಟರೂ ಇಡಬಹುದು. ಆದರೆ ಅವನ ನಿರ್ಮಲ ಉದಾರಗುಣವು ಅವನ ಸೃಷ್ಟಿಕರ್ತನಿಗೆ ಅತ್ಯಂತ ಪ್ರಿಯವಾದುದರಿಂದ ಅವನ ತಪ್ಪುಗಳು ಮನ್ನಿಸಲ್ಪಟ್ಟು ಅವನು ಸುಖಿಯಾಗಿರಲು ಅವಕಾಶವುಂಟಾದೀತು."

ಫಕೀರನು ನನ್ನನ್ನು ಕುರಿತು ಮಾಡಿದ ನಿಂದೆಗೆ ನಾನು ನಾಚಿ ತಲೆತಗ್ಗಿ ಸಿದ್ದೆ. ಆತನು ಹೇಳಿದ ಉದಾರಿಯ ಉತ್ತಮ ಲಕ್ಷಣಗಳನ್ನು ಕೇಳಿ ನನ್ನ ಕಣ್ಣಿಗೆ ಮುಚ್ಚಿದ್ದ ಪರೆಯು ಬಿಚ್ಚಿದಂತಾಯಿತು. ಏನೊಂದನ್ನೂ ಹೇಳಲವ ಕಾಶವಿಲ್ಲದೆ ನಾನು ಮೌನನಾಗಿದ್ದೆ, ಆಗ ಫಕೀರನು ಮತ್ತೆ ನನ್ನ ಕುರಿತು ಹೇಳಿದ :

"ಏಕೆ ಸುಲ್ತಾನ ಮಹಾಶಯರೇ! ನನ್ನ ಮಾತನ್ನು ಕೇಳಿ ತಮಗೆ ದುಗುಡ ಉಂಟಾಯಿತೆ ?"

"ಇಲ್ಲ" ಎನ್ನುತ್ತ ನಾನು ಫಕೀರನ ಕಾಲಿಗೆರಗಿದೆ,

"ನನ್ನನ್ನು ಮನ್ನಿಸಬೇಕು" ಎಂದು ಬೇಡಿದೆ,

"ಹಾಗೆ ನೀವು ಬೇಡ ಬೇಕಾದುದು ತಮಗೂ ನನಗೂ ಸೃಷ್ಟಿಕರ್ತನಾದ ಸರ್ವೇಶ್ವರನಲ್ಲಿ! ನನ್ನನ್ನಲ್ಲ."

ಹೀಗೆಂದವನೇ ಫಕೀರನು ಮತ್ತೆ ಹೇಳಿದ :

"ನಾನು ಎಷ್ಟೋ ದೇಶಗಳಲ್ಲಿ ಸಂಚಾರ ಮಾಡಿದ್ದೇನೆ. ಎಷ್ಟೋ ಉದಾರಿಗಳನ್ನು ಕಂಡಿದ್ದೇನೆ. ಆದರೆ ಅವರೆಲ್ಲೆಲ್ಲ ನಿಜವಾದ ಉದಾರತೆಗೆ ಅರ್ಹತೆ ಪಡೆದವಳೆಂದರೆ ಬಾಸ್ರಾದ ರಾಣಿ!"

ಫಕೀರನ ಈ ಮಾತಿನಿಂದ ನನ್ನ ಉದಾರತೆಯ ಕಲಶವು ಕೆಳಗುರುಳಿ ಮಣ್ಣುಪಾಲಾಯಿತು. ಆಗ ನಾನು ಆತನನ್ನು ಕುರಿತು ನಾನವನ ವಿಚಾರವಾಗಿ ಆಡಿದ ದುರುನುಡಿಗಳನ್ನೂ, ಅವಿವೇಕದ ಮಾತುಗಳ್ನೂ ಮನ್ನಿಸಿ ತನಗೆ ಬೇಕಾದಷ್ಟು ಮೊಹರುಗಳನ್ನು ಪಡೆಯಬೇಕೆಂದೂ ನಾನು ಪ್ರಾರ್ಥಿಸಿದನು. ಅದಕ್ಕವನು ; "ಬೇಕಾದಷ್ಟು ಮೊಹರುಗಳು ! ಸುಲ್ತಾನರೇ ! ಫಕೀರನಿಗೇಕೆ ಮೊಹರುಗಳು ! ನಿಮ್ಮ ಮೊಹರುಗಳನ್ನೇಕೆ ? ಅವುಗಳ ಮೇಲಿರುವ ಮಲಿನ ವನ್ನೂ ನಾನು ಮುಟ್ಟಲಾರೆ, ನಿಮ್ಮ ಇಡೀ ರಾಜ್ಯವನ್ನೇ ನನಗೆ ಕೊಡುವು ದಾದರೂ ನಾನವನ್ನು ಕಡೆಗಣ್ಣಿನಿಂದಲೂ ನೋಡಲಾರೆ."

ಹೀಗೆನ್ನುತ್ತ ಅಲ್ಲಿ ನಿಲ್ಲದೆ ಫಕೀರನು ಅವಸರವಸರವಾಗಿ ಹೊರಟು ಹೋದನು. ಬಾಸ್ರಾದ ರಾಣಿ ! ಹೌದು ; ಬಾಸ್ರಾದ ರಾಣಿ ! ಈ ರಾಣಿ ಯಾರಿರಬಹುದು ? ಆಕೆಯನ್ನು ನಾನು ಹೋಗಿ ನೋಡಲೇ ಬೇಕು. ಫಕೀ ರನು ಪ್ರಶಂಸಿದ ಆಕೆಯ ಆ ಮಹದುದಾರ ಕ್ರಮಗಳನ್ನೂ ನಾನು ಕಲಿಯಲೇ ಬೇಕು ; ಕಲಿತು ಅನುಸರಣೆಗೆ ತರಲೇಬೇಕು ; ಆಕೆಯ ಪ್ರಶಂಸೆ ! ನನ್ನನಿಂದೆ ! ಹೇಗೆ ಸೈರಿಸಲಿ ? ನನ್ನ ಮನಸ್ಸಿನ ಶಾಂತಿಯು ಅಳಿಯಿತು. ಆಕೆಯನ್ನು ನೋಡಬೇಕು ; ಆದಷ್ಟು ಶೀಘ್ರವಾಗಿ ನೋಡಲೇ ಬೇಕು—ಎಂದು ನಾನು ನಿರ್ಧರಿಸಿದೆ.

× × × × × ×

ಇನ್ನು ಇರಾನ್ ರಾಷ್ಟ್ರವು ಅತ್ಯಂತ ಹಿರಿದಾದುದು. ಅದರ ಒಡೆತನವು ಸಾಧಾರಣವಾದುದೇ ? ನನ್ನ ಶಾಸನಕ್ಕೆ ಎದಿರುತ್ತರ ಹೇಳುವವರಿರಲಿಲ್ಲ. ರಾಜ್ಯಾಡಳಿತ ಸೂತ್ರಗಳನ್ನು ಕೈಕೊಂಡ ಮೇಲೆ ನನಗೆಲ್ಲಿಯ ಬಿಡುವು ? ಆದರೂ ಮಧ್ಯೆ ಮಧ್ಯೆ ನನ್ನ ದೃಷ್ಟಿಯು ಚಲಿಸುತ್ತಲೇ ಇತ್ತು. ಬಾಸ್ರಾದ ರಾಣಿ ! ಬಾಸ್ರಾವಿಗೆ ಹೋಗಬೇಕು. ಆ ರಾಣಿಯನ್ನು ಕಾಣಬೇಕು— ಎಂಬ ಹಂಬಲವು ದಿನೇ ದಿನೇ ನನ್ನ ಮನಸ್ಸಿನಲ್ಲಿ ಬಲಿಯತೊಡಗಿತು. ಏನು ಮಾಡಿದರೂ ಆ ಹಂಬಲವನ್ನು ತೊಡೆದು ಹಾಕಲು ನನಗೆ ಸಾಧ್ಯ ವಾಗಲೇ ಇಲ್ಲ. ನಾನು ನನ್ನ ವಜೀರನೊಂದಿಗೆ ನನ್ನ ಬಯಕೆಯನ್ನು ಕುರಿತು ಪ್ರಸ್ತಾಪಿಸಿದೆ. ಇರಾನ್ ಚಕ್ರಾಧಿಪತ್ಯದ ಸಿಂಹಾಸನಕ್ಕೆ ಪ್ರಬಲ ತೆರನಾದ

ಬೆಂಬಲ ನೀಡುತ್ತಿದ್ದ ಇಸ್ಫಾನ್ ನಾಯಕರಲ್ಲಿಯೂ ನನ್ನ ಉದ್ದೇಶವನ್ನು ಪ್ರಕಟಪಡಿಸಿದೆ. ಬಾಸ್ರಾಗೆ ಹೋಗದಿದ್ದರೆ ನನ್ನ ಮನಸ್ಸು ಶಾಂತಗೊಳ್ಳದು ಎಂದೂ ಹೇಳಿದೆ. ನಾನು ಇರಾನಿನಿಂದ ಹೊರಟನಂತರ ಒಬ್ಬೊಬ್ಬರೂ ತಂತಮ್ಮ ಸ್ಥಾನದಲ್ಲಿ ಸುಭದ್ರವಾಗಿ ನಿಲ್ಲಿಬೇಕೆಂದೂ, ಸಿಂಹಾಸನದ ಗೌರವ ವನ್ನು ಕಾಪಾಡುತ್ತ ಬರಬೇಕೆಂದೂ ನಾನಾವರನ್ನು ಕೇಳಿಕೊಂಡೆ. ಜೀವ ದೊಂದಿಗಿದ್ದರೆ ನಾನು ಬಹುಬೇಗನೆ ಬಾಸ್ರಾದಿಂದ ಹಿಂದಿರುಗಿ ಬರುವೆನೆಂದೂ ಭರವಸೆಯಿತ್ತೆ.

ನಾನು ರಾಜ್ಯವನ್ನು ಬಿಟ್ಟುಹೊರಡುವುದು ವಜೀರನಿಗಾಗಲಿ, ಪ್ರಾಂತ್ಯ ನಾಯಕರಿಗಾಗಲಿ, ಪ್ರಧಾನ ಕಾರ್ಯದರ್ಶಿಗಳಿಗಾಗಲಿ ಸಮ್ಮತವಿರಲಿಲ್ಲ. ಆ ತೆರನೆ ನಾನು ರಾಜ್ಯದಿಂದ ಹೊರಟುಹೋದರೆ ಶತ್ರುಭಯವು ತಲೆದೋರೀ ತೆಂದು ಅವರು ನನ್ನನ್ನು ಎಚ್ಚರಿಸಿದರು. ಆದರೂ ಅವರಿಗೆ ಆಶಾಭಂಗವ ಮನ್ನುಂಟುಮಾಡಿ ನಾನು ಹೊರಡಲು ಸಿದ್ಧನಾದೆ. ಆ ನಿರ್ಧಾರದಿಂದ ಅವ ರೆಲ್ಲರ ಮನಸ್ಸಿಗೆ ಎಷ್ಟೊಂದು ದುಃಖವುಂಟಾಯಿತೆಂದು ನಾನು ಗ್ರಹಿಸಿದೆ. ಆದರೆ ಬೇರೆ ಉಪಾಯವಿರಲಿಲ್ಲ. ಫಕೀರನು ಹೇಳಿದ ಮಾತಿನಿಂದ ನನ್ನ ಮನಸ್ಸು ಕದಡಿಹೋಗಿತ್ತು. ಸ್ವಲ್ಪಕಾಲ ನಾನು ಏನೊಂದನ್ನೂ ಪ್ರಸ್ತಾಪಿಸದೆ ಸುಮ್ಮ ನಿದ್ದು ಬಿಟ್ಟೆ. ಆದರೆ ಒಂದು ದಿನ ನನ್ನ ಕುತೂಹಲವು ಅತ್ಯಂತ ಪ್ರಬಲ ವಾಯಿತು. ನಾನಿನ್ನು ಅದನ್ನು ತಡೆಗಟ್ಟಲಾಗಲಿಲ್ಲ. ಯಾರೊಂದಿಗೂ ಪರ್ಯಾಲೋಚನೆ ನಡೆಸ ಬಯಸಲಿಲ್ಲ. ಆದರೆ ಬುದ್ಧಿವಂತನಾದ ವೃದ್ಧ ವಜೀರ ನನ್ನು ನನ್ನ ಬಳಿಕ ಕರೆಯಿಸಿಕೊಂಡೆ. ನಾನು ರಾಜ್ಯದಲ್ಲಿಲ್ಲದ ಕಾಲದಲ್ಲಿ ಅಧಿಕಾರ ಸೂತ್ರಗಳೆಲ್ಲವನ್ನೂ ಆತನು ಸಂಪೂರ್ಣವಾಗಿ ವಹಿಸಬೇಕೆಂದೂ, ಬಾಸ್ರಾದಿಂದ ನಾನು ಹಿಂತಿರುಗಿ ಬರುವವರೆಗೂ ಪ್ರಜೆಗಳನ್ನು ಪ್ರೀತಿ ವಿಶ್ವಾಸ ಗಳಿಂದ ಪಾಲಿಸುತ್ತಿರಬೇಕೆಂದೂ ಆತನಿಗೆ ಒಪ್ಪಿಸಿದೆ. ಆತನನ್ನು ಚಕ್ರಾಧಿ ಪತ್ಯದ ಮುಖ್ಯಸ್ಥನಾಗಿ ನಿಯಮಿಸಿದೆ. ಇಷ್ಟವಿಲ್ಲದ ಇಷ್ಟದಲ್ಲಿ ಆತನು ನನ್ನಿಂದ ರಾಜ್ಯಾಡಳಿತ ಸೂತ್ರಗಳನ್ನು ವಹಿಸಿಕೊಂಡನು. ಯಾತ್ರಿಕರಿಗೆ ಯೋಗ್ಯವಾದ ಹಳದಿ ಬಟ್ಟೆಯನ್ನು ಧರಿಸಿ ನಾನು ಏಕಾಂಗಿಯಾಗಿ ಬಾಸ್ರಾದ ಕಡೆ ಹೊರಟೆ.

ನಾನು ಬಾಸ್ರಾ ರಾಜ್ಯದ ಎಲ್ಲೆಯನ್ನು ಮುಟ್ಟಿದೆ. ಅಂದಿನಿಂದ ನಾನು ಹೊಂದಿದ ಅನುಭವವನ್ನು ವರ್ಣಿಸಲು ಸಾಧ್ಯವಿಲ್ಲ. ಅದು ಅತ್ಯಂತ ವಿಚಿತ್ರ ವಾಗಿಯೂ ಆನಂದಕರವಾಗಿಯೂ ಇದ್ದಿತು, ಆ ರಾಜ್ಯದಲ್ಲಿ ನಾನು ರಾತ್ರಿ ವೇಳೆ ತಂಗುತಿದ್ದ ಸ್ಥಳಕ್ಕೆ ಹಲವಾರು ಪುರುಷ ಸೇವಕರು ನನ್ನನ್ನು ಎದು ರ್ಗೊಂಡು ಸುಂದರಭವನದಲ್ಲಿ ನನ್ನನ್ನು ಬಿಡಾರಮಾಡಿಸುತ್ತಿದ್ದರು. ರುಚಿಕರ ವಾದ ಅಡುಗೆಯನ್ನು ಬಡಿಸಿ ಹೊಟ್ಟೆ ತುಂಬ ಊಟಮಾಡುವಂತೆ ನನ್ನನ್ನು ಒತ್ತಾಯಪಡಿಸುತ್ತಿದ್ದರು. ಊಟವು ಮುಗಿದನಂತ ಹಂಸತೂಲಿಕಾತಲ್ಪದಲ್ಲಿ ನನ್ನನ್ನು ಮಲಗಿಸುತ್ತಿದ್ದರು. ಸೇವಕರು ಸದಾ ನನ್ನ ಸೇವೆಗೆ ಟೊಂಕ ಕಟ್ಟಿ ನಿಂತಿರುತಿದ್ದರು. ಕೊನೆಗೆ ನಡುರಾತ್ರಿಯಲ್ಲಿ ನಿದ್ದೆಯಿಂದೆಚ್ಚೆತ್ತು ನೀರು ಕುಡಿ ಯಬೇಕೆಂಬ ಬಯಕೆಯಿಂದ ಮಂಚದಿಂದ ಕೆಳಗಿಳಿಯ ಹೋದರೆ ಆಗಲೇ ಸೇವಕರು ಸಿದ್ಧ! ಚಿನ್ನದ ಹೂಜಿಯಲ್ಲಿ ನೀರನ್ನು ತಂದು ನನ್ನ ಬಾಯಿಗಿಟ್ಟು ಕುಡಿಸುತ್ತಿದ್ದರು. ಇರಾನ್ ಚಕ್ರಾಧಿಪತ್ಯಕ್ಕೆ ಒಡೆಯನಾದರೂ, ನನ್ನ ಅರಮನೆ ಯಲ್ಲಿ ಇಂತಹ ಶಿಸ್ತು, ಸಿದ್ಧತೆ, ವ್ಯವಸ್ಥೆ, ಉಪಚಾರಗಳನ್ನು ನೋಡಲಾಗುತ್ತಿರ ಲಿಲ್ಲ. ರಾಣಿಯಿಂದ ಆಜ್ಞಾಪಿಸಲ್ಪಟ್ಟ ಈ ಸೇವಕರು ತಮ್ಮತಮ್ಮ ಪಾತ್ರವನ್ನು ಅಷ್ಟೊಂದು ಸಮರ್ಪಕವಾಗಿ ನಡೆಸುತ್ತಿದ್ದರು. ಇವರ ಕೈಯಲ್ಲಿ ಸಿಕ್ಕಿಬಿದ್ದ ಪ್ರಯಾಣಿಕರು ಪ್ರಜೆಗಳಾಗಿರಲಿ, ಪ್ರಧಾನಿಗಳಾಗಿರಲಿ, ಪ್ರಭುವಾಗಿರಲಿ; ಫಕೀರರಾಗಿರಲಿ, ಎಲ್ಲರಿಗೂ ಇವರು ನೀಡುತ್ತಿದ್ದ ಸತ್ಕಾರವು ಒಂದೇ ತೆರನಾದು ದೆಂದು ಕಾಲಕ್ರಮೇಣ ನಾನು ಅರಿತುಕೊಂಡೆ. ಹೀಗೆ ರಾತ್ರಿ ಒಂದೆಡೆ ಬಿಡಾರಮಾಡಿದರೆ ಶಯನಗೃಹದಿಂದ ಹಿಡಿದು ಹೊರಬಾಗಿಲವರೆಗೆ ಸೇವಕರು ರಾತ್ರಿಯೆಲ್ಲ ನಡುಕಟ್ಟಿ ನಿಂತು ಸದಾ ಸೇವೆಗೆ ಸಿದ್ಧರಾಗಿರುತ್ತಿದ್ದರು. ವೈರಿಗಳ ಪಂಗಡದವರು ಪ್ರಭುವಿನ ಪಾಳೆಯವನ್ನು ಹೊಕ್ಕು ಅವನ ಪ್ರಾಣಕ್ಕೇ ಸಂಚ ಕಾರ ತಂದಕಾಲದಲ್ಲಿ ಆ ಪ್ರಭುವಿನ ಸೈನಿಕರು ಭಂಗಿ, ಕುಡಿದೋ, ಅಫೀಮು ತಿಂದೋ, ಗಾಂಜ ಸೇದಿಯೋ, ನಿಷಾಪಿಶಾಚಿಯ ಹಿಡಿತಕ್ಕೆ ಸಿಲುಕಿ ಮೈ ಮರೆತೋ ರಾಜ್ಯದ ಸೋಲಿಗೆ ಕಾರಣರಾದ ದೃಷ್ಟಾಂತಗಳು ಎಷ್ಟೋ ಇವೆ. ಹೀಗಿರುವಲ್ಲಿ ಶುದ್ಧ ಅಪರಿಚಯಸ್ಥ ಪ್ರಯಾಣಿಕರನ್ನು ಎದಿರ್ಗೊಂಡು, ಅವರ ಆಸ್ತಿ ಅಂತಸ್ತುಗಳನ್ನು ಗಮಸಿಸದೆ ಅವರಿಗೆ ರಾಜಯೋಗ್ಯವಾದ ಷೋಡಶೋಪ ಚಾರಮಾಡುವ ಪ್ರಬಲ ವ್ಯವಸ್ಥೆಯನ್ನು ತನ್ನ ರಾಜ್ಯದ ಎಲ್ಲ ಭಾಗದಲ್ಲೂ

ನೆಲೆಗೊಳಿಸಿದ್ದ ಬಾಸ್ರಾ ರಾಣಿಯ ವಿವೇಚನೆ—ವೈಭವಗಳು ಎಷ್ಟು ಸ್ತುತ್ಯಾರ್ಹವಾದುವು! ರಾತ್ರಿ ತಂಗಿದ್ದ ಸ್ಥಳದಿಂದ ಪ್ರಾತಃಕಾಲ ಮುಂದೆ ಹೊರಡುವಾಗ ಮತ್ತೆ ಉಪಚಾರ! ಅದೇನು ಹಿಂಬಾಲಿಕೆ! ಅದೇನು ಗೌರವ! ಅದೇನು ಆದರ! ಗುರುತು ಕಂಡ ಮಾನವರು ಒಬ್ಬರ ಕೊರಳಿಗೊಬ್ಬರು ನಿಷ್ಕಾರಣವಾಗಿ ಉರುಲುಹಾಕುವ ಪ್ರಯತ್ನದಲ್ಲಿರುವ ಈ ಕೆಟ್ಟ ಪ್ರಪಂಚದಲ್ಲಿ ಅಪರಿಚಿತ ಪ್ರಯಾಣಿಕರಿಕೆ ಅಪರಿಚಿತ ಊಳಿಗದವರು ಮಾಡುವ ಈ ತೆರನಾದ ಅಪಾರ ಸತ್ಕಾರ! ವಿನಯದಿಂದ ಬರಮಾಡಿಕೊಳ್ಳುವಿಕೆ; ಗೌರವದಿಂದ ಹಿಂಬಾಲಿಸುವಿಕೆ! ಶ್ರದ್ಧೆಯಿಂದ ಶುಶ್ರೂಷೆ ಮಾಡುವಿಕೆ! ಅತಿಥಿಯ ಮನಸ್ಸಿನಲ್ಲಿ ಲೇಶಮಾತ್ರವಾದ ಖೇದವಾಗಲಿ, ಕೊರತೆಯಾಗಲಿ ಉಂಟಾಗಬಾರದೆಂದು ಬಯಸಿ, ಸತಿ, ಸುತ, ಸ್ನೇಹಿತ, ಸೇವಕ—ಇವರಾರೂ ಮಾಡಲಾರದ ತೆರನೆ ಮಾಡುವ ಆ ಲೋಪವಿಹೀನ—ಲೋಕೋತ್ತರ ಸೇವೆ! ಪ್ರಥಮ ದಿನದ ಅನುಭವವೇ ನನಗೆ ಅತ್ಯಂತ ಮನರಂಜಕವಾಗಿತ್ತು. ನನ್ನ ಎದೆಯು ಕೃತಜ್ಞತೆಯಿಂದಲೂ ಕೌತುಕದಿಂದಲೂ ತುಂಬಿಹೋಗಿತ್ತು. ಮರುದಿನ ನಗರದ ಮತ್ತೊಂದು ಭಾಗದಲ್ಲಿ ಅದೇ ತೆರನಾದ ಸ್ವಾಗತ; ಹಿಂದಿನ ದಿನಕ್ಕಿಂತ ಅತಿಶಯವಾದ ಸತ್ಕಾರ; ಮುಂದೆ ಮುಂದೆ ಹೋದಂತೆಲ್ಲ ರಾಜ್ಯದ ಒಂದೊಂದು ಭಾಗದಲ್ಲಿಯೂ ಹೆಚ್ಚುಹೆಚ್ಚು ಅತಿಶಯವಾದ ಆದರ ಭರಿತ ಸ್ವಾಗತ, ಸತ್ಕಾರ ಅಪರಿಮಿತ ಸೇವೆ, ಹೀಗೆ ಒಂದೆರಡು ತಿಂಗಳು ನಾನು ಹಗಲೆಲ್ಲಾ ಪ್ರಯಾಣ ಮಾಡಿ ರಾತ್ರಿ ರಾಜ್ಯದ ಸೇವಕರು ಕರೆದೊಯ್ದೆಡೆ ಬಿಡಾರ ಮಾಡುತ್ತಿದ್ದೆ. ಎಲ್ಲೆಲ್ಲೂ ವರ್ಣನಾತೀತವಾದ ಸುಸ್ವಾಗತ! ಸುಮಧುರ—ಸಂತಸಭರಿತ ಸೇವೆ! ಕೊನೆಗೆ ನಾನು ರಾಣಿಯ ರಾಜಧಾನಿಯಾದ ಬಾಸ್ರಾ ನಗರವನ್ನು ಸೇರಿದೆ.

ಆ ನಗರದಲ್ಲಿ ಕಾಲಿಟ್ಟುದೇ ತಡ. ಉತ್ತಮ ಉಡುಗೆತೊಡುಗೆಗಳನ್ನು ಧರಿಸಿ, ನಯ ವಿನಯ ಸಂಪನ್ನನಾದ ಒಬ್ಬ ಆಗಂತುಕನು ನನ್ನ ಬಳಿ ಸಾರಿ ಅತ್ಯಂತ ಇಂಪಾದ ಮತ್ತು ಗೌರವಭರಿತ ಧ್ವನಿಯಲ್ಲಿ "ಮಹಾಶಯರೇ! ಪ್ರಯಾಣಿಕರನ್ನು ಎದಿರ್ಗೊಂಡು ಆದರಿಸಲೋಗ ನಿಯಮಿಸಲ್ಪಟ್ಟ ಸೇವಕ ನಾನು! ಸದಾ ಯಾತ್ರಿಕರ ಬರುವಿಕೆಯನ್ನೇ ಎದಿರು ನೋಡುತ್ತಿರಬೇಕಾದುದೇ ನನಗೆ ಒಪ್ಪಿಸಲ್ಪಟ್ಟ ಕೆಲಸ ಪ್ರಯಾಣಿಕರು ಫಕೀರರಾದರೂ ಸರಿ ಪ್ರಭು—ಪ್ರಧಾನಿಗಳಾದರೂ ಸರಿ. ಎಲ್ಲರೂ ನಮ್ಮ ನಾಡಿಗೆ ಪರಮಾದರಣೀಯರೇ!

ಅವರನ್ನೆಲ್ಲ ಪ್ರೀತಿಪುರಸ್ಕಾರಗಳಿಂದ ನನ್ನ ಗೃಹಕ್ಕೆ ಕರದೊಯ್ದು ಸತ್ಕರಿಸಿ ಸಂತೋಷಗೊಳಿಸಬೇಕಾದುದು ನನ್ನ ಕರ್ತವ್ಯ. ನಮ್ಮ ಮನೆಯನ್ನುಳಿದು ಈ ಪ್ರದೇಶದಲ್ಲಿ ತಂಗಿ, ವಿಶ್ರಾಂತಿ ಪಡೆಯಲು ಬೇರಾವ ಸ್ಥಳವೂ ಇರುವುದಿಲ್ಲ. ಅವರ ಊಟ ಉಪಚಾರಗಳ ವ್ಯವಸ್ಥೆಯೂ ಅಲ್ಲೆ. ಪವಿತ್ರಾತ್ಮರೇ! ತಮಗೆ ಪ್ರಣಾಮುಮಾಡಿ ಪ್ರಾರ್ಥಿಸುತ್ತೇವೆ. ನನ್ನ ಮೇಲೆ ದಯೆಯಿಟ್ಟು ನನ್ನ ಕುಟೀರಕ್ಕೆ ಬಿಜಯುಮಾಡಬೇಕು. ತಮ್ಮ ಪವಿತ್ರ ಪಾದ ಧೂಳಿಯಿಂದ ಅದನ್ನು ಪಾವನಗೊಳಿಸಬೇಕು ; ತಮ್ಮ ಆಗಮನದಿಂದ ನನ್ನ ಕುಟೀರವು ಪುನೀತವಾಗಲಿ ! ನನ್ನ ಆವರವನ್ನು ಉದಾರತೆಯಿಂದ ಸ್ವೀಕರಿಸಿ ನನ್ನನ್ನು ಉದ್ಧಾರಮಾಡಿ. ನನ್ನ ಈ ದೈನ್ಯವಾದ ಪ್ರಾರ್ಥನೆಯನ್ನು ಅಂಗೀಕರಿಸುವಿರಾ ? ಎಂದು ಅತ್ಯಂತ ನಮ್ರತೆಯಿಂದ ಬಿನ್ನವಿಸಿದನು.

"ಈ ಆನಂದಭರಿತ ಆದರಾತಿಶಯವನ್ನು ಅಪರಿಚಿತನಾದ ನನ್ನಮೇಲೆ ಯಥೇಚ್ಛವಾಗಿ ವರ್ಷಿಸುವ ಅಭ್ಯಾಗತರೇ! ತಮ್ಮ ಪುನೀತ ನಾಮಧೇಯವನ್ನು ನಾನು ತಿಳಿದುಕೊಳ್ಳಬಹುದೇ ?"

ನನ್ನ ಪ್ರಶ್ನೆಗೆ ಆ ಯುವಕನು ಹೀಗೆಂದನು :

"ಈ ಅಲ್ಪಮಾನವನಿಗೆ ಹೆಸರೊಂದು ಬೇಕಾಗಿದೆಯೆ ? ನನ್ನನ್ನು ನಗರ ದಲ್ಲಿ ಬೀವರ್ ಭಕ್ತ್ ಎಂದು ಕರೆಯುತ್ತಾರೆ".

ದಯಾಭರಿತನಾದ ಆ ಶೀಲ ಸಂಪನ್ನ ಯುವಕನ ಆಹ್ವಾನವನ್ನು ತಿರಸ್ಕರಿಸಲು ಸಾಧ್ಯವಾದೀತೇ ? ಆತನೊಡನೆ ಹೊರಟು ನಾನು ಆತನ ಕುಟೀರವನ್ನು ಸೇರಿದೆ. ನಾನೇನೆಂದೆ ? 'ಕುಟೀರ !' ಅದು ಕುಟೀರವೇ ? ಏತಕ್ಕಾದರೂ ಅದು ಕುಟೀರವೆಂದು ಕರಿಸಿಕೊಂಡೀತು. ಚಕ್ರವರ್ತಿ ಸಾರ್ವ ಭೌಮರ ಮಹದ್ವೈಭವಯುಕ್ತ ಸುಂದರ ಅರಮನೆಗಿಂತಲೂ ಅತಿಶಯ ವಿಸ್ತಾರವಾಗಿಯೂ, ಎತ್ತರವಾಗಿಯೂ, ಮನೋಹರವಾಗಿತ್ತು ಆ 'ಕುಟೀರ' ಅಭ್ಯಾಗತನು (host) ನನ್ನನ್ನು ಸುಂದರವೂ ಚಿತ್ತಾಕರ್ಷವೂ ಆದ ಆ ಭವನ ದೊಳಗೆ ಒಂದು ರಮಣೀಯ ವಿಶ್ರಾಂತಿ ಸ್ಥಳಕ್ಕೆ ನನ್ನನ್ನು ಕರೆದೊಯ್ದನು. ಸುಖಾಸದಲ್ಲಿ ಮಂಡಿಸಬೇಕೆಂದು ಪ್ರಾರ್ಥಿಸಿದನು. ಊಳಿಗದವರು ಮರುಕ್ಷಣ ದಲ್ಲೇ ಬಿಸಿನೀರನ್ನು ತಂದು ನನ್ನ ಕೈಕಾಲುಗಳನ್ನು ತೊಳೆದರು. ನೆಲಕ್ಕೆ

ಕನ್ನಡಿಯಂತೆ ಮಿಣುಗುಟ್ಟುತ್ತಿದ್ದ ಸ್ಪಟಿಕ ಶಿಲೆಯನ್ನು ಹಾಸಿತ್ತು. ಆ ನೆಲದ ಮೇಲೆ ಶ್ವೇತವಸ್ತ್ರ—ಅದರ ಮೇಲೆ ಹೊಳೆಯುವ ಬಳ್ಳಿಯ ತಟ್ಟೆಗಳು........ ಅವುಗಳಲ್ಲಿ ಅಸಂಖ್ಯಾತವಾದ ಭಕ್ಷ್ಯ ಭೋಜ್ಯಗಳು; ಮಿಠಾಯಿ–ಮೃಷ್ಟಾನ್ನ ಗಳು; ಅನೇಕ ತರಹೆಯ ಉತ್ಕೃಷ್ಟ ಫಲಗಳು! ಒಂದೊಂದು ವಿಧಾನದಲ್ಲೂ ಒಂದು ಹಿಡಿಯಷ್ಟು ತಿನ್ನುವ ವೇಳೆಗೆ ನನ್ನ ಹೊಟ್ಟೆ ತುಂಬಿ ಬಿರಿಯುವಂತಾ ಯಿತು. ಅಷ್ಟಕ್ಕೇ ಸಂತೃಪ್ತನಾದ ನಾನು ತೆಪ್ಪನೆ ಕುಳಿತೆ. ಆದರೆ ಯುವಕನು ಸುಮ್ಮನಿರುವನೇ? "ಏನಿದು? ಇನ್ನೂ ಊಟಕ್ಕೆ ನೆಟ್ಟಗೆ ಕುಳಿತುಕೊಳ್ಳಲಿಲ್ಲ. ಆಗಲೇ ಎದ್ದುಬಿಟ್ಟರಿ? ತಾವು ಏನನ್ನೂ ಸೇವಿಸಲಿಲ್ಲ. ಈ ಪದಾರ್ಥಗಳು ಮುಟ್ಟಿನೋಡುವುದಕ್ಕಲ್ಲ. ಅವುಗಳನ್ನುಂಡು ಸಂತೃಪ್ತರಾಗಬೇಕು. ತಟ್ಟೆ ಗಳೆಲ್ಲ ತುಂಬಿದಂತೆಯೇ ಇವೆ. ಇದೆಲ್ಲ ತಮ್ಮ ಸ್ವೀಕಾರಕ್ಕೆಂದೇ ಬಡಿಸ ಲ್ಪಟ್ಟವು. ಪರಿಗ್ರಹಿಸಿ; ನಿರಾಕರಿಸಬೇಡಿ. ಹಿಂತಿರುಗಿ ಹೊತ್ತುಕೊಂಡು ಹೋಗಿ ನಾವೇನು ಇದನ್ನೆಲ್ಲ ಕೂಡಿಡಬೇಕೆ? ದಯೆಯಿಟ್ಟು ಸಂಕೋಚವನ್ನು ತೊರೆಯಿರಿ. ಸಂತೋಷದಿಂದ ಭುಜಿಸಿ.'' ಮೇಲಿಂದ ಮೇಲೆ ಅವನ ಒತ್ತಾಯ. ಅಗ ನಾನು ಹೇಳಿದೆ: "ಮಹಾನುಭಾವ! ಸಾಕು; ನಾನು ಸಂತುಷ್ಟನಾದೆ. ಇನ್ನೊಂದು ಅಂಗುಲದಷ್ಟೂ ನನ್ನ ಹೊಟ್ಟೆಯಲ್ಲಿ ಸ್ಥಳವಿಲ್ಲ. ಈಗಾಗಲೇ ಉಬ್ಬರದಿಂದ ಒದ್ದಾಡುತ್ತಿದ್ದೇನೆ. ಮನ್ನಿಸಬೇಕು. ಈ ತಟ್ಟೆ ಬಟ್ಟಲು ಗಳನ್ನು ಹೊತ್ತುಕೊಂಡು ಹೋಗುವಂತೆ ನಿಮ್ಮ ಸೇವಕರಿಗೆ ಅಪ್ಪಣೆಮಾಡಿ." ಎಂದೆ ನಾನು. ಸೇವಕರು ತಟ್ಟೆಬಟ್ಟಲುಗಳನ್ನು ತೆಗೆದುಕೊಂಡುಹೋದರು. ಆ ಬಳಿಕ ಇತರ ಸೇವಕರು ಒಂದು ಮಕಮಲ್ ರತ್ನಗಂಬಳಿಯನ್ನು ತಂದು ಹಾಸಿದರು. ಅದರಮೇಲೆ ಕುಳಿತುಕೊಳ್ಳಬೇಕೆಂದು ಅಭ್ಯಾಗತನು ನನ್ನನ್ನು ಪ್ರಾರ್ಥಿಸಿದನು. ಸೇವಕರು ಅಗಲವೂ ಆಳವೂ ಆದ ಒಂದು ತಟ್ಟೆಯಲ್ಲಿ ನನ್ನ ಕೈಗಳಿಗೆ ಬಿಸಿನೀರು ಹಾಕಿ, ಸಾಬೂನಿನಿಂದ ತಿಕ್ಕಿ, ತೊಳೆದು, ಶುಭ್ರ ವಸ್ತ್ರದಿಂದ ಕೈಗಳನ್ನೊರಸಿ ಪರಿಮಳಯುಕ್ತ ಅತ್ತರನ್ನು ಹಚ್ಚಿದರು. ಕುಡಿಯು ವುದಕ್ಕೆ ನೀರು ಎಂದು ಕೇಳಿದೆ. ತಕ್ಷಣ ಮಂಜುಗಡ್ಡೆಯಲ್ಲಿ ತಂಪಾಗಿ ಮಾಡಿದ್ದ ತಣ್ಣೀರನ್ನು ತಂದುಕೊಟ್ಟರು. ಅವರು ನನಗೆ ಮಾಡಿದ ಸೇವೆ ಅಳವಿಗೆ ನಿಲುಕದು.

ಹಗಲೆಲ್ಲ ನಾನು ಹಂಸತೂಲಿಕಾ ತಲ್ಪದಲ್ಲಿ ಪವಡಿಸಿ, ಸೇವಕ ಸೇವಕಿಯರಿಂದ ಬೀಸಣಿಗೆ ಹಾಕಿಸಿಕೊಳ್ಳುತ್ತ ಸುಖವಾಗಿ ವಿಶ್ರಾಂತಿಗೊಂಡೆ. ಸಂಧ್ಯಾ ಸಮಯವು ಮುಗಿದು ಕತ್ತಲು ಕವಿಯುತ್ತಿದ್ದಂತೆ ಕರ್ಪೂರದ ವಾಸನೆಯಿಂದ ಕೂಡಿದ್ದ ಮಯಣದ ಬತ್ತಿಗಳನ್ನು ಹಚ್ಚಿ—ಗಾಜಿನ ಲೋಟಗಳಲ್ಲಿರಿಸಿ, ಕೊಠಡಿಯನ್ನು ಪ್ರಕಾಶಗೊಳಿಸಿದರು. ಯುವಕ ಅಭ್ಯಾಗತನು ನನ್ನ ಕಾಲ ಬಳಿ ಕುಳಿತು ನನ್ನ ಪಾದಗಳನ್ನು ಒತ್ತುತ್ತ ಮನಾಹ್ಲಾದಕರ ಸಂಭಾಷಣೆಗಳಿಂದ ನನ್ನ ಮನಸ್ಸನ್ನು ರಂಜಿಸುತ್ತಿದ್ದನು. ಸ್ವಲ್ಪಕಾಲಾನಂತರ ಹಗಲಿಗಿಂತಲೂ ಅತಿಶಯವಾಗಿ ರಾತ್ರಿ ಭೋಜನವೂ ಮುಗಿಯಿತು. ನನ್ನನ್ನು ಶಯನಗೃಹಕ್ಕೆ ಕರೆದುಕೊಂಡುಹೋಗಿ ಮೆತ್ತನೆಯ ಸುಪ್ಪತ್ತಿಗೆಯಮೇಲೆ ಮಲಗಿಸಿದರು. ನನಗೆ ನಿದ್ರೆ ಬರುವವರೆಗೂ ನನ್ನ ಆಜ್ಞೆಯನ್ನು ನಿರೀಕ್ಷಿಸುತ್ತ ಸುತ್ತಲೂ ಸೇವಕರು ಸಿದ್ಧರಾಗಿ ಕಾದಿದ್ದರು.

"ದಯಾಮಯ ಅಭ್ಯಾಗತನೇ!" ನಾನು ಯುವಕನನ್ನು ಕುರಿತು ಹೇಳಿದೆ : ''ನನ್ನಂತಹ ಪಾರಮಾರ್ಥಿಕ ಯಾತ್ರಿಕರಿಗೆ ಮಲಗಿಕೊಳ್ಳಲು ಒಂದು ಚಾಪೆಯೋ—ಜಿಂಕೆಯ ತೊಗಲೋ ನೆಲದ ಮೇಲೆ ಹಾಸಿದ್ದರೆ ಸಾಕು. ಚಕ್ರವರ್ತಿ ಯೋಗ್ಯವಾದ ಈ ಮಂಚ! ಈ ಹಂಸ ತೂಲಿಕಾತಲ್ಪ! ಇದೆಲ್ಲ ಏತಕ್ಕೆ? ಲೌಕಿಕ ವ್ಯವಹಾರದಲ್ಲಿರುವವರಿಗೆಂದು ಭಗವಂತನಿಂದ ಸೃಷ್ಟಿ ಹೊಂದಿದ ಸುಂದರ ಸೌಲಭ್ಯಗಳು ಇವೆಲ್ಲ!"

"ಶ್ರೇಷ್ಠ ಅತಿಥಿಗಳೇ!" ಯುವಕನು ಹೇಳಿದ. "ಮಹಾರಾಜ್ಞಿಯವರ ಮಹದಾಜ್ಞೆಯನ್ನನುಸರಿಸಿ ಇವೆಲ್ಲ ಸೌಕರ್ಯಗಳೂ ಯಾತ್ರಿಕರ ಪೂರ್ಣಾನುಭವಕ್ಕಾಗಿಯೇ ಮೀಸಲಾದವು. ಇವೊಂದೂ ನನಗೆ ಸೇರಿದುವಲ್ಲ. ಈ ಮಂಚ, ಈ ಸುಪ್ಪತ್ತಿಗೆ, ತಾವು ಉಪಯೋಗಿಸಿದ ಉಡುಪು ತೊಡವುಗಳು, ಬೆಳ್ಳಿ ಭಂಗಾರದ ಆ ತಟ್ಟೆ ಬಟ್ಟಲುಗಳು, ರತ್ನಖಚಿತವಾದ ಆ ಹೂಜಿಗಳು........ ಇತ್ಯಾದಿಯಾದೆಲ್ಲವೂ ತಮ್ಮದೇ! ಅವುಗಳನ್ನೆಲ್ಲ ಹೊರಡುವಾಗ ತಾವು ತಮ್ಮೊಡನೆ ತೆಗೆದುಕೊಂಡು ಹೋಗಬೇಕು. ಅವುಗಳನ್ನು ಎಲ್ಲಿಗೆ ಕಳುಹಿಸಬೇಕೆಂದರೆ ಅಲ್ಲಿಗೆ ಕಳುಹಿಸಿಕೊಡುತ್ತೇವೆ. ಅದರಿಂದ ತಮಗೆ ಭಾರವಾಗಲಾರದಲ್ಲವೆ?" "ಒಲ್ಲೆ" ನಾನು ಹೇಳಿದೆ. ''ಇವೊಂದನ್ನೂ ನಾನು ಒಲ್ಲೆ. ಇವುಗಳನ್ನೆಲಾ ನಾನು ಎಲ್ಲಿಗೆ ತೆಗೆದುಕೊಂಡು ಹೋಗಲಿ ? ಏನು ಮಾಡಲಿ?"

"ಬೇಡವೆಂದು ಬಿಟ್ಟುಹೋದರೆ ನಮ್ಮ ಒಡತಿಯು ನನ್ನಮೇಲೆ ಕುಪಿತಳಾಗಿ ನನ್ನನ್ನು ಕೆಲಸದಿಂದ ನಿವೃತ್ತಿಮಾಡಿಯಾಳು. ಏಕೆ ? ಕರ್ತವ್ಯ ಲೋಪ ಮಾಡಿದವನೆಂದು ಆರೋಪಿಸಿ ನನ್ನನ್ನು ಸೆರೆಮನೆಯಲ್ಲಿ ತಳ್ಳಿಸಿಯಾಳು. ಆಕೆ ಕಟ್ಟಾಜ್ಞೆ ಹಾಗಿದೆ. ಅತಿಥಿಗಳು ತಾವು ಇಲ್ಲಿ ಉಪಯೋಗಿಸುವ ಪದಾರ್ಥಗಳನ್ನು ತಮ್ಮೊಡನೆ ತೆಗೆದುಕೊಂಡು ಹೋಗದೆ ಇರಲು ಸಾಧ್ಯವೇ ಇಲ್ಲ."

ನಮ್ಮಿಬ್ಬರಿಗೂ ವಾದವಿವಾದಗಳು ನಡೆದುವು. ತೆಗೆದುಕೊಂಡು ಹೋಗಲಾರೆ ಎಂದು ನಾನು—ಹೋಗಲೇಬೇಕೆಂದು ಆತ. ಕಟ್ಟಕಡೆಯಲ್ಲಿ ನನಗೆ ದತ್ತವಾದುವೆಂದು ಹೇಳಲಾದ ಎಲ್ಲ ಪದಾರ್ಥಗಳನ್ನೂ ನನಗಾಗಿ ಅಲ್ಲೆ ಒಂದು ಕೊಠಡಿಯಲ್ಲಿ ಹಾಕಿ, ಬೀಗಹಾಕಬೇಕೆಂದೂ, ಆ ಬೀಗಕ್ಕೆ ನಾನು ನನ್ನ ಮೊಹರನ್ನು ಹಾಕಬೇಕೆಂದೂ ತೀರ್ಮಾನವಾಯಿತು. ನಾನು ವಿಧಿಯಿಲ್ಲದೆ ಆ ಸಲಹೆಗೆ ಒಪ್ಪಿದೆ.

ತರುಣ ಅಭ್ಯಾಗತನ ದೃಷ್ಟಿಯಿಂದ ಮರೆಯಾಗಿ ಸ್ವಲ್ಪ ದೂರ ನಡೆದು ಹೋಗುವ ವೇಳೆಗೆ, ಉತ್ತಮ ಉಡುಪುಗಳನ್ನು ಧರಿಸಿದ ರಾಹುತರೂ ಅವರ ನಾಯಕನಾಗಿ ಅರಮನೆಯ ಮೋಃಕ್ಷ್ತೇಸರನೂ ನನ್ನೆದುರಿಗೆ ಬಂದರು. ರಾಹುತರ ಉಡುಪಿಗಿಂತಲೂ ಮೋಃಕ್ಷ್ತೇಸರನ ಉಡುಪು ಇನ್ನೂ ಆಕರ್ಷಣೀಯವಾಗಿತ್ತು. ಮೋಃಕ್ಷ್ತೇಸರನ್ನು ಹಿಂಬಾಲಿಸಿ, ರಾಣಿಯ ಕೈಕೆಳಗೆ ವಿವಿಧವಾದ ಮುಖ್ಯ ಪದವಿಗಳನ್ನು ಅಲಂಕರಿಸಿದ್ದ ಅಧಿಕಾರಿಗಳೂ ಹೊರಟುಬಂದಿದ್ದರು. ಮೋಃಕ್ಷ್ತೇಸರನು ನನ್ನನ್ನು ಕಂಡು "ತಾವು ನನ್ನ ಕುಟೀರಕ್ಕೆ ದಯಮಾಡಿಸಿ, ನನ್ನ ಅಲ್ಪ ಸತ್ಕಾರವನ್ನು ಸ್ವೀಕರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು" ಎಂದು ಸವಿನಯವಾಗಿ ಬೇಡಿಕೊಂಡನು.

ನನಗೆ ಒಳ್ಳೆಯ ಇಕ್ಕಟ್ಟಿನ ಪ್ರಸಂಗ ಒದಗಿದಹಾಗಾಯಿತು. ಅಡಿಗೊಬ್ಬ ಅಭ್ಯಾಗತರು ! ಮುಕ್ಕು ಮುರಿಯ ತಿನ್ನಿಸುವ ಮಹೌದಾರಿಗಳು ! ಮೊದಡುವ ಮುನ್ನ ಬೆಳ್ಳಿ ಭಂಗಾರದ ತಟ್ಟೆಬಟ್ಟಲುಗಳು ರತ್ನಖಚಿತ ಹೂಜಿ, ಮಲಗಿದ್ದ ಮಂಚ, ಮೆತ್ತನೆಯ ಹಾಸಿಗೆ, ಎಲ್ಲವನ್ನೂ ಹೊತ್ತುಕೊಂಡು ಹೋಗುವಂತೆ ಒತ್ತಾಯಪಡಿಸತಕ್ಕವರು ! ನಾನು ಮೋಃಕ್ಷ್ತೇಸರನ್ನು ಕುರಿತು ಹೇಳಿದೆ : "ಮಹಾಶಯರೇ! ಮನ್ನಿಸಬೇಕು. ನಿಮ್ಮ ರಾಜ್ಯದಲ್ಲಿ ಕಾಲಿಟ್ಟಮೇಲೆ ಈ

ಎರಡು ತಿಂಗಳಿಂದ ಇದುವರೆಗೆ ಒಂದು ದಿನವೂ ಎಡೆಬಿಡದೆ ದೊರೆತ ಸುಸ್ವಾಗತಕ್ಕೂ, ಊಟ ಉಪಚಾರಗಳಿಗೂ ನಾನು ಅತ್ಯಂತ ಋಣಿ. ಹೀಗೆ ಒಂದು ದಿನವೂ ಬಿಡದೆ ಇಂತಹ ಹಬ್ಬದ ಊಟವನ್ನು ಮಾಡುತ್ತಿದ್ದರೆ ಬದುಕಲಾದೀತೇ? ಎಂತೆಂತಹ ಊಟ! ಏನೇನು ಉಪಚಾರ! ನಾನು ಸಂತೃಪ್ತನಾದೆ. ಆದರೆ ನಾನು ಫಕೀರ. ನನಗೇತಕ್ಕೆ ಈ ತೆರನಾದ ರಾಜೋಪಚಾರ? ಈ ಸಂಪತ್ತಿನ ಶಯ್ಯೆ? ನೀವು ಉದಾರತೆಯಿಂದ ಕೊಡುವ ಧನ, ಕನಕ, ವಸ್ತು, ವಸ್ತ್ರಾದಿಗಳನ್ನು ನಾನು ಎಲ್ಲಿಗೆ ಹೊತ್ತುಕೊಂಡು ಹೋಗಲಿ? ಏನು ಮಾಡಲಿ? ಈ ರೀತಿ ನಾನು ದಿನವಹಿ ಅತಿಥಿಯಾಗಿ ನಿಂತರೆ ನಾನು ಬಾಸ್ರಾಗೆ ಬಂದ ಉದ್ದೇಶವೇ ಮರೆತುಹೋದೀತಲ್ಲವೆ? ಆದುದರಿಂದ ನನ್ನನ್ನು ಬಲವಂತಪಡಿಸಕೂಡದು; ಕೃಪೆಯಿಟ್ಟು ಮನ್ನಿಸಬೇಕು" ಎಂದು ಬೇಡಿಕೊಂಡೆ. ಆದರೆಮೊದಲನೆಯ ಅಭ್ಯಾಗತನು ಹೇಳಿದಂತೆಯೇ ಮೋಃಕ್ಷೇಸರನೂ ಸಹ ಹೇಳಿದ: "ಮಹಾಶಯ! ಅಪರಿಚಿತ ಯಾತ್ರಿಕರನ್ನು ಕಂಡ ಒಡನೆಯೆ ಆದರದಿಂದ ಸ್ವಾಗತಿಸಿ, ಸ್ವಗೃಹಕ್ಕೆ ಕರೆದುಕೊಂಡು ಹೋಗಿ ಸತ್ಕರಿಸಿ ಸಕಲೋಪಚಾರಗಳಿಂದ ವಿಶ್ರಾಂತಿಯನ್ನು ಒದಗಿಸಿಕೊಡಬೇಕಾದುದು ನಮ್ಮ ಹೆಗಲ ಮೇಲೆ ಹೊತ್ತ ಕರ್ತವ್ಯ. ಆ ಕರ್ತವ್ಯವನ್ನು ಪರಿಪಾಲಿಸಲು ಮರೆತರೆ ಆಗ ರಾಣಿಯ ಆಜ್ಞೆಯನ್ನು ಉಲ್ಲಂಘಿಸಿ, ಆಕೆಯ ಸದುದ್ದೇಶಗಳನ್ನು ನಾಶಗೊಳಿಸಿದಂತಾಗುತ್ತದೆ. ಆಗ ಆಜ್ಞೆಯನ್ನು ಮುರಿದ ಯಾವ ಅಧಿಕಾರಿಯಾದರೂ ಮರಣದಂಡನೆಗೆ ಗುರಿಯಾದಾನು."

ನನಗೆ ದಿಕ್ಕು ತೋರಲಿಲ್ಲ. ವಿಧಿಯಿಲ್ಲದೆ ನಾನು ಮೋಃಕ್ಷೇಸರನ ಆಮಂತ್ರಣವನ್ನು ಅಂಗೀಕರಿಸಿ ಆತನೊಡನೆ ಅತನ ಗೃಹಾಭಿಮುಖವಾಗಿ ಹೊರೆಟೆ. ಮೂರು ಹಗಲು ಮತ್ತು ಮೂರು ರಾತ್ರಿಗಳನ್ನು ನಾನು ಆತನ ಅತಿಥಿಯಾಗಿ ಕಳೆದೆ. ಆದರೆ ಮನುಷ್ಯನ ಆವಶ್ಯಕತೆಯ ಅಳವನ್ನು ಮಿಂಚಿದ ಆ ತೆರನಾದ ಶುಶ್ರೂಷೆಯಿಂದ ನನಗೆ ಬೇಸರವೇ ಆಗುತ್ತ ಬಂದಿತೆನ್ನಬಹುದು. ಹೌದು; ಸಕ್ಕರೆ ಸಿಹಿಯಾಗಿದೆಯೆಂದು ಅದನ್ನು ಎಷ್ಟು ಎಂದು ತಿನ್ನಲಾದೀತು. ಅಳವಿಗೆ ಮಿಂಚಿತೆಂದರೆ ಅಮೃತವೂ ವಿಷವಾಗುತ್ತದಲ್ಲವೆ? ಕೊನೆಗೆ ನಾನು ಅಲ್ಲಿಂದ ಹೊರಡಲು ನನ್ನ ಅಭ್ಯಾಗತನ ಅನುಮತಿಯನ್ನು ಬೇಡಿದಾಗ

ನನ್ನನ್ನು ಕಳುಹಿಸಿಕೊಡಲು ಆತನಿಗೆ ಇಷ್ಟವೇ ಇರಲಿಲ್ಲ. ನನ್ನ ಒತ್ತಾಯವು ಪ್ರಬಲವಾದಾಗ ಆತನು ವಿಧಿಯಿಲ್ಲದೆ "ಆಗಲಿ, ನೀವು ಇಲ್ಲಿಂದ ತೆರಳ ಬಹುದು ; ಆದರೆ ನಿಮ್ಮ ಶುಶ್ರೂಷೆಗಾಗಿ ವಿನಿಯೋಗವಾಗಿದ್ದ ಚಿನ್ನ ಬೆಳ್ಳಿಗಳ ತಟ್ಟೆಬಟ್ಟಲುಗಳು, ರತ್ನಗಂಬಳಿಗಳು, ವಸ್ತ್ರ ವಸ್ತ್ರಗಳು, ಹಾಸಿಗೆ ಮಂಚಗಳು ಎಲ್ಲ ನಿಮಗೇ ಸೇರಿದುವು. ಅವುಗಳನ್ನೆಲ್ಲ ನೀವು ನಿಮ್ಮೊಡನೆ ತೆಗಿಸಿಕೊಂಡು ಹೋಗಬೇಕು" ಎಂದು ಮೊದಲಿನ ತರುಣನಂತೆಯೇ ಈತನೂ ಬೇಡಿದ. "ನನಗಿವುಬೇಡ ; ಇಲ್ಲಿಗೆ ಬರುವುದಕ್ಕೆ ಮುನ್ನ ಕೊಟ್ಟುದನ್ನೇ ನಾನು ಮುಟ್ಟ ಲಿಲ್ಲ. ಬೇಡವೆಂದರೂ ಬಿಡದೆ ಅವರು ಆ ಸಾಮಗ್ರಿಗಳನ್ನೆಲ್ಲ ನನ್ನ ಪರವಾಗಿ ಒಂದು ಕೊಠಡಿಯಲ್ಲಿ ಇರಿಸಿ, ಬೀಗಹಾಕಿ, ನನ್ನಿಂದ ಮೊಹರು ಮಾಡಿಸಿ ಕೊಂಡಿರುವರು. ಇನ್ನು ಇವುಗಳನ್ನು ಬೇರೆ ಏನು ಮಾಡಲಿ ? ಫಕೀರನಾದ ನನಗೆ ಈ ಲೌಕಿಕ ಸಾಮುಗ್ರಿಗಳೇಕೆ ? ಇವುಗಳನ್ನು ಕೊರಳಲ್ಲಿ ಕಟ್ಟಿಕೊಂಡು ನಾನು ಹೋಗಬೇಕಾದುದಾದರೂ ಎಲ್ಲಿಗೆ ? ಎಂದು ಹೇಳಿ ಅಲ್ಲಿಂದ ಹೊರಟೆ. ಆದರೆ ಅಭ್ಯಾಗತರು ಬಿಟ್ಟಾರೇ ? ಅವರು ನನ್ನನ್ನು ತಡೆದರು. ಅತ್ಯಂತ ವಿನಯದಿಂದ ಬಿನ್ನವಿಸಿಕೊಂಡರು. "ಹಾಗೆ ಕೋಪಿಸಿಕೊಂಡು ಹೋಗ ಕೂಡದು ಮಹಾನುಭಾವ ! ನಮ್ಮ ರಾಣಿಯ ಆಜ್ಞೆ ಹಾಗಿರುವುದು. ಇವೆಲ್ಲ ಸಾಮುಗ್ರಿಗಳನ್ನು ನೀವು ಸಾಗಿಸಿಕೊಂಡು ಹೋಗಲು ಸಾಧ್ಯವಿಲ್ಲದಿದ್ದರೆ ಹೇಳಿ ನಿಮಗೆಲ್ಲಿಗೆಬೇಕಾದರೂ ಅವುಗಳನ್ನು ಕಳುಹಿಸಿಕೊಡುತ್ತೇನೆ. ಇದಕ್ಕೂ ನೀವು ಒಪ್ಪದೆ ಇವನ್ನೆಲ್ಲ ಇಲ್ಲೇ ಬಿಟ್ಟುಹೋದರೆ, ಹೀಗೆ ನೀವು ಹೋದುದು ರಾಣಿಯ ಕಿವಿಯಲ್ಲಿ ಬಿದ್ದರೆ, ಅದನ್ನು ಅತಿಥ್ಯ ಲೋಪವೆಂದು ಪರಿಗಣಿಸಿ ಆಕೆ ನನ್ನ ಶಿರಚ್ಛೇಧನಕ್ಕೆ ಆಜ್ಞೆ ಮಾಡಿಯಾಳು."

ಇದನ್ನು ಕೇಳಿ ಗತ್ಯಂತರವಿಲ್ಲದ— ನಾನು 'ಆಗಲಿ' ಎಂದೆ. ಈ ಅಭ್ಯಾ ಗತರ ಹಿಡಿತಕ್ಕೆ ಸಿಕ್ಕದೆ ಆ ರಾಜ್ಯದಿಂದ ಓಡಿಹೋಗಬೇಕೆಂದು ನನ್ನ ಮನಸ್ಸಿ ಗನ್ನಿಸಿತು. ನನ್ನ ಮುಖದಲ್ಲಿ ಕಂಡುಬಂದ ಖೇದದ ಚಿನ್ಹೆಗಳನ್ನು ಕುರಿತು ಆತನು ಕಾರಣವೇನೆಂದು ಕೇಳಿದ : "ದೈವ ಸ್ವರೂಪಿಗಳಾದ ಅತಿಥಿಗಳೇ ! ಹೇಳಿ, ತಮ್ಮ ಇಷ್ಟಾರ್ಥಗಳೇನಿದ್ದರೂ ಮರೆಮಾಚದೆ ಹೇಳಿ. ನಾನು ಅವು ಗಳನ್ನು ರಾಣಿಯವರ ಸನ್ನಿಧಿಯಲ್ಲಿ ನಿವೇದಿಸಿಕೊಳ್ಳುತ್ತೇನೆ."

ಅದಕ್ಕೆ ನಾನೆಂದೆ; “ದಯಾಭರಿತ—ವಿನಯ ಸಂಪನ್ನ ಅಭ್ಯಾಗತರೇ ! ನಾನು ಫಕೀರ! ನನ್ನ ಬಯಕೆ ಏನಿರಬಹುದು? ಪ್ರಾಪಂಚಿಕ ವಸ್ತು ವಸ್ತ್ರ, ಧನ ಕನಕಗಳಿಂದ ನನಗೇನು ಪ್ರಯೋಜನ? ಅಪ್ರಾರ್ಥಿತವಾಗಿ ನೀವು ನನ್ನ ಮೇಲೆ ವರ್ಷಿಸುತ್ತಿರುವ ಈ ನಿಧಿಯನ್ನು ನಾನೇನು ಮಾಡಲಿ?”

“ಹಾಗೆನ್ನಬೇಡಿ;” ಆತನು ಹೇಳಿದ: “ಪ್ರಾಪಂಚಿಕ ಸುಖವನ್ನು ಹಾಗೆ ಸಂಪೂರ್ಣವಾಗಿ ತೊರೆದ ಮಾನವ ಹೃದಯವು ಅತ್ಯಪೂರ್ವ. ಬೇರೇನೂ ಬೇಡವೆಂದೇ ಇಟ್ಟುಕೊಳ್ಳುವ, ದಣಿವ ಯಾತ್ರಿಕನು ಬಿಸಿಲಿನ ಬೇಗೆಯಿಂದ ತಲೆಮರೆಸಿಕೊಳ್ಳಲು ವಿಶಾಲವೃಕ್ಷದ ನೆರಳನ್ನು ಆದರದಿಂದ ಅರಸುತ್ತಾನೆ. ಬಾಯಾರಿದವನು ಸ್ವಚ್ಛವಾದ ನದಿಯ ನೀರನ್ನೋ ಹೊಳೆಯ ನೀರನ್ನೋ ಹುಡುಕಿಕೊಂಡು ಹೋಗುತ್ತಾನೆ. ಹಸಿವಿನಿಂದ ಪೀಡಿತನಾದವನು ಆಹಾರವನ್ನು ಅಪೇಕ್ಷಿಸುತ್ತಾನೆ. ನಿದ್ರೆ ಬಂದಾಗ ಮಲಗಲು ಪ್ರಯತ್ನಿಸುತ್ತಾನೆ. ಮಳೆಬಂದಾಗ ತಲೆಮರೆಸಿಕೊಳ್ಳಲು ಮರೆಯನ್ನು ಅಪೇಕ್ಷಿಸುತ್ತಾನೆ. ಶೈತ್ಯವು ಹೆಚ್ಚಿದಾಗ ಉಷ್ಣವನ್ನು ಉಷ್ಣವು ಹೆಚ್ಚಿದಾಗ ಶೈತ್ಯವನ್ನು ಅಪೇಕ್ಷಿಸುತ್ತಾನೆ. ಲೌಕಿಕರಾಗಲಿ, ಫಕೀರರಾಗಲಿ ಉಟ್ಟುಹೊದೆಯಲು ಬಟ್ಟೆಗಳನ್ನು ಅಪೇಕ್ಷಿಸುತ್ತಾರೆ. ಸುಮಧುರ ಮಂಜುಲಗಾನವನ್ನು ಕೇಳಿ ಕರಗದ ಎದೆಯುಂಟೆ? ಮಕ್ಕಳ ಬಾಲಲೀಲೆಗಳನ್ನು ಕಂಡು ಆನಂದಿಸದವರೂ ಉಂಟೆ? ದುಃಖದ ಬೇಗೆಯಲ್ಲಿ ಬಿದ್ದವರನ್ನು ಕಂಡು ಒಂದರಕ್ಷಣವಾದರೂ ಮರುಗದ ಮಾನವರುಂಟೇ? ಪರಿಮಳ ಪುಷ್ಪದಲ್ಲಿ ಅನುರುಕ್ತರಾಗದಿರುವವರೂ ಉಂಟೇ? ಕೋಕಿಲಗಾನವನ್ನು ಕೇಳಿ ಕಾನನಕ್ಕೆ ಓಡಿಹೋಗುವರೇ? ಮನಸ್ಸಿರುವ ಮಾನವರೆಲ್ಲ ಮಾಯೆಗೆ ಸಿಲುಕಿದವರೇ? ಹೀಗಿರುವಾಗ ಬೇಕಾದುದು—ಬೇಡವಾದುದು ಎಂದು ಯಾವುದನ್ನು ಹೇಗೆ ವಿಂಗಡಿಸಲಾದೀತು? ಮನಸ್ಸಿಗೆ ಆಪ್ಯಾಯಮಾನವಾದುದೆಲ್ಲ ಬೇಕಾದುದೇ? ಯೋಗೀಶ್ವರರು ಜಡೆಯನ್ನು ಧರಿಸಿ ಕಾಡಿನಲ್ಲಿ ಕುಳಿತು ಧ್ಯಾನಾಸಕ್ತರಾಗಿದ್ದರೂ ಎಚ್ಚೆತ್ತುಕೊಂಡಾಗ ನವಿಲನ್ನೋ, ಕೋಗಿಲೆಯನ್ನೋ, ಹಂಸವನ್ನೋ ಜಿಂಕೆಯನ್ನೋ ಅವರು ಆದರದಿಂದ ಪ್ರೀತಿಸುವುದಿಲ್ಲವೆ? ಪ್ರೀತಿ....ಪ್ರೇಮ....ಇವುಗಳು ಹುಟ್ಟಿದ್ದು ಬಯಕೆಯ ಗರ್ಭದಿಂದ! ಬಯಕೆಯನ್ನು ಬಿಟ್ಟವರು ಅತಿವಿರಳ....ಅತ್ಯಂತ ವಿರಳ!

ಕೊನೆಗೇ ದೇವರನ್ನು ಕಾಣಬೇಕೆಂಬುದೂ ಬಯಕೆಯಲ್ಲವೆ ? ದೇವರುಮಾನವ ಸ್ವರೂಪಿಯಾಗಿ ಕಾಣಿಸಿಕೊಳ್ಳುವನಂತೆ ! ಇದುದರಿಂದ ಉತ್ತಮ ಮಾನವರ ಸಹವಾಸದ ಬಯಕೆ ಸಜ್ಜನರಿಗೆ ಉಂಟಾಗುತ್ತದೆ. ಸಹವಾಸದಲ್ಲಿ ಸಂಗಡ ಬೆರತುಬಾಳುವ ತತ್ವವು ಅಡಗಿದೆಯಲ್ಲವೆ ? ಹಾಗಾದಲ್ಲಿ, ಬೆರೆತುಬಾಳುವ ಮಾನವರು ಒಬ್ಬರನ್ನೊಬ್ಬರು ಬಿಟ್ಟುಬಾಳುವುದೆಂದರೇನು ? ಬೆರೆತಲ್ಲಿ ತೊರೆಯುಲಾಗದು. ಆಸೆ, ಅತಿಯಾಸೆ, ದುರಾಸೆ, ಇವು ಮಾನವರ ಮನಸ್ಸನ್ನು ಹುಟ್ಟಿನಿಂದ ಮುಪ್ಪಿನವರೆಗೆ ಮುತ್ತಿದ ಜಾಡ್ಯಗಳು !"

ಅಭ್ಯಾಗತನೂ ನಾನೂ ಒಬ್ಬರ ಮಾತನ್ನೊಬ್ಬರು ಒಪ್ಪಲು ಸಾಧ್ಯವಿಲ್ಲದಂತಾಯಿತು. ಕೊನೆಗೆ ನಾನೊಂದು ಉಪಾಯವನ್ನು ಹುಡುಕಿದೆ. ನಾನು ಆತನನ್ನು ಕುರಿತು ಹೇಳಿದೆ :

" ನೀವು ರಾಣಿಯ ಆಜ್ಞಾಧಾರಕರು. ಆಕೆಯ ಅಪ್ಪಣೆಯಂತೆ ನಡೆದುಕೊಳ್ಳಬೇಕಾದುದು ನಿಮ್ಮ ಕರ್ತವ್ಯ. ಆದರೆ ಫಕೀರನಾದ ನಾನು ನಿಮ್ಮ ಬಯಕೆಯಂತೆ ಇವೆಲ್ಲ ಸಾಮಗ್ರಿಗಳನ್ನೂ ಹೊತ್ತುಕೊಂಡು ಹೋಗಲು ಸಾಧ್ಯವಿಲ್ಲ. ಅವುಗಳಿಂದ ನನಗಾವ ಪ್ರಯೋಜನವೂ ಇಲ್ಲ. ನೀವು ಇದುವರೆಗೆ ಮಾಡಿದ ಅತಿಥಿ ಸತ್ಕಾರಕ್ಕೆ ನಾನು ನಿಮ್ಮನ್ನು ನಿಮ್ಮ ರಾಣಿಯನ್ನೂ ಮನದಣಿಯ ವಂದಿಸುತ್ತೇನೆ. ಆದರೆ ಆ ಸಾಮಗ್ರಿಗಳನ್ನು ಮಾತ್ರ ಹೊತ್ತುಕೊಂಡು ಹೋಗಲಾರದುದಕ್ಕಾಗಿ ನನ್ನನ್ನು ಮನ್ನಿಸಬೇಕೆಂದು ನಿಮ್ಮರಾಣಿಯವರಿಗೇ ಒಂದು ಪತ್ರವನ್ನು ಬರೆದುಕೊಡುತ್ತೇನೆ. ಅದನ್ನವರಿಗೆ ಒಪ್ಪಿಸಲು ಅನುಮತಿಸುವಿರಾ ? ಹಾಗೆಮಾಡುವುದರಿಂದ ನಿಮ್ಮ ಮೇಲೆ ರಾಣಿಯು ತಪ್ಪು ಹೊರಿಸಿ ನಿಮ್ಮನ್ನು ಶಿಕ್ಷೆಗೆ ಗುರಿಮಾಡಲಾರಳು. ನನಗೂ ಈ ಹೊರೆಯಿಂದ ಬಿಡುಗಡೆ ಉಂಟಾಗುತ್ತದೆ. ಏನು ಹೇಳುವಿರಿ ? "

" ಆನಂದದಿಂದ ಆಗಬಹುದು " ಎಂದ ಅಭ್ಯಾಗತ.

ಆಗ ನಾನು ಒಂದು ಕಾಗದವನ್ನು ತೆಗೆದುಕೊಂಡು ಪತ್ರವನ್ನು ಈ ರೀತಿ ಬರೆದೆ.

" ಬಾಸ್ರಾ ಮಹಾರಾಣಿಯವರಲ್ಲಿ ಈ ಅಲ್ಪ ಫಕೀರ ಯಾತ್ರಿಕನ ಅನಂತ ವಂದನೆಗಳು. ಆದಾಗಿ ನಾನು ತಮ್ಮ ರಾಜ್ಯದಲ್ಲಿ ಕಾಲಿಟ್ಟ ತರುವಾಯ

ತಮ್ಮ ಪ್ರತಿನಿಧಿಗಳು ನನ್ನನ್ನು ಎಲ್ಲೆಲ್ಲೂ ಎದಿರ್ಗೊಂಡು ನನಗೆ ಆನಂದಮಯ ವಾದ ಆದರ, ಸತ್ಕಾರ, ಉಪಚಾರಗಳನ್ನು ನೀಡಿದ್ದಾರೆ. ಅಳವಿಗೆ ಮಿಂಚಿದ ಈ ತೆರನಾದ ಅತ್ಯದ್ಭುತ ಸ್ವಾಗತ ಸತ್ಕಾರಗಳನ್ನು ನಾನು ಇದುವರೆಗೆ ಎಲ್ಲಿಯೂ ನೋಡಿರಲಿಲ್ಲ. ಇಂತಹ ವ್ಯವಸ್ಥೆ, ಈ ಶಿಸ್ತು, ಈ ವಿಜೃಂಭಣೆ, ದಕ್ಷತೆ, ವಿಚಕ್ಷಣೆ, ಸೌಹಾರ್ದ, ಕರುಣೆ, ಮಾರ್ದವ, ಪ್ರತಿನಿಧಿಗಳ ಗಾಂಭೀರ್ಯ, ವಾತ್ಸಲ್ಯ....ಇವು ಇತ್ಯಾದಿಯಾದೆಲ್ಲ ಪ್ರದರ್ಶನಗಳನ್ನು ಕಂಡು ನಾನು ಮುಗ್ಧನಾಗಿದ್ದೇನೆ. ತಮ್ಮ ಸಮಾನರಹಿತ ಉದಾರತೆಯ ವಿಚಾರವಾಗಿ ನಾನು ಕಿವಿಯಲ್ಲಿ ಕೇಳಿದ್ದೆ ಮಾತ್ರ. ಆದರೆ ಈಗದನ್ನು ಪ್ರತ್ಯಕ್ಷ ಕಂಡು ಅನುಭವಿಸಿದ್ದಲ್ಲಿ ಜನರು ಅವನ್ನು ಕುರಿತು ಮಾಡುವ ಪ್ರಶಂಸಗಿಂತ ಆದರ ವೈಭವ—ವ್ಯಾಪ್ತಿಗಳು ಹತ್ತುಮಡಿ ನೂರ್ಮಡಿ ಹೆಚ್ಚಾಗಿವೆ ಎಂದು ನನಗೆ ಭಾಸವಾಗಿ ಹೋಯಿತು. ಈ ತೆರನಾದ ಮಹದ್ವೈಭವ ಭರಿತ ವ್ಯವಸ್ಥೆಗಳನ್ನು ನೋಡಿದ ನಾನು ಅವುಗಳಿಗೆ ಮೂಲಕಾರಣರಾದ ತಮ್ಮ ದರ್ಶನವನ್ನೂ ಪಡೆದು ಸಂತೃಪ್ತನಾಗಬೇಕೆಂದು ಹಂಬಲಿಸುತ್ತಿದ್ದೇನೆ. ಇಷ್ಟು ದೂರದ ಪ್ರಯಾಣಮಾಡಿ ಬಂದು, ಇಷ್ಟೊಂದು ಅನರ್ಘವಾದ ಸತ್ಕಾರಕ್ಕೆ ಪಾತ್ರನಾದ ನಾನು ಅದರ ಕಾರಣಕರ್ತರಾದ ತಮ್ಮ ಘನದರ್ಶನವನ್ನು ಪಡೆಯದೆ ಹಿಂತಿರುಗಲು ನನ್ನ ಮನಸ್ಸು ಒಡಂಬಡದು. ತಮ್ಮವರ ಸತ್ಕಾರದಿಂದ ನನ್ನ ಇಚ್ಛೆಗಳು ಪರಿಪೂರ್ಣವಾಗದೆ ಉಳಿದಿರುವ ಪಕ್ಷದಲ್ಲಿ ಅವುಗಳ ವಿಚಾರ ನಾನು ತಮ್ಮಲ್ಲಿ ಮನವಿ ಮಾಡಿಕೊಳ್ಳಬಹುದೆಂದೂ, ಹಾಗೆ ಮನವಿ ಮಾಡಿಕೊಂಡಲ್ಲಿ ದಯೆಯ ಅವತಾರರಾದ ತಾವು ಅವುಗಳನ್ನು ನೆರವೇರಿಸಿ ಕೊಡುವಿರೆಂದೂ ಹೇಳುತ್ತಾರೆ. ಪ್ರಪಂಚವನ್ನು ತೊರೆದ ಫಕೀರನಾದ ನನಗೆ ಪ್ರಾಪಂಚಿಕ ವಸ್ತುಗಳ ಮೇಲೆ ಆಸೆಯಿಲ್ಲವೆಂದು ಈ ಮೂಲಕ ತಮಗೆ ನಿವೇದಿಸಿಕೊಳ್ಳುತ್ತೇನೆ. ನಿಮ್ಮವರು ಆದರದಿಂದ ನನಗೆ ಕೊಟ್ಟ ಧನಕನಕ ವಸ್ತು ವಸ್ತ್ರಗಳನ್ನು ನನ್ನೊಡನೆ ತೆಗೆದುಕೊಂಡು ಹೋಗಲು ನಾನು ಅಸಮರ್ಥನಾಗಿರುವುದರಿಂದ, ಅದು ನಿಮ್ಮವರ ಸತ್ಕಾರದಲ್ಲಿಯೂ, ಒತ್ತಾಯಪಡಿಸುವಿಕೆಯಲ್ಲಿಯೂ ಯಾವ ಲೋಪದೋಷಗಳನ್ನೂ ಸೂಚಿಸುವುದಿಲ್ಲವೆಂದೂ, ಅದಕ್ಕಾಗಿ ಅವನಲ್ಲಿ ಕುಪಿತರಾಗದೆ, ನನ್ನನ್ನು ಮನ್ನಿಸಬೇಕೆಂದೂ ಅತ್ಯಂತ ವಿನಯದಿಂದ ಸನ್ನಿಧಿಯಲ್ಲಿ ಅರಿಕೆ ಮಾಡಿಕೊಳ್ಳು

ತ್ತೇನೆ. ಇಷ್ಟೊಂದು ದೂರದಿಂದ, ಇಷ್ಟೊಂದು ಶ್ರಮದಿಂದ, ನಾನು ತಮ್ಮ ರಾಜ್ಯಕ್ಕೆ ಬಂದ ಕಾರಣವೆಂದರೆ, ಪ್ರವಾಹವಾಗಿ ಹರಿಯುವ ತಮ್ಮ ಉದಾರ ತೆಯ ಕ್ರಮಗಳನ್ನು ಪ್ರತ್ಯಕ್ಷವಾಗಿ ನೋಡುವುದು—ಮತ್ತು ಆ ಅಸ್ಪೃದಶ ಉದಾ ರತೆಯ ಮೂಲ ಚಿಲುಮೆಯ ದರ್ಶನವನ್ನು ಪಡೆಯುವುದು—ಇಷ್ಟೇ. ತಮ್ಮ ಉದಾರತೆಯನ್ನು ಕಂಡು, ಅನುಭವಿಸಿ, ಅನಂತವಾಗಿ ಆನಂದಗೊಂಡು ದಾಯಿತು. ಇನ್ನು ತಮ್ಮ ಘನ ಸನ್ನಿಧಿಯ ದರ್ಶನ ಲಾಭಕ್ಕೆ ಕಾತುರನಾಗಿ ಕಾಯುತ್ತಿದ್ದೇನೆ. ಕೃಪಾಕಟಾಕ್ಷವು ದೊರೆಯುವುದಾದರೆ ನನಗಿಂತ ಮಿಗಿಲಾದ ಧನ್ಯನಿಲ್ಲವೆಂದು ಎಣಿಸುತ್ತೇನೆ. ನನ್ನ ಕೋರಿಕೆಯನ್ನು ತಾವು ಸಲ್ಲಿಸಿಕೊಟ್ಟಲ್ಲಿ ಪ್ರಕೃತಕ್ಕೆ ಸಾಕು. ಹೆಚ್ಚಿನ ಕೃಪಾಕಟಾಕ್ಷವನ್ನು ತೋರುವುದು ಘನ ಚಿತ್ತಕ್ಕೆ ಸೇರಿದುದು. ಆದರೆ ಈ ಅಲ್ಪ ಸೇವಕನ ಕೋರಿಕೆಯು ನಿರಾಕರಿಸಲ್ಪಟ್ಟರೆ ಈಗ ಆಶಾಭಂಗದಿಂದ ಊರೂರು ಅಲೆಯುತ್ತ ಅನಂತ ಕಷ್ಟಗಳಲ್ಲಿ ಬಿದ್ದು ನರಳು ವುದೇ ಅವನ ಗತಿಯಾದೀತು. ತಮ್ಮ ಕೃಪಾಕಟಾಕ್ಷವನ್ನೇ ಎದಿರು ನೋಡು ತ್ತಿರುವ............"

ನಾನು ಬರೆದ ಪತ್ರವನ್ನು ಅಭ್ಯಾಗತನು ನನ್ನಿಂದ ತೆಗೆದುಕೊಂಡು ರಾಣಿಯ ಅಂತರಂಗ ಕಾರ್ಯದರ್ಶಿಯ ಬಳಿ ತನ್ನ ವಂದನೆಗಳೊಂದಿಗೆ ಕೊಟ್ಟನು. ಕಾರ್ಯದರ್ಶಿಯು ಅದನ್ನು ರಾಣಿಗೆ ಒಪ್ಪಿಸಿದನು. ಅತಿ ಕ್ಷಿಪ್ರದಲ್ಲೆ ಅವನು ನನ್ನ ಬಳಿ ಬಂದು ನನ್ನನ್ನು ಅರಮನೆಯ ಕಡೆ ಕರೆದುಕೊಂಡು ಹೋದನು. ನಾವು ಸ್ತ್ರೀಯರ ಅಂತಃಪುರಗಳನ್ನು ದಾಟಿ ಹೋಗಬೇಕಾಗಿತ್ತು. ಒಳಹೊಕ್ಕ ಒಡನೆಯೇ ಒಬ್ಬ ವಯೋವೃದ್ಧೆಯು ನನ್ನನ್ನು ಎದಿರ್ಗೊಂಡಳು. ರಾಣಿಯು ನನ್ನ ಪತ್ರಕ್ಕೆ ಪ್ರತ್ಯುತ್ತರವಾಗಿ ಹೇಳಿ ಕಳುಹಿಸಿದ್ದುದನ್ನು ಆಕೆ ನನಗೆ ಹೇಳಿದಳು :

"ನಿನ್ನ ಪತ್ರದಿಂದ ನೀನು ನನ್ನಲ್ಲಿ ಪ್ರೇಮಾಸಕ್ತನಾಗಿರುವೆಯೆಂದೂ, ನನ್ನನ್ನು ವಿವಾಹ ಮಾಡಿಕೊಳ್ಳಲು ಅತುಳಪೇಕ್ಷೆಯನ್ನು ತಾಳಿರುವೆಯೆಂದೂ ವ್ಯಕ್ತವಾಗುತ್ತದೆ. ನಾನು ಒಬ್ಬ ಪತಿಯನ್ನು ಸ್ವೀಕರಿಸಿ ವಿವಾಹ ಮಾಡಿಕೊಳ್ಳು ವುದರಿಂದ ಯಾವ ತಪ್ಪೂ ಇರಲಾರದು. ಪತ್ರದ ಒಂದು ಭಾಗದಲ್ಲಿ ಸೂಚಿಸಿರು ವಂತೆ ನೀನೊಂದು ರಾಷ್ಟ್ರಕ್ಕೆ ಒಡೆಯನೆಂದು ವ್ಯಕ್ತವಾಗುತ್ತದೆ. ಆದರೂ

ನೀನೊಬ್ಬ ಫಕೀರನಾಗಿ ನನ್ನ ರಾಜ್ಯದಲ್ಲಿ ಸಂಚರಿಸುತ್ತಿರುವೆನೆಂದು ಜಂಭ ಕೊಚ್ಚಿಕೊಳ್ಳುವುದರಲ್ಲಿ ಅರ್ಥವೇನೂ ಇಲ್ಲ. ಪ್ರಭುವಾದರೇನು—ಫಕೀರನಾದರೇನು? ಪರಮಕರುಣಾಳುವಾದ ಪರಮಾತ್ಮನ ದೃಷ್ಟಿಯಲ್ಲಿ ಇಬ್ಬರೂ ಒಂದೇ ಅಲ್ಲವೆ? ಆದುದರಿಂದ ನೀನು ಪ್ರಭು ಎಂಬ ವಿಚಾರದಿಂದ ನನ್ನ ಯಾವುದೇ ಇತ್ಯರ್ಥಗಳು ಪ್ರೇರಿತವಾಗಲಾರವು. ಮೇಲಾಗಿ ಹಾಗೆ ಫಕೀರನ ಸೋಗು ಹಾಕಿ ಪ್ರಭುವೆಂದು ಕೊಚ್ಚಿಕೊಳ್ಳುವುದು ಉತ್ತಮ ನಡತೆಯುಳ್ಳವನಿಗೆ ಉತ್ಕೃಷ್ಟವಾದ ಕುರುಹಾಗಿ ಕಾಣಿಸದೆಂದು ನನ್ನ ಭಾವನೆ. ಯಾತ್ರಿಕನಾದಾಗ ನೀನು ಫಕೀರ! ಯಾಚನೆಗೆ ನಿಂತಾಗ ಪ್ರಭು! ಎಷ್ಟೊಂದು ಅಸಮಂಜಸವಾದ ಸನ್ನಿವೇಶವಿದು! ಇರಲಿ, ನೀನು ಯಾವ ದೃಷ್ಟಿಯಲ್ಲಿ ಪ್ರಭು? ಯಾವ ದೃಷ್ಟಿಯಲ್ಲಿ ಫಕೀರ? ಪ್ರಜೆಗಳಿಗೆ ಪ್ರಭುವೆಂದೂ, ಪರಮಾತ್ಮನ ದೃಷ್ಟಿಯಲ್ಲಿ ಫಕೀರನೆಂದೂ ಹೇಳಿಕೊಳ್ಳುವುದಾದರೆ ಸ್ವಲ್ಪಮಟ್ಟಿಗೆ ಒಪ್ಪಿಕೊಳ್ಳಬಹುದು. ಆದರೆ ಫಕೀರನೆಂದು ಹೇಳಿಕೊಂಡು ನನ್ನ ರಾಜ್ಯವನ್ನು ಸಂಚರಿಸುತ್ತಿದ್ದ, ನೀನು—ನನ್ನ ದರ್ಶನಾಕಾಂಕ್ಷೆಯಿಂದ ಪ್ರಬಲತರನಾಗಿ ಪ್ರೇರಿತನಾದ ನೀನು-ಇದ್ದಕ್ಕಿದ್ದಂತೆ "ನಿನ್ನ ಹಾಗೆ ನನ್ನ ರಾಜ್ಯದಲ್ಲಿ ನಾನೂ ಒಬ್ಬ ಅರಸನೇ" ಎಂದು ನಿನ್ನ ಪತ್ರದಲ್ಲಿ ಸೂಚಿಸಿರುವುದು ರಸಾಭಾಸದ ಪರಮಾವಧಿಯನ್ನೇ ಮುಟ್ಟಿದಂತಾಯಿತಲ್ಲವೆ? ಇದೆಲ್ಲ ಮಾನವರಲ್ಲಿ ರೂಢಮೂಲವಾದ ಪ್ರತಿಷ್ಠೆಯಿಂದ ಉತ್ಪನ್ನಗೊಂಡ ಬಲಹೀನತೆ! ಇರಲಿ; ಹೇಳದಿದ್ದರೆ ಗತ್ಯಂತರವಿಲ್ಲ; ಹೇಳಿದ್ದೇನೆ. ಇನ್ನು ವಿವಾಹದ ವಿಚಾರ. ಬಹಳ ಕಾಲದಿಂದ ನಾನೂ ವಿವಾಹ ಮಾಡಿಕೊಳ್ಳುವ ಅಪೇಕ್ಷೆಯನ್ನು ತಾಳಿದ್ದೇನೆ. ಆದರೆ ನಿನ್ನಂತೆಯೇ ನಾನೂ ಪ್ರಾಪಂಚಿಕ ವಸ್ತುಗಳಲ್ಲಿ ಆಸೆಯನ್ನು ತೊಟ್ಟಿದ್ದೇನೆ. ಈ ವೇಳೆಗೆ ದೇವೇಶನು ಗಣನೆಗೆ ನಿಲುಕದಷ್ಟು ಸಂಪತ್ತನ್ನು ನನಗೆ ಕರುಣಿಸಿರುವನು. ಆದುದರಿಂದ ನಾನು ಸಂಪತ್ತನ್ನು ಅರಸುವುದಿಲ್ಲ. ಆಸೆಯೇ ಇಲ್ಲವೆಂದು ನೀನಾಗಲಿ ಭಾವಿಸುವುದು; ಭಾವಿಸಿ ಇತರರಲ್ಲಿ ಹಾಗೆಂದು ಹೇಳಿಕೊಳ್ಳುವುದು ಮೌಢ್ಯದ ಮೂಲವಾಗಿ ಕಂಡೀತು. ಪ್ರಾಪಂಚಿಕ ಸುಖವನ್ನು ತೊರೆದೆನೆಂದೂ, ಕಡೆಗಣ್ಣುಗಳಿಂದಲೂ ಅವನ್ನು ನೋಡಬಯಸುವುದಿಲ್ಲವೆಂದೂ ಹೇಳುವ ನೀನು—ನಾನು! ನಾವಿಬ್ಬರೂ ಪ್ರಣಯಾಭಿಲಾಷೆಗಳೇ ಅಲ್ಲವೇ? ವಿವಾಹಮಾಡಿಕೊಳ್ಳ

ಬೇಕೆಂದು ನೀನು ಸೂಚಿಸುದ್ದೀಯೆ. ವಿವಾಹಕ್ಕೆ ಅಭ್ಯಂತರವಿಲ್ಲವೆಂದು ನಾನೂ ವ್ಯಕ್ತಗೊಳಿಸಿದ್ದೇನೆ. ಹೀಗಿದ್ದೂ ಪ್ರಾಪಂಚಿಕ ವ್ಯವಹಾರಗಳಲ್ಲಿ ಆಸಕ್ತಿಯನ್ನು ಪರಿಪೂರ್ಣವಾಗಿ ತೊರೆದ ವಿರಕ್ತರು ನಾವು ಎಂದು ಹೇಳಿಕೊಳ್ಳುವುದು ಸಮಂಜಸವಾಗಿರದು. ಯೋಗಿಯೂ ಸಹ ತನ್ನ ನೆರಳನ್ನು ಕಂಡಾನಲ್ಲವೆ? ಬದುಕಿರುವವರೆಗೂ ಬಾಳ, ಭಂಗ, ಭವಣೆಗಳು ಮನುಷ್ಯರನ್ನು ಬೆನ್ನಟ್ಟಿ ಬರುತ್ತಲೇ ಇರುತ್ತವೆ. ಇರಲಿ; ನಿನ್ನೊಡನೆ ನಾನು ವಿವಾಹಕ್ಕೆ ಸಮ್ಮತಿಸ ಬೇಕಾದರೆ ಅದಕ್ಕೆ ಮುನ್ನ ನೀನು ನನ್ನ ಒಂದು ಷರತ್ತಿಗೆ ಒಪ್ಪಿಕೊಳ್ಳಬೇಕು. ಅದಾಗಿ ನೀನು ನನಗೊಪ್ಪುವ ತೆರನೆ ವಧುದಕ್ಷಿಣೆಯನ್ನು ತಂದೊಪ್ಪಿಸಲು ಸಮ್ಮತಿಸಬೇಕು. ಆದರೆ, ಆ ವಧುದಕ್ಷಿಣೆ ಸಂಪತ್ತಿನ ಸ್ವರೂಪದಲ್ಲಿಲ್ಲ. ನಾನು ಅಪಾರ ಐಶ್ವರ್ಯಕ್ಕೆ ಒಡತಿಯೆಂದೂ, ಅದರ ಮೇಲೆ ನನಗೆ ಅಪೇಕ್ಷೆಯಿಲ್ಲ ವೆಂದೂ ನಿನಗೆ ಮೊದಲೇ ಹೇಳಿದ್ದೇನೆ. ಆದರೆ ವಧುದಕ್ಷಿಣೆ ಯಾವುದು ಎಂದು ನೀನು ಕುತೂಹಲಗೊಂಡಿರಬಹುದು. ಅದು ಒಂದು ಸಾಹಸದ ಕಾರ್ಯ. ಅದನ್ನು ನೀನು ನೆರವೇರಿಸಬಲ್ಲೆಯಾ? ಸಮರ್ಪಕವಾಗಿ ನೆರವೇರಿಸಬಲ್ಲೆ ಯಾದರೆ ನಾನು ನಿನ್ನವಳಾಗುತ್ತೇನೆ."

ವಯೋವೃದ್ಧೆಯೊಡನೆ ರಾಣಿಯು ಹೇಳಿ ಕಳುಹಿಸಿದ ಸಂದೇಶವು ಮೇಲ್ಕಂಡ ತೆರನೆ ಇದ್ದಿತು. ನನ್ನನ್ನು ವಿವಾಹವಾಗಲು ಆಕೆಗೆ ಆಕ್ಷೇಪಣೆ ಯಿಲ್ಲವೆಂದು ತಿಳಿಯಿತು. ನನ್ನ ನಡತೆಯನ್ನು ಕುರಿತು ಆಕೆ ಮಾಡಿದ ಟೀಕೆ ನನ್ನೆದೆಯನ್ನು ಚುಚ್ಚಿತಾದರೂ, ನನ್ನನ್ನು ವಿವಾಹವಾಗಲು ಆಕೆಯು ಸಮ್ಮತಿ ಸಿದ ಆ ಸಂತೋಷದ ಸುದ್ದಿಯನ್ನು ಕೇಳಿದ ನಾನು ಆ ಟೀಕೆಯನ್ನು ನಿರ್ಲಕ್ಷ್ಯ ಮಾಡಿದೆ. ಆ ವಯೋವೃದ್ಧೆ ಅರಮನೆಯ ಮುಖ್ಯ ಅಧಿಕಾರಿಯಾಗಿರಬಹು ದೆಂದು ನನಗೆ ತೋರಿತು. ಅತ್ಯಾತುರದಿಂದ "ಆ ಸಾಹಸದ ಕಾರ್ಯವಾ ವುದು? ನನ್ನ ಪ್ರಾಣಕ್ಕೆ ಅಪಾಯ ಬರುವುದಾದರೂ ಲಕ್ಷಿಸದೆ ನಾನು ಆ ಸಾಹಸ ಕಾರ್ಯವನ್ನು ಕೈಗೊಳ್ಳುತ್ತೇನೆ" ಎಂದು ಹೇಳಿದೆ.

" ನಾಳೆಯ ದಿವಸ ಅದನ್ನು ಹೇಳಲಾಗುತ್ತದೆ. ನಿನಗಾಗಿ ನಾವು ಇದೇ ಸ್ಥಳದಲ್ಲಿ ಕಾದಿರುತ್ತೇವೆ. ಆಗ ಅದರ ವಿಚಾರವನ್ನು ಹೇಳುತ್ತೇವೆ" ಎಂದಳು. ಸಂತೋಷದಿಂದ ನಾನು ಹಿಂತಿರುಗಿದೆ.

# ೨೪

ಮರುದಿನ ಅರಮನೆಯ ಅಂತರಂಗ ಸೇವಕಿಯೊಬ್ಬಳು ನನ್ನ ಬಳಿ ಬಂದು ನನ್ನನ್ನು ಸ್ತ್ರೀಯರ ಅಂತಃಪುರಕ್ಕೆ ಕರೆದುಕೊಂಡು ಹೋದಳು. ಅಂತಃಪುರವನ್ನು ಪ್ರವೇಶಿಸುತ್ತಲೇ ಪ್ರಧಾನಿಗಳೂ, ಪವಿತ್ರ ಹೃದಯರಾದ ಫಕೀರರೂ, ನ್ಯಾಯಶಾಸ್ತ್ರ ಪ್ರವೀಣರೂ, ಕಲಾನಿಧಿಗಳೂ, ಪಂಡಿತರೂ, ಇತರ ಮುಖ್ಯಸ್ಥರೂ ಅಲ್ಲಿ ತಂಡತಂಡವಾಗಿ ನೆರೆದಿದ್ದುದನ್ನು ನಾನು ಕಂಡೆ. ಔತಣಕ್ಕೆ ಸಿದ್ಧತೆಗಳು ನಡೆದಿದ್ದುವೆಂದು ಹೇಳಬೇಕೆ? ವಿಶಾಲವೂ ನಯನಾನಂದಕರವೂ ಆದ ಒಂದು ದೊಡ್ಡ ಅಂಗಳವಲ್ಲಿ ಸ್ಫಟಿಕಶಿಲೆಯ ನೆಲದಮೇಲೆ ದೊಡ್ಡದೊಂದು ವಸ್ತ್ರವನ್ನು ಹಾಸಿ ನೂರಾರು ಜನರಿಗೆ ಸ್ವರ್ಣ ಪಾತ್ರೆಗಳಲ್ಲೂ, ರಜತ ಪಾತ್ರೆಗಳಲ್ಲೂ ಬಗೆ ಬಗೆಯ ಭಕ್ಷ್ಯಭೋಜ್ಯಗಳು, ಹಣ್ಣುಹಂಪಲುಗಳು, ಬಡಿಸಲ್ಪಟ್ಟುವು. ನೆರೆದವರ ಸಮೂಹವಲ್ಲಿ ಕುಳಿತು ಆತಿಥ್ಯವನ್ನು ಸ್ವೀಕರಿಸುವಂತೆ ನನಗೆ ಆಹ್ವಾನವಾಯಿತು. ನಾನು ಊಟಕ್ಕೆ ಕುಳಿತೆ: ಊಟವಾದನಂತರ ಒಬ್ಬ ಸೇವಕಿಯು ಬಂದು, "ಬಾಹ್ರಾವಾರ್ ಎಲ್ಲಿ? ಸನ್ನಿಧಿಯ ಅಪ್ಪಣೆಯಾಗಿದೆ" ಎಂದಳು. ಬಾಹ್ರಾವರ ಬಂದ. ಆತ ಬಹಳ ಗಾಂಭೀರ್ಯದ ಮನುಷ್ಯ; ನಡತೆಯಲ್ಲಿ ನಿಧಾನವೂ—ಸಾವಧಾನವೂ ಎದ್ದು ಕಾಣುತ್ತಿತ್ತು; ಮಾತು ಮಿತವಾಗಿತ್ತು. ಆತನ ಸೊಂಟದಲ್ಲಿ ಚಿನ್ನ ಬೆಳ್ಳಿಗಳಿಂದ ಮಾಡಿದ ನೂರಾರು ಬೀಗದ ಕೈಗಳು ಕಾಣಿಸುತ್ತಿದ್ದುವು. ಆತನು ಮೊಖ್ತೇಸರನೋ, ಕೋಶಾಧಿಕಾರಿಯೋ ಆಗಿರಬೇಕೆಂದು ಊಹಿಸಬಹುದಾಗಿತ್ತು. ಒಳಗೆ ಬಂದವನೇ ಬಾಹ್ರಾವರನು ವಿನಯದಿಂದ ನನಗೆ ನಮಸ್ಕರಿಸಿ ನನ್ನ ಬಳಿಯಲ್ಲಿ ಕುಳಿತನು. ಆಗ ಆ ಸೇವಕಿಯು "ಬಾಹ್ರಾವರ್! ರಾಣಿಯವರ ಆಜ್ಞೆಯಾಗಿದೆ. ಈ ಅಪರಿಚಿತ ಮಹಾಶಯರಿಗೆ ನೀನು ನಿನ್ನ ಸಂಚಾರ ಕಾಲದಲ್ಲಿ ನೋಡಿದ ಕೌತುಕವನ್ನು ಒಂದಕ್ಷರ ಬಿಡದೆ ಹೇಳಬೇಕಂತೆ. ಅದನ್ನವರು ಕೇಳಲು ಸಿದ್ಧವಾಗಿದ್ದಾರೆ."

ಬಳಿಕ ಬಾಹ್ರಾವರನು ತಾನು ಅನ್ಯದೇಶದಲ್ಲಿ ನೋಡಿದ ಅತ್ಯಂತ ವಿಚಿತ್ರ ವಿಚಾರವನ್ನು ನನಗೆ ವಿವರಿಸಿ ಈ ರೀತಿ ಹೇಳಿದನು.

"ಮಿತ್ರ ಶ್ರೇಷ್ಠರೇ! ಕೇಳಿ. ನಮ್ಮ ಮಹಾರಾಣಿಯವರಿಗೆ ಸಹಸ್ರಾರು ಸೇವಕರಿದ್ದಾರೆ. ಅವರೆಲ್ಲ ವ್ಯಾಪಾರದಲ್ಲಿ ಉದ್ಯುಕ್ತರಾಗಿದ್ದಾರೆ. ಅವರಲ್ಲಿ ನಾನೂ ಒಬ್ಬ; ವಂಶಪಾರಂಪರ್ಯವಾಗಿ ಈ ರಾಜಕುಟುಂಬಕ್ಕೆ ನಮ್ಮ ಪೂರ್ವಿಕರೆಲ್ಲ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ನಾನೂ ಸನ್ನಿಧಾನದ ಸೇವೆಯಲ್ಲಿಯೇ ನಿರತನಾಗಿದ್ದೇನೆ. ಆ ಸಹಸ್ರಾರು ಸೇವಕರು ಪ್ರತಿ ವರ್ಷವೂ ಸನ್ನಿಧಾನದವರು ಕರುಣಿಸುವ ಲಕ್ಷೋಪಲಕ್ಷ ದ್ರವ್ಯವನ್ನು ತೆಗೆದುಕೊಂಡು ನಾನಾ ದೇಶಗಳಿಗೆ ಹೋಗಿ ವ್ಯಾಪಾರ ಮಾಡಿಕೊಂಡು ಬರುತ್ತಾರೆ. ಅವರೆಲ್ಲ ರಾಜಧಾನಿಗೆ ಹಿಂತಿರುಗಿದ ಮೇಲೆ ತಾವು ಪ್ರಯಾಣಮಾಡಿದ ನಾನಾ ರಾಜ್ಯದ ನಾನಾ ಪ್ರದೇಶಗಳಲ್ಲಿ ಜನರ ನಡೆ ನುಡಿ, ಆಚಾರ ವ್ಯವಹಾರ, ಮುಂತಾದೆಲ್ಲ ವಿಚಾರಗಳಲ್ಲಿ ತಾವೇನಾದರೂ ವಿಚಿತ್ರವಾದುದನ್ನು ಕಂಡಿದ್ದರೆ ಅವುಗಳನ್ನು ರಾಣಿಯವರಿಗೆ ಹೇಳಬೇಕಾದುದು ಅವರ ಕರ್ತವ್ಯ.

ಬಾಹ್ರಾವರನು ಹೇಳಿದ ಕಥೆ:—

"ಒಮ್ಮೆ ನಿಮ್ಮ ರೋಜ್ ನಗರವನ್ನು ಪ್ರವೇಶಿಸಿ ವ್ಯಾಪಾರ ಮಾಡುತ್ತಿದ್ದೆ. ಆ ನಗರವನ್ನು ಕಂಡು ನನಗೆ ಅತ್ಯಾಶ್ಚರ್ಯವಾಯಿತು. ನಗರವಾಸಿಗಳೆಲ್ಲರೂ ದುಃಖ ಸೂಚಕವಾದ ಕರಿಯ ಉಡುಪುಗಳನ್ನು ಧರಿಸಿ ಬಿಕ್ಕಿ ಬಿಕ್ಕಿ ಅಳುತ್ತಿದ್ದರು. ಅದರಿಂದ ಅವರ ನಗರಕ್ಕೇ ಯಾವುದೋ ಪ್ರಮಾದವಾದ ಆಪತ್ತು ಒದಗಿರಬಹುದು, ಅಥವಾ ಒದಗಲಿರುವುದು ಎಂದು ನನಗೆ ಅರ್ಥವಾಯಿತು. ಈ ತೆರನೆ ನಿಟ್ಟುಸಿರುಬಿಟ್ಟು, ಎದೆಬಡಿದುಕೊಂಡು, ಎಡೆಬಿಡದೆ ಅಳುತ್ತಿರುವುದರ ಕಾರಣವೇನೆಂದು ನಾನು ಒಬ್ಬ ನಗರವಾಸಿಯನ್ನು ಕೇಳಿದೆ; ಪ್ರತ್ಯುತ್ತರವಿಲ್ಲ. ಒಬ್ಬನಾದ ಮೇಲೊಬ್ಬನನ್ನು ಹೀಗೆ ಅನೇಕರನ್ನು ಕೇಳಿದೆ. ಯಾರೂ ನನಗೆ ಆ ಶೋಕ ಪ್ರದರ್ಶನಕ್ಕೆ ಸಮರ್ಪಕವಾದ— ಏಕೆ? ಕಾರಣವನ್ನೇ ಹೇಳಲಿಲ್ಲ.

ಒಂದಾನೊಂದು ದಿವಸ ಪ್ರಾತಃಕಾಲದ ಸಮಯದಲ್ಲಿ ಆ ಊರಿನ ಹಿರಿಯರು-ಕಿರಿಯರು, ಬಡವರಲ್ಲಿ ಶ್ರೀಮಂತರು, ಹೆಂಗಸರು ಮಕ್ಕಳು-ಒಬ್ಬರೂ ಬಿಡದೆ ಎಲ್ಲರೂ ತಂತಮ್ಮ ಮನೆಗಳಿಂದ ಗುಂಪು ಗುಂಪಾಗಿ ಹೊರಟು ಒಂದು

ದೊಡ್ಡ ಮೈದಾನದಲ್ಲಿ ಸೇರಿದರು. ಆ ದೇಶದ ಅರಸನೂ ಅಲ್ಲಿಗೆ ಬಂದಿದ್ದನು. ಅವನು ಒಂದು ಕರಿಯ ಅಶ್ವದ ಮೇಲೆ ಕುಳಿತಿದ್ದನು. ಅವನನ್ನು ಸುತ್ತುವರಿದು ಅವನ ಪ್ರಧಾನಿ ಪ್ರಮುಖ ಅಧಿಕಾರಿಗಳಿದ್ದರು. ಹಗಲ ಒಂದು ನಿರ್ದಿಷ್ಟ ಕಾಲದಲ್ಲಿ ಅವರೆಲ್ಲರೂ ಒಂದು ಸಾಲಾಗಿ ಉದ್ದಕ್ಕೆ ನಿಂತರು. ಅವರ ಮೌನ ನಿರೀಕ್ಷಣೆಗಳಿಂದ, ಶಿಸ್ತು ವ್ಯವಸ್ಥೆಗಳಿಂದ—ಅತ್ತಕಡೆ ಯಾವುದೋ ಒಂದು ಕೌತುಕವು ನಡೆಯಬಹುದು—ಅಥವಾ, ಹಾದುಹೋಗಬಹುದು—ಎಂದೆಲ್ಲ ಭಾಸವಾಗುತ್ತಿತ್ತು.

ಒಂದು ಗಂಟೆಯ ಕಾಲದ ನಂತರ ಸ್ವಲ್ಪ ದೂರದಿಂದ ತನ್ನ ಕೈಲಾದಷ್ಟು ಘಟ್ಟಿಯಾಗಿ ಅರಚುತ್ತ, ಬಾಯಲ್ಲಿ ನೊರೆ ಸುರಿಸುತ್ತ ಹದಿನೈದು ಹದಿನಾರು ವರ್ಷದ ಒಬ್ಬ ಸುಂದರ ತರುಣನು ಮೈದಾನದತ್ತ ಸಾರಿ ಬರುತ್ತಿದ್ದುದು ಕಂಡಿತು. ಅವನು ಹತ್ತಿ ಕುಳಿತಿದ್ದುದು ಒಂದು ಹಳದಿ ವರ್ಣದ ಗೂಳಿ. ಅವನ ಎಡಗೈಯಲ್ಲಿ ಅದೇನನ್ನೋ ಹಿಡಿದಿದ್ದ. ಕಿಕ್ಕಿರಿದು ಆ ಜನಸಮುದಾಯದ ಬಳಿ ಬಂದವನೇ ಅವನು ಗೂಳಿಯಿಂದ ಕೆಳಗಿಳಿದು, ನೆಲದ ಮೇಲೆ ಕುಳಿತು, ಒರೆಯಿಂದ ಹೊರತೆಗೆದಿದ್ದ ಖಡ್ಗವನ್ನು ಝುಳಪಿಸಿದ. ಅವನನ್ನು ಕಾಲುನಡಿಗೆಯಲ್ಲಿ ಹಿಂಬಾಲಿಸಿ ಬಂದಿದ್ದ ಗುಲಾಬಿ ಬಣ್ಣದ ಮನಮೋಹಕ ಸುಂದರ ತರುಣನೊಬ್ಬನು ಅವನ ಪಕ್ಕದಲ್ಲಿ ಬಂದು ನಿಂತನು. ಅವನು ಆ ವಿಚಿತ್ರ ಸವಾರನ ಗುಲಾಮನಂತೆ. ಸವಾರನು ತನ್ನ ಎಡಗೈಯಲ್ಲಿದ್ದ ಯಾವುದೋ ವಸ್ತುವನ್ನು ಗುಲಾಮನ ಕೈಯಲ್ಲಿ ಕೊಟ್ಟ. ಗುಲಾಮನು ಅದನ್ನು ಸಾಲುಸಾಲಾಗಿ ನಿಂತಿದ್ದ ಜನರಿಗೆ—ಒಬ್ಬೊಬ್ಬರಿಗೂ ತೋರಿಸುತ್ತ ಬಂದ. ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೆ ಸಾಲಾಗಿ ನೆರೆದಿದ್ದ ಆ ಅಪಾರ ಜನಸಮುದಾಯದಲ್ಲಿ ಒಬ್ಬೊಬ್ಬರೂ ನೋಡಿದ ಆ ವಿಚಿತ್ರ ವಸ್ತುವು ಏನಿರಬಹುದೋ ನನಗೆ ತಿಳಿಯಲಿಲ್ಲ. ಆದರೆ ಅದನ್ನು ನೋಡಿ ಒಬ್ಬೊಬ್ಬರೂ ಗೋಳೋ ಎಂದು ಅಳತೊಡಗಿದರು. ಪ್ರತಿಯೊಬ್ಬರೂ ನೋಡಿ ಮುಗಿದನಂತರ ಗುಲಾಮನು ಆ ವಸ್ತುವನ್ನು ತನ್ನ ಯಜಮಾನನಿಗೇ ಹಿಂತಿರುಗಿಸಿ ಕೊಟ್ಟನು. ಹಿಂತಿರುಗಿಸಿಕೊಟ್ಟವನೇ ಗುಲಾಮನು ಎರಡು ಹೆಜ್ಜೆ ಮುಂದುವರಿದಿರಲಿಲ್ಲ. ಯಜಮಾನ ತರುಣನು ನೆಲದಿಂದ ನೆಗೆದೆದ್ದು, ಕತ್ತಿಯನ್ನು ಝುಳಪಿಸಿ, ತನ್ನ

ಬಲವನ್ನೆಲ್ಲಾ ಬಿಟ್ಟು ಒಂದೇ ಏಟಿಗೆ ಆ ಗುಲಾಮನ ತಲೆಯನ್ನು ತುಂಡರಿಸಿದನು. ಬಳಿಕ ಅಲ್ಲಿ ನಿಲ್ಲದೆ ತನ್ನ ಆ ಹಳದಿಯ ಗೂಳಿಯ ಮೇಲೆ ಮತ್ತೆ ಹತ್ತಿ ಆದಷ್ಟು ವೇಗವಾಗಿ ತಾನು ಬಂದ ದಾರಿಯನ್ನು ಹಿಡಿದು ಹೊರಟು ಹೋದ."

ನಡೆದ ಆ ವಿಚಿತ್ರ ಘಟನೆಯನ್ನು ಕುರಿತು ಬಾಹ್ರಾವರನು ಇಷ್ಟೇ ಹೇಳಬಲ್ಲವನಾಗಿದ್ದನು. ತಾನು ಒಬ್ಬೊಬ್ಬರನ್ನೂ ಇದರ ಅರ್ಥವನ್ನು ವಿವರಿಸಿ ಹೇಳಬೇಕೆಂದು ಬಗೆಬಗೆಯಾಗಿ ಬೇಡಿಕೊಂಡನೆಂದೂ, ಆದರೆ ಒಬ್ಬರಾದರೂ ಬಾಯಿ ಬಿಡಲಿಲ್ಲವೆಂದೂ, ಹೇಳಿದನು. ಅಲ್ಲದೆ, ತನ್ನ ದೇಶಕ್ಕೆ ಹಿಂತಿರುಗಿದ ಮೇಲೆ ಮಹಾರಾಣಿಗೆ ಈ ವಿಚಿತ್ರ ಘಟನೆಯನ್ನು ಹೇಳಿದನೆಂದೂ, ಆಕೆ ಅತ್ಯಂತ ಆಶ್ಚರ್ಯದಿಂದ ತುಂಬಿಹೋಗಿ ಆ ವಿಚಿತ್ರ ವರ್ತನೆಯ ಅರ್ಥವನ್ನು ಕಂಡುಹಿಡಿಯಬೇಕೆಂದು ಸಂಕಲ್ಪಿಸಿದಳೆಂದೂ, ಆ ರಹಸ್ಯವನ್ನು ಕಂಡುಹಿಡಿದವರೊಡನೆ ತಾನು ವಿವಾಹ ಮಾಡಿಕೊಳ್ಳುವುದಾಗಿಯೂ ತೀರ್ಮಾನಿಸಿ, ಅದನ್ನು ಆಕೆ ಎಲ್ಲೆಲ್ಲೂ ಸಾರಿರುವಳು ಎಂದು ಹೇಳಿದನು. ಈ ವಿಚಿತ್ರ ಸಮಸ್ಯೆಗೆ ಸರ್ವಸಮರ್ಪಕವಾದ ಪರಿಹಾರವನ್ನು ಕಂಡುಹಿಡಿದು ತನ್ನ ಕೌತುಕವನ್ನು ನಿವಾರಿಸಬಲ್ಲ ತರುಣ ಯಾವನೇ ಆಗಲಿ, ಅವನನ್ನೇ ತಾನು ಮದುವೆ ಮಾಡಿಕೊಳ್ಳುವುದಾಗಿಯೂ, ಬೇರೆ ಯಾರನ್ನೂ ಮದುವೆ ಮಾಡಿಕೊಳ್ಳುವುದಿಲ್ಲವೆಂದೂ ಆಕೆ ನಿರ್ಧರಿಸಿದ್ದಾಳೆಂದೂ, ಹೆಚ್ಚೇಕೆ? ಇದೇ ಆಕೆ ಅಪೇಕ್ಷಿಸುವ ವಧುದಕ್ಷಿಣೆಯೆಂದೂ ಬಾಹ್ರಾವರನ ಮಾತಿನಿಂದ ನಾನು ಗ್ರಹಿಸಿದೆ.

ಬಳಿಕ ಬಾಹ್ರಾವರನು ನನ್ನನ್ನು ಕುರಿತು ಮತ್ತೆ ಹೇಳಿದ :

"ಶ್ರೇಷ್ಠ ಅತಿಥಿಯೇ ! ನಿನ್ನ ಮುಂದಿರುವ ಈ ಸಾಹಸ ಕಾರ್ಯವನ್ನು ಹೊತ್ತು ಸಮರ್ಪಕವಾಗಿ ಸಾಧಿಸಲು ಆದೀತೇ ಎಂಬುದನ್ನು ಯೋಚಿಸಿ ನೋಡು. ಸಾಧಿಸಿದರೆ ನಿನ್ನೊಂದಿಗೆ ರಾಣಿಯವರ ಪಾಣಿಗ್ರಹಣ ನಡೆದೀತು ! ಯೋಚಿಸಿ ನಿರ್ಧರಿಸು. ಆಗಬಹುದು ಎಂದು ತೋರಿದರೆ ತಕ್ಷಣ ಇಲ್ಲಿಂದ ಹೊರಡುವುದು ಒಳ್ಳೆಯದು ಎಂದು ನನ್ನ ಸಲಹೆ. ಸಾಧ್ಯವಿಲ್ಲದಿದ್ದರೆ ನಿನ್ನ ರಾಜ್ಯಕ್ಕೆ ತೆರಳಿ ಸುಖವಾಗಿರಬಹುದು. ಆಕೆ ಹಾಕಿರುವ ಶರತ್ತನ್ನು ಪೂರ್ತಿಗೊಳಿಸಿದರಲ್ಲದೆ ಆಕೆಯ ದರ್ಶನವನ್ನು ನೀನು ಪಡೆಯುವಂತಿಲ್ಲ. ಆದುದರಿಂದ ಕಾರ್ಯಸಾಧನೆ ಮಾಡದೆ ಇಲ್ಲಿ ನಿಂತು ಏನೂ ಪ್ರಯೋಜನವಿಲ್ಲ.

"ದೇವರ ದಯೆಯೊಂದಿದ್ದರೆ ಈ ವಿಚಿತ್ರ ಘಟನೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನೂ ನಾನು ಕಂಡು ಹಿಡಿಯುತ್ತೇನೆ. ಆದರೆ ಹಾಗೆ ನಾನು ಸಾಹಸ ಕಾರ್ಯಕ್ಕೆ ಹೊರಡುವ ಮುನ್ನ ಆಕೆ ಘರದೆಯ ಮರೆಯಲ್ಲಿ ಕುಳಿತು ನನ್ನೊಡನೆ ನಾಲ್ಕು ಸುಮಧುರ ಮಾತುಗಳನ್ನಾಡಿದರೂ ಸಾಕು; ನಾನು ಎಷ್ಟೋ ಪ್ರೋತ್ಸಾಹ ಹೊಂದಿ ನನ್ನ ಕಾರ್ಯಸಾಧನೆಗೆ ಅವಶ್ಯಕವಾದ ಶಕ್ತಿಯು ದೊರೆ ತಂತಾಗುತ್ತದೆ. ಇದನ್ನು ಮಹಾರಾಣಿಯವರಿಗೆ ತಿಳುಹಿಸಿ ಆಕೆಯನ್ನು ಒಪ್ಪಿಸಿದರೆ ನಾನು ಕೃತಾರ್ಥನಾಗುತ್ತೇನೆ.''—ಎಂದು ಬಾಹ್ರಾವರನಿಗೆ ಹೇಳಿದ.

ನನ್ನ ಈ ಬಿನ್ನಹವನ್ನು ರಾಣಿಗೆ ಒಬ್ಬ ಸೇವಕಿಯು ತಿಳುಹಿಸಿದಳು. ಆಕೆ ಸ್ವಲ್ಪ ಕಾಲಾನಂತರ ಹಿಂತಿರುಗಿ ರಾಣಿಯು ದಯಾಪ್ರೇರಿತಳಾಗಿ ಅನುಗ್ರಹಿಸಿರುವಳೆಂದು ತಿಳುಹಿಸಿದಳು. ನಾನು ಆಕೆಗೆ ಮರೆಯಾಗಿರುವ ಘರದೆಯ ಹೊರಗೆ ಕುಳಿತು ನನ್ನ ಕೋರಿಕೆಗಳನ್ನು ರಾಣಿಯಲ್ಲಿ ನಿವೇದಿಸಿಕೊಳ್ಳಬಹುದೆಂದೂ, ಸನ್ನಿಧಾನದವರು ಸಾವಧಾನದಿಂದ ಲಾಲಿಸುವರೆಂದೂ ಹೇಳಿದಳು. ರಾಣಿ ಕುಳಿತಿದ್ದ ಅಂತಃಪುರದೊಳಗೆ ನಾನು ಕರೆದೊಯ್ಯಲ್ಪಟ್ಟೆ. ಘರದೆಯ ಹೊರಗೆ ಕುಳಿತೆ. ಆಹಾ! ಅದೇನು ವೈಭವ! ಕಣ್ಣು ಕುಕ್ಕುವ ಆ ದೃಶ್ಯ! ವಸ್ತ್ರಸಜ್ಜಿತರಾದ ಕೀಲ್‌ಮಾಕ್, ತರ್ಕಿಸ್ತಾನ, ಅಬ್ಬಿಸೀನಿಯಾ, ಊಚ್‌ಬಾಕ್, ತಾರ್ತರಿ, ಮತ್ತು ಕಾಶ್ಮೀರದ ಮನಮೋಹನ ಸುಂದರ ವನಿತೆಯರು. ಇಕ್ಕೆಲಗಳಲ್ಲಿಯೂ ಸುಶಿಕ್ಷಿತ ಸೈನಿಕರಂತೆ ಶಿಸ್ತಿನಿಂದ ನಿಂತಿದ್ದರು. ಅವರ ಉಡುಪುಗಳು, ಅತ್ಯಂತ ಮನೋಹರವಾಗಿದ್ದುವು. ಆಭರಣಗಳು ಅತ್ಯಮೂಲ್ಯವೂ, ಪ್ರಕಾಶಮಾನವೂ ಆಗಿದ್ದುವು. ಪುಣ್ಯ ಲೋಕಗಳಿಂದ ದೇವಕನ್ನಿಕೆಯರೇ ಮಾನವರನ್ನು ಮರುಳುಗೊಳಿಸುವ ಉದ್ದೇಶದಿಂದ ಭೂಲೋಕಕ್ಕೆ ಇಳಿದು ಬಂದಿದ್ದರೋ ಎಂದು ಭಾಸವಾಗುತ್ತಿತ್ತು. ನಾನು ಆನಂದ ಪರವಶನಾದೆ. ಭಾವಾವೇಶದಿಂದ ತುಂಬಿಹೋದ ನನ್ನ ಎದೆಯು ತೀವ್ರವಾಗಿ ಹೊಡೆದುಕೊಳ್ಳತೊಡಗಿತು. ಆ ನವಮೋಹನ ತರುಣಿಯರನ್ನು ಇಕ್ಕೆಲಗಳಲ್ಲಿಯೂ ನೋಡುತ್ತ ಒಂದು ಮಣ ಭಾರವುಳ್ಳ ಬೇಡಿ ತೊಡಿಸಿದಂತಿದ್ದ ನನ್ನ ಕಾಲುಗಳನ್ನು ಶ್ರಮದಿಂದ ಎತ್ತಿಡುತ್ತಾ ಮುಂದೆ ಮುಂದೆ ನಡೆದೆ. ಅಂತಃಪುರದ ಒಂದು ಭಾಗದಲ್ಲಿ ತಾತ್ಕಾಲಿಕವಾದ ಒಂದು ಮರೆ ಹಾಕಲ್ಪಟ್ಟಿತ್ತು. ಅದರ ಬಳಿ ಗಂಧದ ಮರ

ದಿಂದ ಮಾಡಲ್ಪಟ್ಟ ಒಂದು ಸುಖಾಸನವಿದ್ದಿತು. ಅದರ ಮೇಲೆ ಕುಳಿತುಕೊಳ್ಳ ಬೇಕೆಂದೂ ನನ್ನ ಮನಸ್ಸಿನಲ್ಲಿದ್ದುದನ್ನು ನಿವೇದಿಸಿಕೊಳ್ಳಬೇಕೆಂದೂ ಮರೆಯ ಆ ಕಡೆ ಸನ್ನಿಧಾನವು ಪ್ರಸನ್ನವಾಗಿರುವುದೆಂದೂ, ನಾನು ಹೇಳುವುದು ಅವರ ಚಿತ್ತಕ್ಕೆ ವೇದ್ಯವಾದೀತೆಂದೂ ಸೇವಕಿಯು ಹೇಳಿದಳು. ಆಗ ನಾನು ತೆರೆ ಮರೆಯಲ್ಲಿದ್ದ ರಾಣಿಯನ್ನು ಸಂಬೋಧಿಸಿ ಹೇಳತೊಡಗಿದೆ :

"ದಯೆಯ ಅವತಾರ ಸ್ವರೂಪಿಣಿ! ನಿನ್ನ ರಾಜ್ಯದಲ್ಲಿ ಕಾಲಿಟ್ಟ ಮೇಲೆ ಅನುದಿನವೂ ನನಗೆ ನೀಡಲ್ಪಟ್ಟ ಅತ್ಯಭೂತಪೂರ್ವವೂ, ಮಹದ್ವೈಭವ ಭರಿತವೂ ಆದ ಅತಿಥಿಸತ್ಕಾರವನ್ನು ಕುರಿತು ಮತ್ತೆ ಪ್ರಸ್ತಾಪಿಸಬೇಕಾದ ಆವಶ್ಯಕತೆಯಿರುವುದಿಲ್ಲ. ಇಷ್ಟು ಮಾತ್ರ ಹೇಳಿದರೆ ಸಾಕೆನ್ನಿಸುತ್ತದೆ ; ಈ ಎಲ್ಲ ಆನಂದಮಯ ಆದರದಿಂದಾಗಿ ನನ್ನೆದೆಯು ಕೃತಜ್ಞತೆಯಿಂದ ತುಂಬಿ ಬಿರಿಯು ವಂತಾಗಿದೆ. ಎಲ್ಲಕ್ಕೂ ಮಿಗಿಲೆನಿಸಿ ತೆರೆಮರೆಯಲ್ಲಿದ್ದು ಈ ಸೇವಕನೊಂದಿಗೆ ನಾಲ್ಕು ಮಾತುಗಳನ್ನು ಆಡಲು ಅನುಗ್ರಹಪೂರ್ವಕವಾಗಿ ಒಪ್ಪಿದುದಕ್ಕಾಗಿ ಸನ್ನಿಧಾನಕ್ಕೆ ನಾನು ಅನಂತವಾಗಿ ವಂದಿಸುತ್ತೇನೆ. ನಾನು ಪರ್ಷಿಯಾದೇಶದ ಇರಾನ್ ಪ್ರಾಂತ್ಯಕ್ಕೆ ರಾಜ. ನಿನ್ನ ಅಪಾರ ಉದಾರತೆಯ ಪ್ರಶಂಸನೀಯ ವಿಚಾರಗಳನ್ನು ಕಿವಿಯಾರೆ ಕೇಳಿ ನಾನು ನಿನ್ನನ್ನು ಪ್ರತ್ಯಕ್ಷ ನೋಡಬೇಕೆಂಬ ಕುತೂಹಲದಿಂದ ತುಂಬಿಹೋದೆ. ಇಲ್ಲಿಗೆ ಬಂದು ಈ ಉದಾರತೆಯ ವಿಧಾನ ಗಳನ್ನು ಕಂಡು ಸಂತಸಗೊಂಡೆ. ನನ್ನ ರಾಜ್ಯದಲ್ಲಿಯೂ ಈ ಆದರ್ಶವನ್ನು ಎತ್ತಿ ಹಿಡಿದು ನಡೆಯಬೇಕೆಂದು ತೀರ್ಮಾನಿಸಿದೆ. ಈ ರಾಜ್ಯದಲ್ಲಿ ನಾನು ಹೋದೆಡೆಯಲ್ಲೆಲ್ಲ ತಾಂಡವವಾಡುತ್ತಿದ್ದ ಅಪಾರ ಸಂಪತ್ತನ್ನು ಕಂಡು ನಾನು ಮುಗ್ಧನಾದೆ. ಹೆಚ್ಚು ಹೇಳಲೇಕೆ? ನನ್ನೊಬ್ಬನ ಮೇಲೆ ವರ್ಷಿಸಲ್ಪಟ್ಟ ಉದಾರ ದಾನವೊಂದರ ವೆಚ್ಚವನ್ನು ನಡೆದುಕೊಳ್ಳಲು ಪ್ರಪಂಚದಲ್ಲೆ ಅತ್ಯಂತ ಶ್ರೀಮಂತನೆನಿಸಿದ ಕರೂನನ ನಿಧಿಯೂ ಸಾಲದೆನಿಸಬಹುದು. ಈ ರಾಜ್ಯದ ವಿಸ್ತೀರ್ಣವು ಕಿರಿದಾದುದು. ಅದನ್ನು ಕಂಡು ರಾಜ್ಯದಲ್ಲಿ ವರಮಾನವು ಅತ್ಯಲ್ಪ ವಾದುದೆಂದೂ, ರಾಜ್ಯದ ನಾನಾ ಭಾಗಗಳಲ್ಲಿ ಅನುದಿನವೂ ಎಷ್ಟೊಂದು ಯಾತ್ರಿ ಕರು ಬರುತ್ತಾರೆ ಎಂಬುದನ್ನು ಯೋಚಿಸಿ ನೋಡಿದರೆ ರಾಜ್ಯದ ಸಾಧಾರಣ ಹುಟ್ಟುವಳಿಯು ಯಾಂತ್ರಿಕರ ಆತಿಥ್ಯಕ್ಕಾಗಿ ಪಾಕಶಾಲೆಗಳಲ್ಲಿ ಮಾಡುವ ಒಂದೇ

ಒಂದು ದಿನದ ವೆಚ್ಚಕ್ಕೂ ಸಾಲದೆಂದೂ ಮನವರಿಕೆಯಾಗುತ್ತದೆ. ಆದುದರಿಂದ ಈ ರಾಜ್ಯದ ಅತಿಶಯ ಸಂಪತ್ತಿಗೆ ವ್ಯಯಮಾಡಿದಷ್ಟೂ ಅಕ್ಷಯವಾಗುವಂತೆ ತೋರುತ್ತಿರುವ ಈ ಅಪಾರ ಸಂಪತ್ತಿಗೆ ಮೂಲಾಧಾರವೇನು ?

"ಅದೊಂದೆಡೆ ಇರಲಿ ; ನಾನು ಈಗ ನಿಮ್ಮ ರೋಜಿಗೆ ಹೊರಡಲು ನಿಶ್ಚಯಿಸಿದ್ದೇನೆ. ಬಾಹ್ರಾವರನು ಹೇಳಿದ ವಿಚಿತ್ರ ವೃತ್ತಾಂತದ ಸಮಸ್ಯೆಯನ್ನು ಬಗೆಹರಿಸುವ ಉಪಾಯವನ್ನು ಆದಿಮೂಲವಾಗಿ ಕಂಡುಹಿಡಿಯಬೇಕೆಂದು ನಿರ್ಧರಿಸಿದ್ದೇನೆ. ಅನಂತರ ಸಂಶಯವು ನಿವಾರಣೆಯಾಗಿ, ಸನ್ನಿಧಾನವು ಸಂತೃಪ್ತಿಗೊಂಡು ಈ ಸೇವಕನು ಪ್ರೇಮಹಸ್ತವನ್ನು ಸ್ವೀಕರಿಸಿ ನಮ್ಮಿಬ್ಬರ ನಡುವಿನಲ್ಲಿ ವಿವಾಹಕ್ಕೆ ಇರುವ ತೊಡಕು ಮುರಿದು ಬೀಳಬಹುದಲ್ಲವೆ ? ಆ ಆನಂದಮಯ ಪರಿಣಾಮ ರಮಣೀಯತೆಯನ್ನು ಅತ್ಯುತ್ಸಾಹದಿಂದ ಎದಿರು ನೋಡುತ್ತ ನಾನೀಗ ಸಮಸ್ಯಾಪರಿಹಾರಕ್ಕಾಗಿ ಮಹತ್ಪ್ರಯತ್ನಗಳನ್ನು ಮಾಡಲು ಬದ್ಧಕಂಕಣನಾಗಿ ಹೊರಟಿದ್ದೇನೆ.

"ಇದನ್ನು ಕೇಳಿದ ರಾಣಿಯು (ಆಕೆಯನ್ನು ಇನ್ನು ಮುಂದೆ ರಾಜ ಕುಮಾರಿ ಎಂದೇ ಕರೆಯಬಾರದೇತಕ್ಕೆ ?) ತೆರೆ ಮರೆಯಲ್ಲಿ ಕುಳಿತು ಈ ರೀತಿ ಪ್ರತ್ಯುತ್ತರವಿತ್ತಳು :

"ಎಲೈ ವೀರೋತ್ಸಾಹಭರಿತ ತರುಣನೇ ! ನೀನು ನನ್ನ ಚರಿತ್ರೆಯನ್ನು ಕೇಳಬಯಸುವುದಾದರೆ ಈ ದಿನವೂ ಇಲ್ಲೇ ಇದ್ದುಬಿಡು, ನಾನು ಸಂಧ್ಯಾ ಸಮಯದಲ್ಲಿ ನಿನಗೆ ಹೇಳಿಕಳುಹಿಸುತ್ತೇನೆ. ಆಗ ಯಾವುದೊಂದು ಮುಚ್ಚು ಮರೆಯೂ ಇಲ್ಲದೆ ನನ್ನ ಅಪಾರ ನಿಧಿಯನ್ನು ಕುರಿತು ವಿವರಗಳನ್ನು ನೀನು ಕೇಳಬಹುದು."

ರಾಜಕುಮಾರಿಯಿಂದ ಈ ಭರವಸೆಯನ್ನು ಹೊಂದಿದ ನಾನು ಆನಂದ ದಿಂದ ಹಿಂತಿರುಗಿದೆ. ಸಂಧ್ಯಾಸಮಯವನ್ನೇ ನಾನು ಅತ್ಯಾತುರದಿಂದ ನಿರೀಕ್ಷಿ ಸುತ್ತಿದ್ದೆ. ಅಷ್ಟರಲ್ಲಿ ರಾಜಕುಮಾರಿಯ ಶುಶ್ರೂಷೆಯಲ್ಲಿ ನಿರತನಾದ ಸೇವಕಿ ಯೊಬ್ಬಳು, ಹತ್ತಾರು ಸೇವಕರ ತಲೆಯ ಮೇಲೆ ಉತ್ಕೃಷ್ಟ ಭಕ್ಷ್ಯಭೋಜ್ಯ ಗಳನ್ನು ಹೊರಿಸಿಕೊಂಡು ಬಂದು ನನ್ನೆದುರಿಗೆ ಇಳಿಸಿ, "ರಾಜಕುಮಾರಿ ತಾನು ಭುಜಿಸುವ ಭಕ್ಷ್ಯಭೋಜ್ಯಗಳನ್ನು ನಿನಗೂ ಕಳುಹಿಸಿ ಗೌರವಿಸಿರುವಳು ;

ಅವುಗಳನ್ನು ಸ್ವೀಕರಿಸಿ ಸಂತುಷ್ಟನಾಗು" ಎಂದಳು. ಊಟವು ಅತ್ಯಂತ ಹಿತ ಕರವಾಗಿತ್ತು. ಹೊಟ್ಟೆ ತುಂಬ ಭಕ್ಷ್ಯಭೋಜ್ಯಾದಿಗಳನ್ನು ಸವಿದು ನಾನು ಸಂತೃಪ್ತನಾದೆನೆಂದೂ ಅವನ್ನು ಕಳುಹಿಸಿದುದಕ್ಕಾಗಿ ನಾನು ರಾಜಕುಮಾರಿ ಯನ್ನು ಅನಂತವಾಗಿ ವಂದಿಸುತ್ತೇನೆಂದೂ ಹೇಳಿಕಳುಹಿಸಿದೆ.

ಕಟ್ಟಕಡೆಯಲ್ಲಿ ಸೂರ್ಯಭಗವಾನನು ಅರುಣಾಂಬರವನ್ನು ತೊಟ್ಟು ಪರ್ವತಶಿಖರದಲ್ಲಿ ಅಸ್ತಮಿಸತೊಡಗಿದ್ದನು. ಆಮುನ್ನ ನನಗೆ ಪರಿಚಿತಳಾಗಿದ್ದ ಸೇವಕಿಯೊಬ್ಬಳು ನನ್ನ ಬಳಿ ಬಂದು ರಾಜಕುಮಾರಿಯು ನನ್ನ ಬರುವಿಕೆಯನ್ನು ಎದಿರು ನೋಡುತ್ತಿರುವುದಾಗಿ ಹೇಳಿದಳು. ನಾನು ಸೇವಕಿಯೊಂದಿಗೆ ಅರ ಮನೆಯ ಅಂತಃಪುರವನ್ನು ಪ್ರವೇಶಿಸಿದೆ. ಆ ಸೌಧದ ಚಿತ್ರವಿಚಿತ್ರ ವೈಭವ ವಿಜೃಂಭಣೆಗಳನ್ನು ವರ್ಣಿಸಲು ನನ್ನಿಂದಳವಲ್ಲ. ನೆಲಕ್ಕೂ ಗೋಡೆಗಳಿಗೂ ಹೊದ್ದಿಸಿದ್ದ ನಿಲುಗನ್ನಡಿಗಳಿಗೂ ವ್ಯತ್ಯಾಸವೇ ಕಾಣುತ್ತಿರಲಿಲ್ಲ. ಬಾಗಿಲು ಗಳಿಗೆಲ್ಲ ವಜ್ರ ವೈಢೂರ್ಯ, ಗೋಮೇಧಿಕ, ಪುಷ್ಪರಾಗ, ಪಚ್ಚೆ ನೀಲಗಳಿಂದ ಅಲಂಕೃತವಾಗಿದ್ದುವು. ಎಲ್ಲೆಲ್ಲೂ ಒಂದೇ ಸ್ವರ್ಣಮಯ! ರಜತಮಯ! ನವರತ್ನಗಳ ಕಾಂತಿ! ಕಣ್ಣು ಕುಕ್ಕುವಂತಿತ್ತು! ನೂರಾರು ನಿಲುಗನ್ನಡಿಗಳು ಒಂದರ ಮುಂದಿರುವ ಪ್ರತಿಬಿಂಬ ಮತ್ತೊಂದರಲ್ಲಿ ತೋರುತ್ತಿರಲು ಆ ಸೌಧವು ನೂರ್ಮಡಿ ವಿಸ್ತಾರವಾಗಿಯೂ, ರಮಣೀಯವಾಗಿಯೂ ಕಂಗೊಳಿಸುತ್ತಿತ್ತು. ಸೌಧದ ಒಂದು ಭಾಗದಲ್ಲಿ ಒಂದು ಅತ್ಯಮೋಘವಾದ ರತ್ನಮಯ, ಪ್ರಜ್ವಲಿತ ಘರದೆಯು ಕಟ್ಟಲ್ಪಟ್ಟದ್ದಿತು. ಅದರ ಮರೆಯಲ್ಲಿ ರಾಜಕುಮಾರಿಯು ಸಿಂಹಾ ಸನದಲ್ಲಿ ಮಂಡಿಸಿದ್ದಳೆಂದು ತಿಳಿಯಿತು. ಘರದೆಯ ಈ ಬದಿಯಲ್ಲಿ ನನಗಾಗಿ ಹಾಕಲ್ಪಟ್ಟದ್ದ ಸುಂದರವಾದ ಸುಖಾಸನದಲ್ಲಿ ನಾನು ಕುಳಿತೆ. ನನ್ನನ್ನು ಕರೆ ತಂದಿದ್ದ ಆ ಸೇವಕಿ ನನ್ನ ಬಲಗಡೆ ಕುಳಿತಳು. ರಾಜಕುಮಾರಿಯು ತಾನೇ ತನ್ನ ಕಥೆಯನ್ನು ಹೇಳಬಯಸಲಿಲ್ಲ. ಆದುದರಿಂದ ಅದನ್ನು ಸೇವಕಿಯು ಹೇಳ ಬೇಕೆಂದು ಆಜ್ಞಾಪಿಸಿದಳು. ತನ್ನ ಒಡತಿಯ ಜೀವನ ಚರಿತ್ರೆಯನ್ನು ಸೇವ ಕಿಯು ಹೇಳತೊಡಗಿದಳು.

ಈ ದೇಶದ ಸುಲ್ತಾನನು ಬಹಳ ಪರಾಕ್ರಮಿಯಾಗಿದ್ದನು. ಆತನಿಗೆ ಏಳು ಜನ ರಾಜಪುತ್ರಿಯರಿದ್ದರು. ಆದರೆ ಗಂಡುಮಕ್ಕಳಿರಲಿಲ್ಲ. ಒಂದು ದಿವಸ, ಅತ್ಯಂತ ವೈಭವವಾದ ಒಂದು ಸಾರ್ವಜನಿಕ ಉತ್ಸವವು ಆಚರಿಸಲ್ಪಟ್ಟಿತು. ಆಗ ಉತ್ಕೃಷ್ಟವೂ, ಚಿತ್ತಾಕರ್ಷಣೀಯವೂ ಆದ ಉಡುಪುಗಳನ್ನು ಧರಿಸಿ ಜಾಜ್ವಲ್ಯಮಾನ್ಯವಾದ ಒಡವೆಗಳಿಂದ ಅಲಂಕೃತವಾದ ಆ ಏಳು ಜನ ಸುಂದರ ರಾಜಕುಮಾರಿಯರೂ ಸುಲ್ತಾನನ ಸಮ್ಮುಖದಲ್ಲಿ ನಿಂತಿದ್ದರು. ಅವರ ಅವಯವಗಳು ಅವರು ತೊಟ್ಟಿದ್ದ ಆಭರಣಗಳಲ್ಲಿ ತುಂಬಿಹೋಗಿದ್ದ ನವರತ್ನ ಪ್ರಭೆಯಿಂದ ಮನರಂಜಕವಾಗಿ ಪ್ರಕಾಶಿಸುತ್ತಿದ್ದುವು. ರಾಜಕುಮಾರಿಯರು ತಮ್ಮ ಕೇಶರಾಶಿಯನ್ನು ಉತ್ತಮ ಮುಕ್ತಾಭರಣಗಳಿಂದ ಅಲಂಕರಿಸಿಕೊಂಡಿದ್ದರು. ರಾಜಕುಮಾರಿಯರನ್ನು ಕಂಡು ಆನಂದಗೊಂಡ ಸುಲ್ತಾನನು ಯಾವುದೋ ಭಾವಾವೇಶದಲ್ಲಿ ಈ ರೀತಿ ನುಡಿದ.

"ಕುವರಿಯರೆ! ನಿಮ್ಮ ಜನಕನು ಸುಲ್ತಾನನಾಗಿರದಿದ್ದರೆ, ನೀವು ಯಾರಾದರೊಬ್ಬ ಅಜ್ಞಾತ ಬಡವನ ಕುಟೀರದಲ್ಲಿ ಹುಟ್ಟಿದ್ದರೆ, ಆಗ ನಿಮ್ಮನ್ನು ರಾಜಕುಮಾರಿಯರೆಂದು ಯಾರು ಕರೆಯುತ್ತಿದ್ದರು? ನೀವು ರಾಜಕುವರಿಯರೆಂದು ಸಂಬೋಧಿಸಲ್ಪಡುತ್ತಿರುವುದು ನಿಮ್ಮ ಅದೃಷ್ಟವೆಂದು ತಿಳಿಯಿರಿ. ನಿಮ್ಮ ಈ ಅತುಳೈಶ್ವರ್ಯಕ್ಕೂ ಸಮ್ಮೋಹನ ಸ್ವರೂಪಕ್ಕೂ, ಸಕಲ ಸನ್ಮಾನಗಳಿಗೂ ನಾನೇ ಪ್ರಧಾನ ಕಾರಣನಲ್ಲವೇ? ನಾನು ಜೀವದೊಂದಿಗಿರುವ ವರೆಗಷ್ಟೆ ನಿಮ್ಮ ಸಂಪತ್ತು ಸೌಂದರ್ಯಗಳೂ ಸ್ಥಿರವಾಗಿರಬಲ್ಲುವು? ಆರು ಜನ ರಾಜಕುಮಾರಿಯರು ಸುಲ್ತಾನನನ್ನು ಕುರಿತು, ಒಮ್ಮತದಿಂದ "ತಂದೆ! ಅದು ಬಹಳ ಸತ್ಯ. ನಮ್ಮ ಈ ವೈಭವ ಜೀವನವೂ, ಸಮ್ಮೋಹನ ಸೌಂದರ್ಯವೂ, ನಿನ್ನ ದಯೆಯಿಂದಲೇ ಲಭಿಸಿದುವು. ನೀನು ಜೀವದಿಂದಿರುವಷ್ಟು ಕಾಲವೇ ಅವು ವೈಭವ

ದಿಂದ ನಿಲ್ಲಬಲ್ಲುವು. ಅದನ್ನು ನಾವು ಚೆನ್ನಾಗಿ ಮನಗಂಡಿದ್ದೇವೆ" ಎಂದರು. ಆದರೆ ಏಳನೆಯ ರಾಜಕುಮಾರಿ, ಅಪಾಗಿ, ಆೂೀ ಘರದೆಯ ಹಿಂದೆ ಸಿಂಹಾಸನದಲ್ಲಿ ಮಂಡಿಸಿರುವ ಸನ್ನಿಧಾನದವರು, ಇತರ ರಾಜಕುಮಾರಿಯರಿಗಿಂತ ಕಿರಿಯವಳಾದರೂ–ಅವರಿಗಿಂತ ಹೆಚ್ಚು ಬುದ್ಧಿ ಕುಶಲತೆಯುಳ್ಳ ಆಕೆ–ಮೌನಳಾಗಿಯೇ ಇದ್ದಳು. ತನ್ನ ತಂದೆಯಾದ ಸುಲ್ತಾನನು ಹೇಳಿದ ಮಾತಿಗೆ ಏನೊಂದೂ ಪ್ರತ್ಯುತ್ತರ ಹೇಳಲಿಲ್ಲ. ಏಕೆ? ಸುಲ್ತಾನನು ಹೇಳಿದ ಮಾತು ಅಹಂಕಾರ ಭರಿತವಾದುದೆಂದೂ, ಅಜ್ಞಾನಮಯವಾದುದೆಂದೂ, ಸೃಷ್ಟಿಕರ್ತನನ್ನು ಹಂಗಿಸುವ ನಾಸ್ತಿಕಮತವೆಂದೂ, ಅತ್ಯಂತ ಅಪವಿತ್ರವಾದ, ಅನ್ಯಾಯವಾದ ಭಾವನೆಯೆಂದೂ ಆಕೆ ಮನಗಂಡಳು. ಸುಲ್ತಾನನು ಆಕೆಯನ್ನು ಕ್ರೋಧಾವೇಶದಿಂದ ಉಗ್ರವಾಗಿ ನೋಡುತ್ತ ಕೇಳಿದನು :

"ಯಾಕೆ ಮಗಳೆ! ನಿನಗೇನೂ ಹೇಳುವುದಕ್ಕೆ ತೋರಲಿಲ್ಲವೆ? ನಿನ್ನ ಬಾಯಿ ಬಿಗಿದಿದೆಯೇತಕ್ಕೆ?"

ಆಗ ರಾಜಕುಮಾರಿಯು ತನ್ನ ಕೈಗಳೆರಡನ್ನೂ ತನ್ನ ಕರವಸ್ತ್ರದಿಂದ ಬಿಗಿದುಕೊಂಡು ನಮ್ರವಾಗಿ ಅರಸು ತಂದೆಯಲ್ಲಿ ಬಿನ್ನವಿಸಿಕೊಂಡಳು :

"ಸುಲ್ತಾನ ಸಾಹೇಬರು ನನ್ನ ಪ್ರಾಣವನ್ನು ಉಳಿಸುವುದಾಗಿ ವಚನವಿತ್ತು, ನನ್ನ ಮನಸ್ಸಿನ ಭಾವನೆಗಳನ್ನು ಮನ್ನಿಸಲು ಸಿದ್ಧರಾಗಿರುವುದಾದರೆ ನಾನು ಆತ್ಮಸಾಕ್ಷಿಯಾಗಿ ನನಗೆ ತೋರುವ ಭಾವನೆಗಳನ್ನು ಹೊರಗೆಡಹುತ್ತೇನೆ"

"ನಿನಗೆ ತೋರಿದ್ದನ್ನು ಹೇಳು. ಕೇಳಲು ನಾನು ಸಿದ್ಧನಿದ್ದೇನೆ." ಸುಲ್ತಾನನು ಹೇಳಿದ.

ಆಗ ರಾಜಕುಮಾರಿಯು ತನ್ನ ಮನಸ್ಸಿನಲ್ಲುದಯಿಸಿದ ಭಾವನೆಗಳನ್ನು ಸುಲ್ತಾನನಲ್ಲಿ ಈ ರೀತಿ ಬಿಚ್ಚಿ ಹೇಳಿದಳು.

"ಅತುಳ ವೈಭವ ಪರಾಕ್ರಮಗಳಿಂದ ಕೂಡಿದ ಸುಲ್ತಾನ ಮಹಾಶಯರೇ! ಸತ್ಯವು ಅನೇಕಸಲ ಕೇಳುವುದಕ್ಕೆ ಕಹಿಯಾಗಿರುವುದೆಂದು ನೀವು ಬಲ್ಲಿರಿ. ಅದುದರಿಂದ ನಾನು ನನ್ನ ಪ್ರಾಣಕ್ಕೂ ಅಂಜದೆ ಈಗ ಹೇಳಬೇಕೆಂದಿರುವ ಸತ್ಯವಾದ ಮಾತುಗಳು ನಿಮ್ಮ ಮನಸ್ಸಿಗೆ ಅಪ್ರಿಯವಾದರೂ, ನೀವು ಅವುಗಳನ್ನು ಕಂಡು ಆಶ್ಚರ್ಯಪಡಲಾರಿರಿ ಎಂದು ಎಣಿಸುತ್ತೇನೆ; ಸೃಷ್ಟಿಕರ್ತನು ನನ್ನ

ಹಣೆಯಲ್ಲಿ ಬರೆದಿರುವ ಬರಹವನ್ನು ನಾನು ಅಳಿಸಿ ಹಾಕಲು ಸಾಧ್ಯವೇ? ಅಥವಾ ವಿಧಿಯನ್ನು ತಡೆಗಟ್ಟಲಾದರೂ ನನಗೆ ಸಾಧ್ಯವೇ ? ಮಾನವನು ತಮ್ಮ ಸ್ವಂತ ಶ್ರಮ ಪ್ರಯತ್ನಗಳಿಂದ ದುಡಿದರೂ, ಅಥವಾ ಪ್ರಾರ್ಥನೆಗಳಿಂದ ಒಳಿತಾದೀತೆಂದು ಭಾವಿಸಿದರೂ, ಅಥವಾ ವಿಧಿ ಎಂತಿದ್ದರಂತಾಗಲೆಂದು ನಂಬಿ ನಡೆದರೂ, ಅವರವರ ಹಣೆಯಲ್ಲಿ ಬರೆದಿರುವ ವಿಧಿಶಾಸನದಂತೆ ನಡೆದೇ ನಡೆಯುತ್ತದೆ. ನಿನ್ನನ್ನು ಅರಸನನ್ನಾಗಿ ಸೃಷ್ಟಿಸಿದ ಅದೇ ಅಪಾರ ಮಹಿಮನೇ ನನ್ನನ್ನೂ ಅರಸಕುಮಾರಿಯನ್ನಾಗಿ ಸೃಷ್ಟಿಸಿದ್ದಾನೆ. ಅಪಾರ ಮಹಿಮನ ದಿವ್ಯ ಸಂಕಲ್ಪದಲ್ಲಿ ಅವನೇ (ಸೃಷ್ಟಿಕರ್ತನು.) ಎಲ್ಲದಕ್ಕಿಂತಲೂ, ಎಲ್ಲರಿಗಿಂತಲೂ, ಹಿರಿಯವನು ; ಅತ್ಯಂತ ಹೆಚ್ಚಾದ ಶಕ್ತಿಯುಳ್ಳವನು. ಪ್ರಬಲ ಪರಾಕ್ರಮಿಯಾದ ಸುಲ್ತಾನರೇ! ನೀವು ನನ್ನ ಅರಸರು ! ಹಿತರಕ್ಷಕರು ! ನಿಮ್ಮ ಪಾದ ಧೂಳಿಯನ್ನು ನನ್ನ ಕಣ್ಣಿನ ಅಂಜನವಾಗಿ ಉಪಯೋಗಿಸಿಕೊಳ್ಳಬಹುದು. ಅದು ಸ್ವಾಭಾವಿಕವಾಗಿಯೇ ಇದೆ. ಆದರೆ ಅವರವರ ವಿಧಿ ಅವರವರ ಬೆನ್ನ ಹಿಂದೆ ಸದಾಸಿದ್ಧವಾಗಿಯೇ ನಿಂತಿರುತ್ತೆ. ಒಬ್ಬರ ವಿಧಿಯನ್ನು ಮತ್ತೊಬ್ಬರ ವಿಧಿ ಮಾರ್ಪಡಿಸಲಾಗದು. "

ರಾಜಕುಮಾರಿಯ ಮಾತುಗಳನ್ನು ಕೇಳಿ ಸುಲ್ತಾನನ ನರಗಳು ಅಲ್ಲಾಡಿ ಹೋದುವು. ಆತನು ಅತ್ಯಂತ ಕೋಪಕ್ಕೆ ಒಳಗಾದನು. ತಾನು ರಾಜಕುಮಾರಿಯಾಗಿರುವುದು ಸುಲ್ತಾನನಾದ ತನ್ನ ದೆಸೆಯಿಂದಲೇ ಎಂದೂ, ಅದು ವಿಧಿಯ ಶಾಸನದಂತೆ ಅಲ್ಲವೆಂದೂ, ಅವಳು ಹೇಳಬೇಕೆಂದು ಅವನು ಅಪೇಕ್ಷಿಸಿದ್ದನು. ಆದರೆ ಅದಕ್ಕೆ ವಿರುದ್ಧವಾಗಿ ಅವಳು ಒಂದು ಉಪನ್ಯಾಸವನ್ನು ಮಾಡಿ ತನ್ನ ತಪ್ಪುಗಳನ್ನು ಎತ್ತಿ ತೋರಿಸಿದ್ದಳು. ಎಲ್ಲರಿಗಿಂತಲೂ ಕಿರಿಯವಳಾದ ಆ ರಾಜಕುಮಾರಿಯನ್ನು ಕಂಡು ಸುಲ್ತಾನನು ಕುಪಿತನಾದನು. "ಸಣ್ಣ ಬಾಯಿಂದ ಹೊರಟ ಬಹು ದೊಡ್ಡಮಾತುಗಳಿವು" ಎಂದು ಸುಲ್ತಾನನು ಅವಳನ್ನು ಹಂಗಿಸುತ್ತ ಸೇವಕರನ್ನು ಕುರಿತು ಹೇಳಿದ: "ಅವಳ ವಿಧಿಯನ್ನು ಈಗ ಪರೀಕ್ಷಿಸಿಯೇಬಿಡೋಣವಂತೆ. ಅವಳ ಮೈಮೇಲಿರುವ ಎಲ್ಲ ಆಭರಣಗಳನ್ನೂ ಕಿತ್ತುಕೊಳ್ಳಿ. ಅವಳನ್ನೊಂದು ಧೂಲಿಯಲ್ಲಿ ಕುಳ್ಳಿರಿಸಿ ಕಾಡಿಗೆ ಕರೆದುಕೊಂಡು ಹೋಗಿ ಬಿಟ್ಟುಬಿಡಿ—ನಿರ್ಜನವಾದ ಕಾಡಿನಲ್ಲಿ, ಬಿಟ್ಟುಬಿಡಿ. ತಕ್ಷಣ ಹಿಂತಿರುಗಿ ಹೊರಟುಬನ್ನಿ. ಅವಳ ಹಣೆಯಲ್ಲಿ ಏನೇನು ಬರೆದಿದೆಯೋ ನಾವೇ ಓದಿ ನೋಡೋಣವಂತೆ !"

ಅರಮನೆಯಲ್ಲಿ ತನ್ನ ಅಂತಃಪುರವನ್ನುಳಿದು ಹೊರಗೆ ಹೋಗದೆ, ಸುಲ್ತಾನನ ಆಶ್ರಯದಲ್ಲಿ ಅದುವರೆಗೂ ಸಮಸ್ತ ಸಂತಸಭರಿತವಾದ ಆರೈಕೆಗಳಿಗೆ ಪಾತ್ರಳಾಗಿದ್ದ ಆ ಕೋಮಲ ಕುಮಾರಿಯನ್ನು ಹುಲ್ಲು ಹಾಸಿದ ಒಂದು ತೊಟ್ಟಿಲಲ್ಲಿ ಕುಳ್ಳಿರಿಸಿ, ಕಗ್ಗತ್ತಲೆ ಕವಿದ ಆ ನಿಶಿರಾತ್ರಿಯಲ್ಲಿ, ಕನಿಕರ ರಹಿತರಾದ ಕಟುಕ ಸಮಾನರೂ ಆದ ಸುಲ್ತಾನನ ಸೇವಕರು, ಕಾಡಿನ ಒಂದು ನಿರ್ಜನ ಪ್ರದೇಶದಲ್ಲಿ ಬಿಟ್ಟು ತಮ್ಮ ಕಾರ್ಯವನ್ನು ನೆರವೇರಿಸಿದುದಾಗಿ ಸುಲ್ತಾನನಿಗೆ ವರದಿ ಮಾಡಿದರು.

ಅಡವಿಯ ಆ ಭಾಗದಲ್ಲಿ ರೆಕ್ಕೆಯನ್ನು ಆಡಿಸಿ ಗಾಳಿಯನ್ನು ಬೀಸುವ ಒಂದು ಹಕ್ಕಿಯೂ ಇರಲಿಲ್ಲ. ತಿನ್ನುವುದಕ್ಕೆ ಆಹಾರವಿರಲಿಲ್ಲ. ಮಲಗುವುದಕ್ಕೆ ಒಂದು ನೆರಳಿರಲಿಲ್ಲ. ಮಾತನಾಡುವುದಕ್ಕೆ ಮನುಷ್ಯರಿರಲಿಲ್ಲ. ಮಮತೆ ಯಿಂದ ಮರುಕ ತೋರಿಸುವವರಾರು ? ಇದ್ದಕ್ಕಿದ್ದಂತೆ ರಾಜಕುಮಾರಿಯು ಈ ಹೀನಪರಿಸ್ಥಿತಿಗೆ ಗುರಿಯಾದಳು. ಅವಳ ಅಗಿನ ಮನಸ್ಸಿನ ಯಾತನೆಗಳು ಎಷ್ಟೊಂದು ದುರ್ಭರವಾಗಿದ್ದಿರಬಹುದು? ಆದರೆ ಆಕೆ ಧೈರ್ಯವನ್ನು ತಾಳಿದಳು; ಹೇಡಿಗಳಂತೆ ಎದೆಗುಂದಲಿಲ್ಲ. ಅವ್ಯಕ್ತನಾದ ಪರಮಾತ್ಮನಲ್ಲಿ ಪರಿಪರಿಯಾಗಿ ಮೊರೆಯಿಟ್ಟಳು.

"ಹೇ ಭಗವಂತ ! ಸೃಷ್ಟೀಶ ! ಸರ್ವೇಶ್ವರ ! ನೀನು ಸರ್ವಶಕ್ತನು ! ಅಪಾರ ದಯಾಮಹಿಮನು ! ನಿನ್ನ ಸಂಕಲ್ಪವಿದ್ದಂತೆ ನೀನು ನಡೆಸಿದ್ದೀಯೆ, ನನ್ನೆದೆಯಲ್ಲಿ ಉಸಿರಾಡುತ್ತಿರುವವರೆಗೂ ನಾನು ನಿನ್ನ ರಕ್ಷಣ ಶಕ್ತಿಯನ್ನು ಮರೆಯಲಾರೆ. ನೀನೇ ನನಗೆ ಗತಿ, ಮತಿ ! ನಿನ್ನನ್ನುಳಿದು ನನಗೆ ಬೇರೆ ದಿಕ್ಕಿಲ್ಲ. ನಿನ್ನ ಅಮೃತ ಹಸ್ತದಿಂದ ನನ್ನನ್ನು ಕಾಪಾಡು, ಕಾಪಾಡು !"

ಹೀಗೆಂದು ದೈನ್ಯವಾಗಿ ಮೊರೆಯಿಟ್ಟು, ಸರ್ವಶಕ್ತನಾದ ಪರಮೇಶ್ವರನೇ ತನ್ನ ನಿಜವಾದ ರಕ್ಷಕನೆಂದು ಅಚಲವಾಗಿ ನಂಬಿ, ಆಯಾಸವನ್ನು ತಾಳಲಾರದೆ, ತನ್ನ ತೊಟ್ಟಿಲಲ್ಲೆ ಮಲಗಿ ನಿದ್ರೆಹೋದಳು. ಅವಳು ಎಚ್ಚೆತ್ತುಕೊಳ್ಳುವವೇಳೆಗೆ ಪ್ರಾತಃಕಾಲವಾಗಿತ್ತು. ಸೂರ್ಯ ಭಗವಾನನ ಅರುಣಕಿರಣಗಳೂ ತಂಬೆಲರೂ ಪಕ್ಷಿಗಳ ಕಿಲಕಿಲಧ್ವನಿಯೂ, ಅವಳನ್ನು ಆನಂದದಿಂದ ಸ್ವಾಗತಿಸುವಂತಿತ್ತು.

ಬೆಳಗ್ಗೆ ಎದ್ದವಳೇ ಕಣ್ಣು ತೆರೆಯುವುದಕ್ಕೆ ಮುನ್ನ ರಾಜಕುಮಾರಿ ತಾನು ಕಾಡಿನಲ್ಲಿರುವುದನ್ನು ಮರೆತು ಅರಮನೆಯಲ್ಲಿ ಮಲಗಿ ಎದ್ದವಳಂತೆ ಭಾವಿಸಿ ಪದ್ಧತಿಯ ಪ್ರಕಾರ 'ಹಲ್ಲು ತೊಳೆಯುವುದಕ್ಕೆ ನೀರು ತಾ' ಎಂದು ಸೇವಕಿಯನ್ನು ಕರೆದಳು. ಬಳಿಕ ಕಣ್ಣು ಬಿಟ್ಟು ನೋಡಿದರೆ ಕಾಡು. ಹಿಂದಿನ ರಾತ್ರಿ ನಡೆದುದೆಲ್ಲ ಅವಳಿಗೆ ನೆನಪಿಗೆ ಬಂತು. "ಈ ಬೆಂಗಾಡಿನಲ್ಲಿ ನಾನು ನೀರಿಗಾಗಿ ಅರಚಿದರೆ ನನ್ನನ್ನು ಕೇಳುವವರಾರು ? ಇದೇನು ಅರಮನೆಯೆ ?" ಎಂದು ಸುಮ್ಮನಾದಳು. ಬೆಳಿಗ್ಗೆ ಎದ್ದೊಡನೆಯೆ ಮುಖ ಕೈಕಾಲು ತೊಳೆದು ಕೊಂಡು ಪ್ರಾರ್ಥನೆಮಾಡೋಣವೆಂದರೆ ನೀರಿಲ್ಲ. ಆಗ ಅವಳು ತನ್ನ ಬದಿ ಯಲ್ಲಿದ್ದ ಮರಳಿನಲ್ಲಿ ಒಂದು ಹಿಡಿಯನ್ನು ತೆಗೆದು ಮುಖ ಕೈಕಾಲುಗಳನ್ನು ಉಜ್ಜಿ, ಎಂದಿನಂತೆ ತನ್ನ ಸೃಷ್ಟಿಕರ್ತನನ್ನು ಅತ್ಯಂತ ಭಕ್ತಿಯಿಂದ ಕೊಂಡಾಡಿ ದಳು. ಬಳಿಕ ತೊಟ್ಟಿಲಲ್ಲಿ ಕುಳಿತು ಭಗವಂತನಲ್ಲಿ ತನಗಿದ್ದ ದೃಢನಂಬಿಕೆ ಯನ್ನು ಸೂಚಿಸುವ—ಕೀರ್ತನೆಯನ್ನು ತನಗೆ ಜ್ಞಾಪಕವಿದ್ದಷ್ಟು—ಹಾಡು ತ್ತಿದ್ದಳು.

"ಹೇ ದೇವೇಶ! ನನಗೆ ಹಲ್ಲು ಹುಟ್ಟುವುದಕ್ಕೆ ಮುನ್ನ ಹಾಲುಕುಡಿಸಿದೆ, ಹಲ್ಲುಗಳನ್ನು ಕೊಟ್ಟ ನೀನು ಕಡಿದು ತಿನ್ನಲು ಆಹಾರವನ್ನು ಕೊಡಲಾರೆಯಾ? ಗಾಳಿಯಲ್ಲಿ ಸ್ವೇಚ್ಛೆಯಾಗಿ ಸಂಚರಿಸುವ ಪಕ್ಷಿಗಳನ್ನು ಮಣ್ಣಿನಲ್ಲಿ ಅಡಗಿರುವ ಕ್ರಿಮಿಕೀಟಗಳನ್ನು, ನೆಲದಮೇಲೆ ಹಾರಾಡುವ ಇರುವೆ ಮುಂತಾದ ಅತಿ ಸಣ್ಣ ಜೀವಿಗಳನ್ನು, ಅಡವಿಯಲ್ಲಿ ಅಲೆಯುವ ಮೃಗಗಳನ್ನೂ—ಏಕೆ ? ಸೃಷ್ಟಿಯಲ್ಲಿ ರುವ ಕೋಟ್ಯಾನು ಕೋಟಿ ಜೀವರಾಶಿಗಳನ್ನು ಅನುದಿನವೂ ನೀನು ಎಡೆಬಿಡದೆ ಕಾಪಾಡುತ್ತಿರುವೆ ! ನಾನೊಬ್ಬಳು ನಿನಗೆ ಹೊರೆಯಾಗಬಲ್ಲನೆ ? ಇಲ್ಲ. ನೀನು ಬರೆದ ವಿಧಿಶಾಸನವನ್ನನುಸರಿಸಿಯೇ ನಾನೀಗ ಈ ಕಾಡಿನಲ್ಲಿರುವುದು. ಅರಮನೆಯಲ್ಲಿ ಕಾಪಾಡಿದವನೂ ನೀನೇ ! ಅಡವಿಯಲ್ಲಿ ಕಾಪಾಡಬೇಕಾ ದವನೂ ನೀನೇ ಅಲ್ಲವೇ ? —ಹೇ ಸಕಲ ಸಂರಕ್ಷಕ ! — ನಿನ್ನನ್ನುಳಿದು ನಾನು ಬೇರಾರಲ್ಲಿ ಮೊರೆಯಿಡಲಿ ? ನಿನ್ನ ಕಿರುಬೆರಳಿನಲ್ಲಿ ಪೃಥ್ವಿಯನ್ನೆಲ್ಲ ಆಳುವ ಸೂತ್ರಗಳಡಗಿವೆ ! ಏಕೆ ದುಃಖಿಸುವೆ ಮನವೆ ? ಭಯದಿಂದ ಫಲವಿಲ್ಲ ; ರೋಧನೆಯಿಂದಲೂ ಫಲವಿಲ್ಲ. ಭಕ್ತಿಯೊಂದೆ ಭದ್ರವಾದ ಅಸ್ತ್ರಶಸ್ತ್ರ, ಪಂಡತ

ಪಾಮರರನ್ನು ರಕ್ಷಿಸುವವನು ಅವನೇ ಅಲ್ಲವೇ ? ಎಲ್ಲರನ್ನು ಸಲಹುವ ದೇವೇಶ ನಿನ್ನನ್ನೂ ಸಲಹಲಾರನೆ ? — ತನಗೆ ತಾನೇ ಸಮಾಧಾನ ಹೇಳಿಕೊಳ್ಳು ತ್ತಿದ್ದಳು.

"ಮೂರು ಹಗಲು ಮೂರು ರಾತ್ರಿ ಅನ್ನ ನೀರು ಅವಳ ಬಳಿ ಸುಳಿಯು ಲಿಲ್ಲ. ಯೋಚಿಸಿ ನೋಡುವಲ್ಲಿ ಅರಮನೆಯಲ್ಲಿ ಸಮಸ್ತ ತೆರನಾದ ಸಮೃದ್ಧಿಯ ಸಮ್ಮುಖದಲ್ಲಿ ಸ್ವೇಚ್ಛೆಯಾಗಿ ಸಂತೋಷವಾಗಿರುತ್ತಿದ್ದ ಆ ಬಾಲಕಿ ಈಗ ಅರಣ್ಯದಲ್ಲಿ ಕೇಳುವವರು ದಿಕ್ಕಿಲ್ಲದೆ ಮೂರು ದಿನಗಳು ಅನ್ನ ನೀರುಗಳಿಲ್ಲದೆ ಬಳಲಿದ್ದು ಎಷ್ಟೊಂದು ಕಷ್ಟವಾಗಿದ್ದಿರಬಹುದು ? ಮೈಗೆ ನೀರಿಲ್ಲ ; ಮಲಗು ವುದಕ್ಕೆ ಮೆತ್ತನೆಯ ಹಾಸಿಗೆಯಿಲ್ಲ. ಬಿಸಿಲುಗಾಳಿಗಳಿಗೆ ಮರೆಯಾಗಿ ಮನೆ ಯಿಲ್ಲ. ಮಾತನಾಡುವುದಕ್ಕೆ ಮನುಷ್ಯರಿಲ್ಲ, ಊಳಿಗಕ್ಕೆ ಒಂದು ನರಪಿಳ್ಳೆ ಯಿಲ್ಲ. ಅವಳ ಆ ಕೋಮಲವಾದ ಶರೀರವು ಕರಗಿ ಕೃಶವಾಗಿ ಕಡ್ಡಿಯಂತೆ ಒಣಗಿ ಬೆಂಡಾಯಿತು. ಸ್ವರ್ಣದಂತೆ ಮಿಣುಗುಟ್ಟುತ್ತಿದ್ದ ಅವಳ ದೇಹಕಾಂತಿ ಹಳದಿಯಾಗಿ ಕಾಂತಿ ವಿಹೀನವಾಯಿತು. ಅವಳ ಬಾಯೊಣಗಿ ಹೆಪ್ಪುಗಟ್ಟಿ ಹೋದಂತಾಯಿತು. ಕಣ್ಣುಗಳು ಚಲಿಸದಂತೆ ಕನ್ನಡಿಯ ಗುಡ್ಡೆಗಳಂತೆ ನಿಂತಲ್ಲೆ ನಿಂತುವು. ಉಸಿರಿನ ವೇಗವು ಕಡಿಮೆಯಾದರೂ ಅದು ಅಳಿಯದೆ ಇತ್ತು. 'ಉಸಿರಿರುವತನಕ ಆಶೆಯಿದೆ' ಎಂದುಕೊಂಡಳು ಆ ಕೋಮಲ ಬಾಲೆ ! ಆ ಕನಿಕರದ ಕಂದ !

ನಾಲ್ಕನೆಯ ದಿನ ಪ್ರಾತಃಕಾಲ, ತೇಜಸ್ವಿಯೂ, ಜ್ಞಾನಿಯೂ, ಆದ ಒಬ್ಬ ಯೋಗೀಶ್ವರನು ರಾಜಕುಮಾರಿಯ ಮುಂದೆ ಬಂದು ನಿಂತನು. ಆತನನ್ನು ನೋಡಿದಾಕ್ಷಣ ಕ್ವಾಜಾ ಖಿಸರ್–ಯೋಗಿಯಂತೆ ಕಾಣುತ್ತಿತ್ತು. (ಕ್ವಾಜಾ ಖಿಸರ್ ಎಂಬ ಯೋಗಿಯೇ ಅಮರತ್ವವನ್ನುಂಟುಮಾಡುವ ನೀರಿನ ಚಿಲುಮೆ ಯನ್ನು ಕಂಡುಹಿಡಿದವನಂತೆ ! ಬಾಯಾರಿದವರಿಗೆ ನೀರೆರೆಯುವ ವೃತ್ತಿಯನ್ನು ಅವಲಂಬಿಸುವ ದಯಾವಂತ ಮಾನವರು ಕ್ವಾಜಾಖಿಸರ್‌ನನ್ನು ತಮ್ಮ ಆರಾಧ್ಯದೈವವೆಂದು ಭಾವಿಸುತ್ತಾರೆ.) ಈ ಯೋಗಿಯು ರಾಜಕುಮಾರಿಯ ಬಳಿ ಸಾರಿ ಹೇಳಿದನು ;

"ಸುಕುಮಾರಿ! ನೀನು ರಾಜಕನ್ಯೆ–ನಿಜ. ನಿನಗೆ ಯಾವುದಕ್ಕೇನು ಕೊರತೆ ಇದ್ದಿತು? ಆದರೆ ವಿಧಿಶಾಸನವು ನಿನ್ನನ್ನು ಈ ತೆರನಾದ ಕ್ಷುತ್ಪಿಪಾಸಾದಿ ಬಾಧೆಗಳಿಗೆ ಗುರಿಮಾಡಿತು. ಇರಲಿ, ನಾನೇನೋ ವೃದ್ಧನೇ ಸರಿ. ಆದರೂ ನಿನ್ನ ಆಜ್ಞೆಯನ್ನು ಪಾಲಿಸಲು ಬದ್ಧನಾಗಿ ನಿನ್ನ ಸೇವಕನಾಗಿ ನಿಲ್ಲುತ್ತೇನೆ. ನೀನು ಆ ಸೃಷ್ಟಿಕರ್ತನನ್ನು ಹಗಲಿರುಳೂ ಧ್ಯಾನಿಸುತ್ತ ಅವನ ಕೊಂಡಾಟವಲ್ಲಿ ನಿನ್ನೆಲ್ಲ ಕಾಲವನ್ನು ಕಳೆಯುತ್ತಲಿರು. ಯಾವುದು ನಿನಗೆ ಹಿತಕರವಾದುದೋ ಅದನ್ನೇ ಸರ್ವೇಶ್ವರನು ಮಾಡುತ್ತಾನೆ."

ಬಳಿಕ ಆ ಮುನಿ ಫಕೀರನು (ಯೋಗಿ) ತನ್ನ ಜೋಳಿಗೆಯಲ್ಲಿದ್ದ ಅನ್ನದ ತುತ್ತುಗಳನ್ನು ಅವಳಿಗೆ ಉಣಿಸಿದನು. ಅಲ್ಲಲ್ಲಿ ಉದುರಿದ್ದ ಅಗಲವಾದ ಹಸಿ ಎಲೆಗಳನ್ನು ಜೋಡಿಸಿ, ದೊನ್ನೆಯಾಗಿ ಹೊಲಿದು, ಅದಕ್ಕೆ ತನ್ನ ಸೊಂಟಕ್ಕೆ ಕಟ್ಟಿದ್ದ ವಸ್ತ್ರವನ್ನು ಹಗ್ಗವಾಗಿ ಬಿಟ್ಟು, ಅನತಿ ದೂರದಲ್ಲಿದ್ದ ಭಾವಿಯಿಂದ ಸ್ವಚ್ಛವಾದ ನೀರನ್ನು ಸೇದಿ ತಂದು ಅವಳಿಗೆ ಕುಡಿಸಿ, ಅವಳ ಮಲಿನವಾದ ಮುಖವನ್ನೂ, ಕೈಕಾಲುಗಳನ್ನೂ ತೊಳೆದನು. ಹಸಿವು ಬಾಯಾರಿಕೆಗಳನ್ನು ತಡೆಯಲಾರದೆ ಅವಳು ಕಳಚಿ ಬಿದ್ದಿದ್ದಳು. ಈಗ ಅನ್ನ ನೀರುಗಳಿಂದ ಅವಳಿಗೆ ಹೊಸ ಚೇತನವು ಬಂದಂತಾಗಿ ಅವಳು ಎದ್ದು ಕುಳಿತಳು. ಅಂದಿನಿಂದ ಆ ಮುದಿ ಫಕೀರನು ಪಟ್ಟಣದೊಳಗೆ ಹೋಗಿ ಭಿಕ್ಷೆ ಬೇಡಿ ಸಿಕ್ಕಷ್ಟು ಅನ್ನವನ್ನು ತಂದು ಅವಳಿಗೆ ಉಣಿಸುತ್ತಿದ್ದನು. ವೃದ್ಧನ ದಯೆಯಿಂದ ಆನಂದಿತಳಾದ ಆ ಅನಾಥ ಕನ್ಯೆಯು ದಿನೇದಿನೇ ಮನಸ್ಸಿನ ಆಹ್ಲಾದವನ್ನು ಹೆಚ್ಚಿಸಿಕೊಂಡು ಚಿಂತೆಯನ್ನು ದೂರಮಾಡಿ ಸೃಷ್ಟಿಕರ್ತನನ್ನು ಅಚಲವಾಗಿಯೂ, ಅನಂತವಾಗಿಯೂ ಸ್ಮರಿಸುತ್ತ ಬಂದಳು.

ಫಕೀರನು ತನ್ನನ್ನು ಕಂಡ ಕೆಲವು ದಿನಗಳನಂತರ ಜಡೆಕಟ್ಟಿಹೋದಂತಿದ್ದ ತನ್ನ ತಲೆಗೂದಲಿಗೆ ಸ್ವಲ್ಪ ಎಣ್ಣೆ ಸವರಿ, ಬಾಚಿಕೊಳ್ಳಬೇಕೆಂದು ರಾಜಕುಮಾರಿಗನ್ನಿಸಿತು. ಅವಳ ಅದೃಷ್ಟದಿಂದ ಅರಮನೆಯನ್ನು ಬಿಟ್ಟು ಹೊರಡುವಾಗ ಅವಳ ದಾದಿಯು ಕನಿಕರದಿಂದ ಒಂದು ಬಾಚಣಿಗೆಯನ್ನೂ, ಸೀಸೆಯ ತುಂಬ ಎಣ್ಣೆಯನ್ನೂ ತೊಟ್ಟಿಲಲ್ಲಿ ಮರೆಸಿ, ಇಟ್ಟದ್ದು ಅವಳ ನೆನಪಿಗೆ ಬಂದಿತು. ಹೀಗೆ ತಲೆ ಬಾಚಿಕೊಳ್ಳಲು ತನ್ನ ಜಡೆಯನ್ನು ಬಿಚ್ಚಿದೊಡನೆಯೇ ಗುಂಡಗೆ ದಪ್ಪ

ವಾಗಿದ್ದ ಒಂದು ಮುತ್ತು ಕೆಳಗೆ ಉರುಳಿತು. ಅದರ ಪ್ರಕಾಶವು ಕಣ್ಣು ಕುಕ್ಕು ವಂತಿತ್ತು. ಅದನ್ನು ಕೈಯಲ್ಲಿ ಎತ್ತಿಕೊಂಡು ರಾಜಕುಮಾರಿ ಫಕೀರನನ್ನು ಕುರಿತು : "ತಂದೆ! ಇದೋ ತಲೆಬಾಚಿಕೊಳ್ಳಲು ಜಡೆಯನ್ನು ಬಿಚ್ಚಿದಾಗ ಒಂದು ಮುತ್ತು ಕೆಳಗೆ ಬಿತ್ತು. ಇದನ್ನು ನಗರದಲ್ಲಿ ಯಾರಿಗಾದರೂ ಮಾರಿ ಆದಷ್ಟು ಹಣವನ್ನು ತೆಗೆದುಕೊಂಡು ಬಾ" ಎಂದಳು. ಬಳಿಕ ತಾನಿದ್ದಲ್ಲಿ ಮಳೆ, ಗಾಳಿ, ಛಳಿ, ಬಿಸಿಲುಗಳಿಂದ ಮರೆಯಾಗಿರಲು ಒಂದು ಸಣ್ಣ ಕುಟೀರ ವನ್ನು ಕಟ್ಟಿಕೊಳ್ಳಬೇಕೆಂದು ಅವಳಿಗನ್ನಿಸಿತು. ವೃದ್ಧಫಕೀರ "ತಾಯೆ! ನಿನ್ನ ಉದ್ದೇಶವು ಸಮಂಜಸವಾದುದೇ. ನೀನು ನೆಲವನ್ನು ಅಗೆದು ತಳಹದಿ ಹಾಕಲು ಸಿದ್ಧಗೊಳಿಸು. ಮಣ್ಣು ಕಲಸಿ ಗೋಡೆ ಕಟ್ಟಲು ಬೇಕಾದ ನೀರನ್ನು ಪಕ್ಕದ ಭಾವಿಯಿಂದ ತಂದು ಸುರಿಯುತ್ತೇನೆ. ನಾವಿಬ್ಬರೂ ಸೇರಿ ಒಂದು ಗುಡಿಸಲನ್ನು ಕಟ್ಟೋಣ'' ಎಂದ.

ವೃದ್ಧಫಕೀರನು ಹೇಳಿದಂತೆಯೇ ರಾಜಕುಮಾರಿಯು ನೆಲವನ್ನು ಅಗೆಯ ತೊಡಗಿದಳು. ಅವಳು ತಳಹದಿಯನ್ನು ಅಗೆಯುತ್ತಿದ್ದಂತೆ ಏನೋ ತಡೆಯಿತು. ನೆಲವನ್ನು ಚೆನ್ನಾಗಿ ಕೆದಕಿ ನೋಡಿದಳು. ಅದು ಒಂದು ನೆಲಮಾಳಿಗೆಯ ಕದವಾಗಿತ್ತು. ಅದನ್ನು ಮುಚ್ಚಿದ್ದ ಮಣ್ಣನ್ನೆಲ್ಲ ಹೊರಚೆಲ್ಲಿ ಬಾಗಿಲನ್ನು ತೆರೆದು ನೋಡಿದಳು. ನೆಲಮಾಳಿಗೆ ಅತಿ ದೊಡ್ಡದಾಗಿತ್ತು. ಅದರ ತುಂಬ ಆಭರಣಗಳು, ಎಣಿಸಲಾರದಷ್ಟು ಒಂದು ರಾಶಿ ಮೊಹರುಗಳು! ಅವಳು ಆ ರಾಶಿಯಲ್ಲಿ ನಾಲ್ಕೈದು ಹಿಡಿಗಳಷ್ಟು ಮಾತ್ರ ಚಿನ್ನದ ಮೊಹರುಗಳನ್ನು ಹೊರಕ್ಕೆ ತೆಗೆದುಕೊಂಡು ಬಾಗಿಲನ್ನು ಮುಚ್ಚಿದಳು. ಮೊದಲಿನಂತೆಯೇ ಅದರ ಮೇಲೆ ಮಣ್ಣು ಮುಚ್ಚಿದಳು. ನೆಲವು ಹಿಂದಿನಂತೆ ಆಯಿತು.

ಏತನ್ಮಧ್ಯೆ ನೀರು ಸೇದಿಕೊಂಡು ಮುದಿ ಫಕೀರನು ಹಿಂತಿರುಗಿದ. ರಾಜಕುಮಾರಿಯು ಆ ವೃದ್ಧನನ್ನು ಕಂಡು ಹೇಳಿದಳು :

" ತಂದೆ! ದೈವಕೃಪೆ! ಗುಡಿಸಲುಬೇಡ ; ಇಲ್ಲೊಂದು ಅರಮನೆಯನ್ನೇ ಕಟ್ಟಿಸೋಣವಂತೆ! ನಗರದೊಳಗೆ ಹೋಗಿ, ಕಲ್ಕುಟಿಗರು, ಕಟ್ಟಡ ಕಟ್ಟುವಶಿಲ್ಪಿ ಗಳು, ಕೂಲಿಯಾಳುಗಳು ಎಲ್ಲರೂ ಅರಿತು ನುರಿತವಾಗಿರಬೇಕೆಂಬುದನ್ನು ಮರೆ ಯುದಿರುತಂದೆ! ತಕ್ಷಣ ಎಲ್ಲರನ್ನೂ ಕರೆದುಕೊಂಡು ಬಾ! ಈ ಸ್ಥಳದಲ್ಲಿ ನಾವು

ಎಣಿಸಿದಂತೆ ಕುಟೀರವೇಕೆ? ಕರುಣಾಮಯನ ಕಟಾಕ್ಷ ವೀಕ್ಷಣೆಯಿಂದ ಅತ್ಯಂತ ಮನೋಹರವೂ, ವಿಶಾಲವೂ, ಆದ ಒಂದು ಅರಮನೆಯನ್ನೇ ಕಟ್ಟಿಸಿ ಬಿಡೋಣ. ಅರಮನೆಯ ಸುತ್ತಲೂ ಒಂದು ನಗರವನ್ನೂ ನಿರ್ಮಾಣಮಾಡ ಬೇಕೆಂದು ನಾನು ತೀರ್ಮಾನಿಸಿದ್ದೇನೆ. ನಗರ ರಕ್ಷಣೆಗೆ ಬೇಕಾದ ಕೋಟೆ ಕೊತ್ತಲುಗಳು, ಜನರ ಅನುಕೂಲಕ್ಕಾಗಿ, ಕೊಳಗಳು ; ಭಾವಿಗಳು, ಕೆರೆಗಳು, ವಿಹಾರಕ್ಕಾಗಿ ಉದ್ಯಾನವನಗಳು, ಯಾತ್ರಿಕರ ಉಪಯೋಗಕ್ಕಾಗಿ ಛತ್ರ ಛಾವಡಿಗಳು, ವ್ಯಾಪಾರಿಗಳಿಗೆ ವಿಶ್ರಾಂತಿ ಸ್ಥಳಗಳು—ಒಂದು ಬಿಡದೆ ಎಲ್ಲ— ಅತ್ಯಂತ ನಾಗರಿಕ ಸಮಾಜಕ್ಕೆ ಬೇಕಾದ ಎಲ್ಲ ಸಲಕರಣೆಗಳನ್ನೂ ಇಲ್ಲೇ, ಈಗಲೇ ನಿರ್ಮಾಣಮಾಡುವ. ಆದರೆ—ತಂದೆ! ಒಂದು ಮಾತು. ನಗರ ನಿರ್ಮಾಣಕ್ಕೆ ಮುಂದೆ ಮೇಲ್ಕಂಡ ಎಲ್ಲ ಅನುಕೂಲಗಳನ್ನೂ ಒಳಗೊಂಡ ಒಂದು ನಕ್ಷೆಯನ್ನು ನನ್ನ ಒಪ್ಪಿಗೆಗಾಗಿ ತರಲು ಮರೆಯದಿರು ಕಂಡೆಯಾ ? "

" ಆಗಬಹುದು ತಾಯೆ! ನಿನ್ನಿಷ್ಟದಂತೆ " ಎಂದು ಫಕೀರನು ತಲೆ ತೂಗುತ್ತ ಹೇಳಿದ. ಏನು. ಎತ್ತ ಎಂದೆಲ್ಲ ಅವನು ರಾಜಕುಮಾರಿಯಲ್ಲಿ ಕುಳಿತುಕೊಳ್ಳಲಿಲ್ಲ. ಬದಲಾಗಿ ನಗರಕ್ಕೆ ಹೋದ ಮೇಲೆ ರಾಜಕುಮಾರಿ ಹೇಳಿದ ಕೆಲಸವನ್ನು ಒಂದು ಬಿಡದೆ ಎಲ್ಲವನ್ನೂ ಸಮರ್ಪಕವಾಗಿ ಮಾಡಿ ಕೊಂಡು ಹಿಂತಿರುಗಿದನು.

ಇಂತಹ ಒಂದು ಸರ್ವಶ್ಲಾಘ್ಯವಾದ, ಸಕಲ ಸಲಕರಣೆಗಳಿಂದ ಸಮರ್ಪ ಕವಾಗಿ ನಿರ್ಮಿತವಾಗತೊಡಗಿದ ಸುಂದರ ಮನೋಹರ ಸೌಧವನ್ನೂ. ಅದನ್ನು ಸುತ್ತುವರಿಯಲಿದ್ದ ಕೋಟೆ ಕೊತ್ತಲುಗಳು, ಬೀದಿಗಳು, ವಿಶ್ರಾಂತಿ ಸ್ಥಾನಗಳು, ವಿಹಾರದ ಉದ್ಯಾನವನಗಳು, ವ್ಯಾಪಾರ ಸಂಸ್ಥೆಗಳು....ಎಲ್ಲ.... ಒಂದು ಬಿಡದೆ ಎಲ್ಲದರ ವಿಚಾರವಾಗಿ ' ರಾಜಕುಮಾರಿಯ ತಂದೆ, ಬಾಸ್ರಾ ಸುಲ್ತಾನಿಗೆ, ವರದಿಯು ಮುಟ್ಟಿತು.

" ಇಳತಹ ಅಪಾರ ವೆಚ್ಚದಿಂದ ಅರಮನೆಯನ್ನು ಕಟ್ಟಿಸಿ, ಸಕಲ ಅನು ಕೂಲಗಳೊಂದಿಗೆ ಸುಂದರವೂ, ಸುವ್ಯಸ್ಥಿತವೂ, ನೂತನವೂ ಆದ ನಗರ ವೊಂದನ್ನು ನಿರ್ಮಿಸಲು ಹೊರಟಿರುವ ಆ ಧೀರ ಮಾನವನ ಹೆಸರೇನು "

ಎಂದು ಸುಲ್ತಾನನು ವಿಚಾರಿಸಿದನು.

ಪರಿವಾರದವರೂ—ಪ್ರಧಾನಿ ಪ್ರಮುಖರೂ—ಒಬ್ಬರನ್ನೂ ಬಿಡದೆ ಎಲ್ಲರೂ—ಏಕ ಕಂಠದಿಂದ ಹೇಳಿದರು.

"ನಿಮ್ಮ ಸೇವಕರಲ್ಲಿ ಯಾರಿಗೂ ಆ ನೂತನ ನಿರ್ಮಾಣಕನ ನಾಮ ಧೇಯವು ತಿಳಿಯದು."

ಎಷ್ಟೋ ವಿಚಾರಿಸಿದ್ದರ ಮೇಲೆ ನೂತನ ನಗರ ನಿರ್ಮಾಪಕ ಪುರುಷ ವರ್ಗಕ್ಕೆ ಸೇರಿದವನಲ್ಲವೆಂದೂ, ಆಕೆಯೊಬ್ಬ ಸ್ತ್ರೀ ಯೆಂದೂ—ರಾಜಕುಮಾರಿಯ ಅಂತಸ್ತನ್ನು ಪಡೆದವಳೆಂದೂ—ತಿಳಿಯಬಂದಿತು. ಸುಲ್ತಾನನ ಕುತೂಹಲವು ಇದ್ದದ್ದೂ, ಕೆರಳಿತು. "ರಾಜಕುಮಾರಿ!" ಎಂದು ತನ್ನಲ್ಲೆ. ಉಚ್ಚರಿಸುತ್ತ ತನ್ನ ಪ್ರಧಾನಿಯೊಬ್ಬನನ್ನು ಕರೆದು—ಆ ಸ್ಥಳಕ್ಕೆ ಹೋಗಿ ನೂತನ ನಗರ ನಿರ್ಮಾಪಕ ವ್ಯಕ್ತಿಯು ಯಾವ! ಶ್ರೇಷ್ಠ ರಾಜವಂಶಕ್ಕೆ ಕಲಿತ ರಾಜಕುಮಾರಿಯೆಂದೂ ಕೇಳಿ ಆ ಸುಂದರಭವನವನ್ನು ನಾನು ನೋಡಿ ಆನಂದ ಪಡಲು ಬಯಸುತ್ತೇನೆ ಎಂದು ಹೇಳು!'' ಎಂದು ಆಜ್ಞಾಪಿಸಿ ಮಿತಪರಿವಾರ ದೊಂದಿಗೆ ಅವನನ್ನು ಕಳುಹಿಸಿಕೊಟ್ಟನು.

ಸುಲ್ತಾನನು ಪ್ರಧಾನಿಯೊಂದಿಗೆ ಹೇಳಿಕಳುಹಿಸಿದ ಸಂದೇಶವನ್ನು ಕೇಳಿ ರಾಜಕುಮಾರಿಗೆ ಅತುಳಾನಂದವಾಯಿತು. ಅದಕ್ಕೆ ಪ್ರತ್ಯುತ್ತರವಾಗಿ ಆಕೆ ಒಂದು ಪ್ರತ್ಯುತ್ತರವನ್ನು ಬರೆದು ಒಬ್ಬ ಸೇವಕನ ಕೈಯಲ್ಲಿ ಕೊಟ್ಟುಕಳುಹಿಸಿದಳು. ರಾಜಕುಮಾರಿ ಬರೆದು ಕಳುಹಿಸಿದ ಪತ್ರದಲ್ಲಿ ಸುಲ್ತಾನನನ್ನು ಪದ್ಧತಿಯ ಪ್ರಕಾರ ಬಹುವಾಗಿ ಹೊಗಳಿ ಆತನ ಬಿರುದುಗಳನ್ನೂ ಎತ್ತಿ ನುಡಿದಿದ್ದಳು. ಮರುದಿನ ಗುರುವಾರವೆಂತಲೂ, ಸುಲ್ತಾನನಿಗೆ ಸತ್ಕಾರ ನೀಡಲು ಪವಿತ್ರವಾದ ದಿನವೆಂತಲೂ, ತಾನು ಆತನನ್ನು ಆದರಿಸಿ ಔತಣದಿಂದ ಸತ್ಕರಿಸಿ ಸಂತೃಪ್ತಿಗೊಳಿಸಲು ಸಿದ್ಧವಾಗಿರುವಳೆಂದೂ, ತನ್ನ ಆಹ್ವಾನವನ್ನು ಮನ್ನಿಸಿ, ತನ್ನನ್ನು ಕೃತಾರ್ಥಳನ್ನಾಗಿ ಮಾಡಬೇಕೆಂದೂ, ಸೂಚಿಸಿದ್ದಳು. ಆದರೆ ಆ ಪತ್ರದಲ್ಲಿ ತಾನು ಯಾರು ಎಂಬುದನ್ನು ಮಾತ್ರ ರಾಜಕುಮಾರಿಯು ಪ್ರಸ್ತಾಪಿಸಿರಲಿಲ್ಲ. ಈ ಪತ್ರವನ್ನು ಕಂಡೊಡನೆ ಸುಲ್ತಾನನು ತನ್ನ ಬಯಕೆ ಈಡೇರಿತೆಂದು ಸಂತಸಗೊಂಡವನಾಗಿ, ತಾನು ರಾಜಕುಮಾರಿಯ ಆತಿಥ್ಯವನ್ನು ಅಂಗೀ

ಕರಿಸಿರುವುದಾಗಿಯೂ, ಮರುದಿನ ಸಂಧ್ಯಾಸಮಯಕ್ಕೆ ನಾನು ನೂತನ ನಗರವನ್ನು ಸೇರುವುದಾಗಿಯೂ ಪತ್ರ ಬರೆದು ದೂತನೊಬ್ಬನ ಕೈಯಲ್ಲಿ ಕೊಟ್ಟು ಕಳುಹಿಸಿದನು.

ಏತನ್ಮಧ್ಯೆ ಅತ್ಯಂತ ಸುವ್ಯವಸ್ಥಿತವಾದ ಔತಣವು ಸಿದ್ಧಗೊಳ್ಳುತ್ತಿತ್ತು—ಎಲ್ಲ ಬಗೆಯ ಭಕ್ಷ್ಯಭೋಜ್ಯಗಳು, ಖಾರವೇನು, ಸಿಹಿಂಪೇನು-ಏನೊಂದೂ ಬಿಡದೆ ಎಲ್ಲ ಸಿದ್ಧ! ಸಂಧ್ಯಾಸಮಯಕ್ಕೆ ಸರಿಯಾಗಿ ಸುಲ್ತಾನನು ತನ್ನ ಪರಿವಾರದೊಂದಿಗೆ ನೂತನ ನಗರಕ್ಕೆ ಆಗಮಿಸಿದನು. ರಾಜಕುಮಾರಿಯು ತನ್ನ ಸಖಿ ಸೇವಕರಿಂದ ಹಿಂಬಾಲಿಸಲ್ಪಟ್ಟು ಲೋಪದೋಷ ವಿವರ್ಜಿತವಾದ ಸೂಕ್ತ ರಾಜಮರ್ಯಾದೆಗಳಿಂದ ಸುಲ್ತಾನನನ್ನು ಎದಿರ್ಗೊಂಡು, ಅರಸನನ್ನು ಒಡ್ಡೋಲಗದಿಂದ ಅರಮನೆಯೊಳಗೆ ಕರೆದೊಯ್ದಳು. ಸುಲ್ತಾನನಿಗೆ ಆಶ್ಚರ್ಯವೆಂದರೆ ಒಂದೇ ಆಶ್ಚರ್ಯ! ಬಳಿಕ ಅವನಿಗಾಗಿಯೇ ಸಿದ್ಧಗೊಂಡಿದ್ದ ನವರತ್ನಖಚಿತವಾದ ಸಿಂಹಾಸನದ ಬಳಿ ಕರೆದುಕೊಂಡು ಹೋಗಿ ಅದರಲ್ಲಿ ಕುಳಿತುಕೊಳ್ಳಬೇಕೆಂದು ಸುಲ್ತಾನನನ್ನು ಪ್ರಾರ್ಥಿಸಿದಳು. ಸುಲ್ತಾನನು ಸಿಂಹಾಸನದಲ್ಲಿ ಮಂಡಿಸಿದ ಮೇಲೆ ರಾಜಕುಮಾರಿ ಮೊದಲೇ ಸಿದ್ಧಪಡಿಸಿದ್ದಂತೆ ನೂರೊಂದು ರಜತ ತಟ್ಟೆಗಳಲ್ಲಿ ಆಭರಣಗಳನ್ನೂ, ಮೊಹರುಗಳನ್ನೂ, ಶಾಲುಗಳನ್ನೂ, ನವಿರು ಉಡೆಯನ್ನೂ ತದಿತರ ಅಮೂಲ್ಯ ವಸ್ತುಗಳನ್ನೂ, ಉತ್ತಮ ಅಲಂಕಾರಗಳಿಂದ ಮೆರೆಯುತ್ತಿದ್ದ ಎರಡು ಆನೆಗಳನ್ನೂ, ಹತ್ತು ದಿವ್ಯಾಶ್ವಗಳನ್ನೂ ಅತ್ಯಂತ ವಿನಯದಿಂದ ಸುಲ್ತಾನನಿಗೆ ನಜರಾಗಿ ಒಪ್ಪಿಸಿ ಅವುಗಳನ್ನು ಸ್ವೀಕರಿಸಬೇಕೆಂದು ಬೇಡಿಕೊಂಡಳು. ಇವುಗಳನ್ನೆಲ್ಲ ರಾಜಕುಮಾರಿ ತನ್ನ ಕೈಯಾರೆ ಒಪ್ಪಿಸಿ, ಕೈಕಟ್ಟಿ ನಮ್ರಳಾಗಿ ನಿಂತಿದ್ದಳು,

ಸುಲ್ತಾನನಿಗೆ ಈ ಎಲ್ಲ ಅತ್ಯದ್ಭುತ ಮರ್ಯಾದೆಗಳನ್ನೂ ಕಂಡು ಮಹಾನಂದವೂ ತೃಪ್ತಿಯೂ ಉಂಟಾಯಿತು. ಬಳಿಕ ಆತನು ರಾಜಕುಮಾರಿಯನ್ನು ಕುರಿತು ಕೇಳಿದನು:

"ಕುಮಾರಿ! ನಿನ್ನ ರಾಜ್ಯವು ಯಾವುದು? ನಿನ್ನ ವಂಶದ ಹೆಸರೇನು? ಸ್ವದೇಶವನ್ನು ಬಿಟ್ಟು ನನ್ನ ರಾಜ್ಯದಲ್ಲಿ ಈ ಭವ್ಯವಾದ ನೂತನ ನಗರ ನಿರ್ಮಾಣ ಕಾರ್ಯವನ್ನು ನೀನು ಕೈಕೊಂಡ ಉದ್ದೇಶವೇನು?"

ರಾಜಕುಮಾರಿಯು ಸುಲ್ತಾನನನ್ನು ನಯವಿನಯಗಳಿಂದ ವಂದಿಸುತ್ತ ಗಂಭೀರವಾಗಿ ಹೇಳಿದಳು :

"ಸುಲ್ತಾನ ಮಹಾಶಯರೇ! ಯಾರು ? ನಾನು ಯಾರೆಂದು ಕೇಳಿದಿರಾ? ಯಾಕೆ ನನ್ನನ್ನು ತಾವು ಗುರುತಿಸಲಾರಿರಾ? ನೆನೆಪೆ ಬಾರದೇ ? ನಾನು ಆ ಹೀನ ಕುವರಿ ! ಆತ್ಮಸಾಕ್ಷಿಯಿಂದ ಪ್ರೇರಿತನಾದ ಸತ್ಯವಾದ ಅಂತರಂಗವಾಣಿಯನ್ನು ಅಚಲ ಧೈರ್ಯದಿಂದ ನುಡಿದು ತಮ್ಮ ಆ ರಾಜಹೃದಯದಲ್ಲಿ ಕೋಪವನ್ನು ಕೆರಳಿಸಿದವಳು........ನಿಮ್ಮ ಆಗ್ರಹಕ್ಕೆ ಪಾತ್ರಳಾಗಿ ಮಗಳೆಂಬ ಸ್ಥಾನವನ್ನೂ ಕಳೆದುಕೊಂಡು ನಿಮ್ಮ ರಾಜ್ಯದಲ್ಲಿ—ನಿಮ್ಮ ಅರಮನೆಯಲ್ಲಿ—ಇರಲು ಅರ್ಹತೆ ಯನ್ನು ಕಳೆದುಕೊಂಡು, ಹಂಸತೂಲಿಕಾ ತಲ್ಪವನ್ನು ತೊರೆದು, ಹುಲ್ಲಿನ ಹಾಸಿಗೆ ಯಲ್ಲಿ ಮಲಗಿ, ಅರಮನೆಯನ್ನು ಬಿಟ್ಟು ಅಡವಿಪಾಲಾಗಿ ಕಾಳರಾತ್ರಿಯಲ್ಲಿ, ಕಟುಕರ ಮೂಲಕ ಕಳುಹಿಸಲ್ಪಟ್ಟು, ಮೂರು ದಿನ ಅನ್ನನೀರುಗಳಿಲ್ಲದೆ, ಕಂಗೆಟ್ಟು ಕೃಶಳಾಗಿ, ಕೊನೆಗೆ ನಾಲ್ಕನೆಯ ದಿನ ದೈವಾನುಗ್ರಹದಿಂದ ಬದುಕಿ ಎಚ್ಚೆತ್ತ—ನಿಮ್ಮ ಭಾಗಕ್ಕೆ ಅಂದೇ ಸತ್ತುಹೋದ ನಿಮ್ಮ ಕುವರಿ! ನಿಮ್ಮ ಆ ಆಗ್ರಹದ ಪ್ರತಿ ಫಲವಾಗಿ ದೈವದ ಅನುಗ್ರಹವನ್ನು ಕಂಡ ಒಬ್ಬ ಅತ್ಯಲ್ಪ ಕನ್ನಿಕೆ ನಾನು! ಇನಳ ಹುಟ್ಟು ವಿಚಾರಗಳನ್ನು ಕಟ್ಟಿಕೊಂಡೇನು ? ಒಟ್ಟಿನಲ್ಲಿ ಈ ಕಟ್ಟಡಗಳನ್ನೆಲ್ಲ ಈ ಕಾಡಿನಲ್ಲಿ ಕಟ್ಟಿಸಿಕೊಟ್ಟು ನಗರವನ್ನಾಗಿ, ನರಮಯವಾಗಿ, ನಯನಾನಂದಕರವಾಗಿ ಮಾರ್ಪಡಿಸಿದವನು ದಯಾಮಯನಾದ ಪರಮಾತ್ಮ! ಈ ನೂತನ ರಾಜ್ಯವನ್ನು ನಿರ್ಮಿಸಿದವನು ಅವನೇ! ಇದನ್ನು ಆಳುವುದು ಆ ಕರುಣಾಳುವಿನ ಹೆಸರಲ್ಲಿ! ಇಲ್ಲಿ ಕಾಣುವ ಈ ಎಲ್ಲ ವೈಭವ ಸೂಚಕ ನಿಧಿಯು ಅವನದೇ! ನಾನು ಕೇವಲ ಅವನ ಪ್ರತಿನಿಧಿ! ಅಷ್ಟೇ. ಅಂದು ನಾನು ಹೇಳಿ ದುದು ಮಾತಿನಲ್ಲಿ; ಇಂದು ನಿಮಗೆ ತೋರುತ್ತಿರುವುದು ಸ್ಥೂಲ ಸ್ವರೂಪದಲ್ಲಿ; ಮುಂದೆ ಇದೆಲ್ಲ ಬೆಳಗಬೇಕಾದುದು ಕೃತಿಯಲ್ಲಿ! ಸತ್ಯತತ್ತ್ವಗಳ ಆಧಾರಗಳಿಂದ ಬೆಳಗಬೇಕಾದುದು ಕೃತಿಯಲ್ಲಿ! ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಸದಾ ನೆಲೆಸಿ ನಲಿಯಬೇಕಾದುದು ಮಾತಾಪಿತರ ಹೃದಯ ಸಿಂಹಾಸನದಲ್ಲಿ! ನನ್ನಮೇಲೆ ತಾವು ಅಂದು ಆಗ್ರಹಗೊಂಡರೂ ನಾನು ತಮ್ಮ ಕುವರಿ....ತಾವು ನನಗೆ ಜನ್ಮ ದಾತರು! ತಮ್ಮನ್ನು ಮರೆಯಲೊಲ್ಲೆ. ಆದುದರಿಂದಲೇ ತಮಗಾಗಿ ನಿರ್ಮಿತ

ವಾದ ಈ ಸಿಂಹಾಸನದಲ್ಲಿ ತಮ್ಮನ್ನು ಕುಳ್ಳಿರಿಸಿ ಆನಂದಿಸಬೇಕೆಂದು ನಾನು ತಮಗೆ ಆಹ್ವಾನವನ್ನು ಕಳುಹಿಸಿದೆ. ತಾವು ನನ್ನ ಆಹ್ವಾನವನ್ನು ಮನ್ನಿಸಿದುದು—ನನ್ನ ಅಲ್ಪ ಆತಿಥ್ಯವನ್ನೂ ಕಾಣಿಕೆಯನ್ನೂ ಕೈಕೊಂಡದು—ಈ ಸಿಂಹಾಸನದಲ್ಲಿ ಮಂಡಿಸಿದುದು—ಇವೆಲ್ಲ ನನ್ನನ್ನು ಕೃತಾರ್ಥಳನ್ನಾಗಿ ಮಾಡಿವೆ. ನಾನಾಡಿದ ಮಾತುಗಳು—ಅಂದು ಹೃದಯಾಂತರಾಳದಿಂದ ಆಡಿದ—ತಮಗೆ ಕಹಿಯೆಂದು ಕಂಡರೂ—ನಿಸ್ಪೃಹವಾಗಿ ಆಡಿದ ಮಾತುಗಳನ್ನು ಸತ್ಯವೆಂದು ದಯಾಮಯನು ಲಕ್ಷಪ್ರಾಮಾಣದಲ್ಲಿ ನಿರೂಪಿಸಿ ಕೊಟ್ಟಿರುವನು. ತಾನೇ ಆಡಿಸಿದ ಮಾತುಗಳನ್ನೂ ತಾನೇ ನೆರವೇರಿಸಿ ನಿರೂಪಿಸಿಕೊಟ್ಟ ಕರುಣಾಳುವಿನ ಕೃಪಾಕಟಾಕ್ಷದ ಮಹತ್ವವು ಪೃಥ್ವಿಯಲ್ಲಿ ಅನಂತ ಕಾಲದವರೆಗೂ ಮಾನವರ ಎದೆಯನ್ನೂ ಬೆಳಗಿ—ಅವರ ಬಾಳ ಮುಂಬೆಳಕಾಗಿ ಉಳಿಯಲಿ ಎಂದು ಪ್ರಾರ್ಥಿಸುತ್ತೇನೆ. ಈ ಪುಟ್ಟ ಉಪನ್ಯಾಸಕ್ಕಾಗಿ ನನ್ನಲ್ಲಿ ವಿರಸಗೊಳ್ಳಬೇಡಿರೆಂದು ವಿನಯದಿಂದ ಪ್ರಾರ್ಥಿಸುತ್ತೇನೆ."

ರಾಜಕುಮಾರಿಯು ಸುಲ್ತಾನನ ಪಾದಗಳಮೇಲೆ ಬಿದ್ದು ಆನಂದಭಾಷ್ಪಗಳಿಂದ ಅವುಗಳನ್ನೂ ತೊಳೆದಳು. ತುಂಬಿಬಂದ ಪುತ್ರಿ ಪ್ರೇಮದಿಂದ, ಆತನು ರಾಜಕುಮಾರಿಯನ್ನು ಹಿಡಿದೆತ್ತಿ, ಅಪರದಿಂದ ವೈದವವಿ ತನ್ನ ಎದೆಗೆ ಅಪ್ಪಿಕೊಂಡು "ಕುಮಾರಿ! ಕರುಣಾಳುವಿನ ಅಪಾರ ಕಟಾಕ್ಷಕ್ಕೆ ಪಾತ್ರಳಾದ್ದ ಕುಮಾರಿ! ನಿನ್ನಿಂದ ನನ್ನ ಕಣ್ಣುಗಳು ತೆರೆದಂತಾದುವು. ಅಂದು ಮುಚಿ ಹೋಗಿದ್ದ ನನ್ನ ಕಣ್ಣುಗಳಲ್ಲಿ ತುಂತುರುಗಳು ಉದುರಲಿಲ್ಲ. ಇಂದು ನನ್ನ ಕಣ್ಣುಗಳು ತೆರೆದಿವೆ. ನನ್ನ ಎದೆಯು ಈಗ ತುಂಬಿ ತುಳುಕಾಡುವ ಕೆರೆಯಂತಿದೆ. ಅದರ ಕಟ್ಟೆಯೊಡೆದು ಕಣ್ಣುಗಳೆಂಬ ತೂಬುಗಳಿಂದ ಪ್ರವಾಹವು ಹರಿದು ಹೊರ ಚೆಲ್ಲಲು ಅನುವಾಯಿತು! ಕುಮಾರಿ!........"

ಸುಲ್ತಾನನ ಕಂಠವು ಬಿಗಿಯಿತು. ಆತನ ಸ್ವರವು ಗದ್ಗದವಾಯಿತು, ಮಾತುಗಳು ಹೊರಡಲಿಲ್ಲ, ಅಪಾರ ಪಶ್ಚಾತ್ತಾಪದ ಫಲವಾಗಿ ಅತಿಶಯ ಆನಂದೋತ್ಸಾಹಗಳ ಸೂಚಿಸುವ ಆತನ ಭಾಷ್ಪಾಂಜಲಿ ರಾಜಕುಮಾರಿಯ ಗಲ್ಲಗಳ ಮೇಲೆ ಉರುಳಿ "ಅಂದು ನೀರಿಲ್ಲದೆ ಮರಳಿನಿಂದ ತೊಳೆದ ಗಲ್ಲಗಳಲ್ಲವೇ ಇವು? ಇದೋ ನನ್ನ ಕನಿಕರದ ಕಣ್ಣೀರು ಹೊಳೆಯಾಗಿ ಹರಿಯುತ್ತಿದೆ, ತೊಳೆ;" ಎನ್ನುವಂತಿತ್ತು.

ಪಿತಸುತೆಯರ ಈ ನಿರ್ಮಲಾನಂದಭರಿತ ಮಿಲನವನ್ನು ಕಂಡು ನೆರೆದವರೆಲ್ಲ ಮುಗ್ಧರಾದರು.

"ಕುಮಾರಿ! ಕೋಮಲೆ!" ಸುಲ್ತಾನನು ಹೇಳಿದ: "ಈ ವಿಜಯೋತ್ಸಾಹ ಸಮಾರಂಭದಲ್ಲಿ ಕಲೆತುಕೊಳ್ಳಲೆಂದು ಆಶಿಸಿ ನಿನ್ನ ಮಾತೆಯನ್ನು ಆರು ಸಹೋದರಿಯರನ್ನೂ ಒಬ್ಬ ದೂತನನ್ನು ಅಟ್ಟಿ ಇಲ್ಲಿಗೆ ಕರೆಯಿಸಲೇ ?

"ತಂದೆ! ಇದಕ್ಕೆ ನನ್ನನ್ನು ಕೇಳಬೇಕೇ? ಎಷ್ಟಾದರೂ ನೀವು ನನ್ನ ಜನ್ಮದಾತರು. ನಾನು ತಮ್ಮ ಆಜ್ಞಾಧಾರಗಳು. ನಿಮಗೆ ಸಂತೋಷದಾಯಕವಾದುದು ನನಗೂ ಸಂತೋಷದಾಯಕವಾದುದೇ ಅಲ್ಲವೆ? ಆಗಬಹುದು; ನಾನೂ ಅದನ್ನೇ ಯೋಚಿಸಿದ್ದೆ, ಬರಮಾಡಿ; ಅವರನ್ನೂ ಕಾಣಬೇಕೆಂದು ನಾನೂ ಕುತೂಹಲಳಾಗಿದ್ದೇನೆ."

ಮಾತೆಯೂ, ಸಹೋದರಿಯರೂ ಬಂದರು, ರಾಜಕುಮಾರಿಯನ್ನು ಗುರುತಿಸಿದರು. ಆನಂದದಿಂದ ಎದೆಗೆ ಅಪ್ಪಿಕೊಂಡು ತಮ್ಮನ್ನು ಮನ್ನಿಸಬೇಕೆಂದು ರಾಜಕುಮಾರಿಯನ್ನು ಬೇಡಿಕೊಂಡರು. ಅವರೆಲ್ಲ ಅಂತರಂಗಶುದ್ಧಿಯಿಂದ ದೈವಕಟಾಕ್ಷವನ್ನು ಕೊಂಡಾಡಿದರು. ಸುಲ್ತಾನನು ಅವರೆಲ್ಲರನ್ನೂ ತನ್ನಬಳಿ ಕುಳ್ಳಿರಿಸಿಕೊಂಡು ಔತಣದ ಊಟವನ್ನು ಸವಿದು ಆನಂದಿಸಿದನು.

ಒಡೆದ ಮುತ್ತು ಒಡೆದ ಎದೆ ಇವೆರಡನ್ನೂ ಕೂರಿಸಲಾಗದು, ಎಂದು ಲೋಕವು ಹೇಳುತ್ತದೆ. ಆದರೆ ರಾಜಕುಮಾರಿಯು ಅನನ್ಯಭಕ್ತಿಯಿಂದ ಅಚಲವಾಗಿ ನಂಬಿದ ದೈವವು ಒಡೆದ ಎದೆಯನ್ನು ಸುಭದ್ರವಾಗಿ ಒಂದುಗೂಡಿಸಿತು. ಸುಲ್ತಾನನು ಬದುಕಿದ್ದಷ್ಟು ಕಾಲವೂ ರಾಜಕುಮಾರಿಯನ್ನು ಅವಳ ನಗರದಲ್ಲಿ ಬಂದು ನೋಡಿಕೊಂಡು ಹೋಗುತ್ತಿದ್ದನು. ಅಂತೆಯೆ ರಾಜಕುಮಾರಿಯೂ ತನ್ನ ತಾಯ್ತಂದೆಯರನ್ನೂ. ಅಕ್ಕಂದಿರನ್ನೂ ಬಂದುನೋಡಿಕೊಂಡು ಹೋಗುತ್ತಿದ್ದಳು. ಸುಲ್ತಾನನು ಕಾಲವಶನಾದನಂತರ ರಾಜ್ಯಾಡಳಿತವೆಲ್ಲ ಈ ರಾಜಕುಮಾರಿಯ ಹಸ್ತಗತವಾಯಿತು. ಎಲೈ ಫಕೀರನೇ! ನೀನೀಗ ರಾಜಕುಮಾರಿಯ ಜೀವನ ಚರಿತ್ರೆಯನ್ನು ಸಂಪೂರ್ಣವಾಗಿ ಕೇಳಿದೆಯಷ್ಟೆ.

ದೈವಾನುಗ್ರಹದಿಂದ ಸತ್ಪಾತ್ರರಿಗೆ ತೊರೆತ ಧನವು ಸದಾ ಅಕ್ಷಯವಾಗಿದ್ದೀತೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ. ಆದರೆ ದೇವದತ್ತವಾದ ನಿಧಿಯು ಅಕ್ಷಯವಾಗಬೇಕಾದರೆ ಅದು ಯಾರಿಗೆ ಅನುಗ್ರಹವಾಗುತ್ತದೋ ಅವರು ಅದನ್ನು ಅನುಗ್ರಹಿಸಿದಾತನು ಒಪ್ಪುವ ತೆರನೆ ವಿನಿಯೋಗಿಸಬೇಕು : ಯಾವುದನ್ನು ಕಂಡು ನಿನ್ನ ಕುತೂಹಲವು ಅಷ್ಟೊಂದು ಕೆರಳಿತೋ—ಆ ಅಪಾರವಾದ್ಯ ಅಕ್ಷಮವಾದ—ರಾಜಕುಮಾರಿಯ ನಿಧಿಯ ರಹಸ್ಯವೆಂದರೆ ಇದೇ! ಸೃಷ್ಟಿಕರ್ತನ ಅಪಾರ ಶಕ್ತಿಯನ್ನು ಕುರಿತು ಆಶ್ಚರ್ಯಪಡುವುದು ಯಾವ ಮತ ತತ್ತ್ವಕ್ಕೂ ಸರಿಯೆಂದು ಎನಿಸಿಕೊಳ್ಳುವುದಿಲ್ಲ, ಪ್ರಪಂಚದ-ಅಂದಿನ-ಇಂದಿನ-ಮುಂದಿನ ಮಾನವರಿಗೂ ಊಹಿಸಲೂ ಸಾಧ್ಯವೆನಿಸದಷ್ಟು ಮಹದದ್ಭುತ—ಅತಿವಿಚಿತ್ರ-ಲೀಲಾಜಾಲವಿನೋದಗಳು ದಯಾಮಯನ ಸಂಕಲ್ಪಗರ್ಭದಲ್ಲಿ ಅಡಗಿ ಆಗಾಗ ಆಸ್ಫೋಟನೆಗೊಳ್ಳುತ್ತವೆ!

ಮಹಾಶಯ! ಈಗ ನೀನು ಇನ್ನೂ ನಿಮ್‌ರೋಜಿಗೆ ಹೋಗುವ ಸಂಕಲ್ಪವನ್ನು ತಾಳಿರುವೆಯಾದರೆ ಹೋಗಿಬರಲು ಯಾವ ಅಡಚಣೆಯೂ ಇರುವುದಿಲ್ಲ. ನೀನು ಅಲ್ಲಿಗೆ ಹೋಗಿ ಕುಶಲತೆಯಿಂದ ಅಲ್ಲಿಯ ರಹಸ್ಯಕ್ಕೆ ಪರಿಹಾರವನ್ನು ಕಂಡುಕೊಂಡು ಕ್ಷೇಮವಾಗಿ ಹಿಂತಿರುಗುವೆಯೆಂದೂ, ನಿನಗೂ ಮಹಾರಾಣಿಯವರಿಗೂ ಸಮಾನ ಪ್ರಮಾಣದಲ್ಲಿ ಹಿತಕಾರಿಯಾದ ಈ ಕಾರ್ಯದಲ್ಲಿ ನೀನು ಜಯಶೀಲನಾಗುವಂತೆಯೂ, ನೀವಿಬ್ಬರೂ ವಿವಾಹಿತರಾಗಿ ಸುಖಸಂತೋಷಗಳನ್ನು ಅತಿಶಯ ಪ್ರಮಾಣದಲ್ಲಿ ಅನುಭವಿಸುವಂತೆ ಕರುಣಾಳು ಪರಮಾತ್ಮನ ಅನುಗ್ರಹವು ಉಂಟಾಗಲೆಂದು ಆಕೆಯು ಹಾರೈಸುತ್ತಾಳೆ."

## ೨೬

ಬಾಸ್ರಾರಾಣಿಯ ಜೀವನ ಚರಿತ್ರೆಯು ಅಷ್ಟೊಂದು ಸ್ವಾರಸ್ಯವಾಗಿಯೂ ನೀತಿದಾಯಕವಾಗಿಯೂ ಇತ್ತು. ಆಕೆ ಅಷ್ಟೊಂದು ದೈವಭಕ್ತಿಯಿಂದಿದ್ದುದ ರಿಂದಲೇ ಆಕೆಯ ಆ ಬಗೆಯ ಕಷ್ಟಗಳನ್ನು ದಯಾಮಯನನ್ನು ಕೊನೆಗಾಣಿ ಸಿದನೆಂದೂ, ಕರುಣಾಳುವು ತನಗನುಗ್ರಹಿಸಿದ ಆ ಅಪಾರ ನಿಧಿಯನ್ನು ಆಕೆ ಆ ತೆರನೆ ಉದಾರತೆಯಿಂದ ವಿನಿಯೋಗಿಸುತ್ತಿರುವುದು ಅತ್ಯಂತ ಅಸದೃಶವೂ, ಸ್ತುತ್ಯಾರ್ಹವೂ ಆದುದೆಂದೂ ನಾನುಗ್ರಹಿಸಿ ಆನಂದಿಸಿದೆ. ಇಷ್ಟೊಂದು ಸಣ್ಣ ವಯಸ್ಸಿನ ರಾಣಿಗೆ ಇಂತಹ ಅಸಂಖ್ಯಾತ ಸದ್ಗುಣಗಳಿರುವುದು ಅತಿ ಶ್ಲಾಘ ನೀಯವೆಂದೂ, ಆಕೆಯನ್ನು ನಾನು ವಿವಾಹ ಮಾಡಿಕೊಳ್ಳಬಹುದಾದರೆ ನನ್ನಂತಹ ಅತುಳ ಪುಣ್ಯಶಾಲಿಯು ಮತ್ತೊಬ್ಬನಿರಲಾರನೆಂದೂ ನಾನು ಭಾವಿ ಸಿದೆ. ಆಕೆ ನನ್ನನ್ನು ಪ್ರೋತ್ಸಾಹಿಸಿದುದರಿಂದ ನನಗೆ ಶಕ್ತಿವರ್ಧಕ ಸಂಜೀ ವಿನಿಯು ದೊರೆತಂತಾಯಿತು. ಹೇಗಾದರೂ ಕೈಕೊಂಡ ಕಾರ್ಯವನ್ನೂ ಸಾಧಿಸಿಕೊಂಡೇ ಬರಬೇಕೆಂಬ ದೃಢಸಂಕಲ್ಪದಿಂದ ನಾನು ಸಿವ್ರೋಜಿಗೆ ಪ್ರಯಾಣ ಮಾಡಿದೆ.

ಪ್ರಯಾಣ ಕಾಲದಲ್ಲೆಲ್ಲ ಬಾಸ್ರಾರಾಣಿಯು ಅಡವಿಯಲ್ಲಿ ಮೊದಲ ಮೂರು ದಿವಸಗಳು ಪಟ್ಟ ಕಷ್ಟಗಳನ್ನೂ, ಆ ಸಮಯದಲ್ಲಿ ದೈವದಲ್ಲಿ ಆಕೆ ಅಚಲವಾಗಿ ಇರಿಸಿದ್ದ ನಂಬಿಕೆಯನ್ನೂ, ಪರೀಕ್ಷೆಯು ಮುಗಿದನಂತರ 'ದೈವಂ ಮಾನುಷ ರೂಪೇಣ' ಎಂಬಂತೆ ವೃದ್ಧಹಕೀಮನ ರೂಪದಲ್ಲಿ ಕಾಣಿಸಿಕೊಂಡು ಆಕೆಗೆ ಅನ್ನ ನೀರುಗಳನ್ನು ಒದಗಿಸುತ್ತಿದ್ದುದನ್ನೂ, ಬಳಿಕ ಮಳೆಗಾಳಿ ಬಿಸಿಲು ಗಳಿಂದ ಮರೆಯಾಗಿರಬೇಕೆಂದು ಕುಟೀರವನ್ನು ಕಟ್ಟಲು ತಳಹದಿಯನ್ನು, ಅಗೆಯಹೋಗಿ ಅತ್ಯದ್ಭುತವೂ, ಅತ್ಯಾಪಾರವೂ, ಆದ ನಿಧಿಯನ್ನು ಪಡೆದು, ಕೋಪದಿಂದ ವಿರಸಗೊಂಡಿದ್ದ ತಂದೆಯೊಡನೆ ಪುನರ್ಮಿಲನವಾಗಿ ಅಂತ್ಯದಲ್ಲಿ

ರಮಣೀಯವಾಗಿ ಎಲ್ಲವೂ ಪರಿಣಾಮ ಹೊಂದಿ, ನೊಂದ ಜೀವಿಗಳು,ಆನಂದಾಬ್ಧಿ ಯಲ್ಲಿ ಮುಳುಗಿ ಓಲಾಡುವಂತಾದ ಆ ಅಪೂರ್ವ ಕಟಾಕ್ಷ ವೀಕ್ಷಣೆಯ ವಿಸ್ಮಯಾ ನಂದಕಾರಕ ಆತ್ಮ ಕಥೆಯನ್ನು, ನೆನೆಸಿ ನೆನೆಸಿ ನಾನು ಅತುಳೋತ್ಸಾಹವನ್ನು ಅನುಭವಿಸಿದೆ. ನನ್ನಲ್ಲೊಂದು ನವಚೇತನವು ಅಂಕುರಿಸಿದಂತಾಯಿತು. ನವ ಸ್ಫೂರ್ತಿಯು ಆವಿರ್ಭವಿಸಿತು. ನಾನು ಆಶಾವಾದಿಯಾದೆ. ಅಚಲ ನಂಬಿಕೆ ಯಿಂದಲೂ, ಸ್ಥಿರಪ್ರಯತ್ನದಿಂದಲೂ, ದೈವಕಟಾಕ್ಷವನ್ನು ಒಲಿಸಿಕೊಂಡು ಎಷ್ಟೇ ಕಷ್ಟಸಾಧ್ಯವೆಂದು ಕಂಡು ಬಂದರೂ ಕೈಕೊಂಡ ಕಾರ್ಯವನ್ನೂ ಈಡೇ ರಿಸಿಕೊಳ್ಳಬಹುದು. ವಿಜಯ ಹೊಂದಿ ನಿಮ್‌ರೋಜಿನಿಂದ ಆದಷ್ಟು ಬೇಗ ಹಿಂತಿರುಗಿ ಆ ಲಲನಾಮಣಿಯನ್ನು ಪಾಣಿಗ್ರಹಣಮಾಡಿ ಸುಖಸಂತೋಷ ಸಂತೃಪ್ತಿಗಳನ್ನು ಇತೋಽಪ್ಯತಿಶಯವಾಗಿ ಅನುಭವಿಸಬಹುದೆಂದು ನಿರ್ಧರಿಸಿದೆ.

ನಿಮ್‌ರೋಜಿಗೆ ಪ್ರಯಾಣವು ಸರಿಯಾಗಿ ಒಂದುವರ್ಷಕಾಲ ಹಿಡಿಯಿತು. ದಾರಿಯುದ್ದಕ್ಕೂ ನಾನು ಅನೇಕಾನೇಕ ಕಷ್ಟನಷ್ಟಗಳನ್ನು ಅನುಭವಿಸ ಬೇಕಾಯಿತು. ಆದರೂ ಗುರಿಯ ಸಾಧನೆಯೇ ಮುಖ್ಯವಾಗಿ ನನ್ನ ಕಣ್ಣು ಮುಂದೆ ಬಂದು ನಿಂತು ನನ್ನನ್ನು ಮುಂದುಮುಂದಕ್ಕೆ ಎಳೆದೊಯ್ದು ನಿಮ್ ರೋಜಿನಲ್ಲಿ ತಂದು ನಿಲ್ಲಿಸಿತು. ನಾನು ಆ ನಗರವನ್ನು ಸೇರಿದನಂತರ ಕೆಲವೇ ದಿನಗಳು ಕಳೆದಿರಬಹುದು. ಒಂದಾನೊಂದು ದಿನ ಸಂಧ್ಯಾಸಮಯ. ಅಂದು ಕೃಷ್ಣಪಕ್ಷದ ಕಡೆಯ ದಿನ—ಅದಾಗಿ ಅಮಾವಾಸ್ಯೆಯದಿನ. ಮರುದಿನ ತಿಂಗಳು ಹುಟ್ಟುವ ದಿನ—ಅದಾಗಿ ಶುಕ್ಲಪಕ್ಷದ ಪ್ರಥಮೆ. ಅಂದು ಆ ನಗರದ ನಿವಾಸಿ ಗಳೆಲ್ಲರೂ—ಚಿಕ್ಕವರು—ಶ್ರೀಮಂತರು, ಮಕ್ಕಳು—ಮುದುಕರು, ಪ್ರಮುಖರು, ಪ್ರಧಾನಿಗಳು, ರಾಜರು—ರಾಜಕುಮಾರರು, ಸ್ತ್ರೀಯರು—ಪುರುಷರು, ಎಲ್ಲ, ಒಬ್ಬರನ್ನು ಬಿಡದೆ ಎಲ್ಲ—ಊರಿಗೆ ಊರೇ ಬಾಹ್ರಾವರನು ಹೇಳಿದಂತೆಯೇ ಆ ವಿಶಾಲವಾದ ಮೈದಾನದಲ್ಲಿ ಸಾಲುಸಾಲಾಗಿ ನಿರೀಕ್ಷೆಯಿಂದ ನಿಂತಿದ್ದರು. ಆ ಅಪಾರ ಸಮೂಹದೊಂದಿಗೆ ಕಲೆತು ನಾನೂ ಆ ಮೈದಾನಕ್ಕೆ ಹೋದೆ. ಫಕೀರ ವೇಷದೊಂದಿಗೆ ಹೋದ ನಾನು—ಅಲ್ಲೇನು ನಡೆಯುತ್ತದೆ. ಎಂದು ಕುತೂಹಲದಿಂದ ನೋಡುತ್ತಿದೆ. ಸಾಧ್ಯವಾದರೆ ಈ ರಹಸ್ಯಕ್ಕೆ ಕಾರಣವನ್ನು ಶೀಘ್ರದಲ್ಲೆ ಕಂಡುಹಿಡಿಯಬೇಕೆಂತಲೂ ನನ್ನಲ್ಲೆ ಆಲೋಚಿಸುತ್ತಿದ್ದೆ. ಬಾಹ್ರಾ

ವರನು ಹೇಳಿದಂತೆಯೇ ಚಾಚೂ ತಪ್ಪದೆ ಎಲ್ಲವೂ ನಡೆಯಿತು. ಆಗ ಆ ಗುಲಾಮನು ಒಂದು ಬಟ್ಟಲನ್ನು ಕೈಯಲ್ಲಿ ಹಿಡಿದು ನೆರೆದವರಿಗೆಲ್ಲ ತೋರಿ ಸುತ್ತಿದ್ದುದನ್ನೂ; ಆ ಬಳಿಕ ಹಳದಿ ಗೂಳಿಯನ್ನು ಹತ್ತಿಬಂದ ಆ ತರುಣನು ಗುಲಾಮನ ತಲೆಯನ್ನು ತನ್ನ ಕತ್ತಿಯ ಒಂದೇ ಏಟನಿಂದ ಹಾರಿಸಿಬಿಟ್ಟುದನ್ನೂ ಎವೆಯಿಕ್ಕದೆ ನೋಡುತ್ತಿದ್ದ ನಾನು, ನನ್ನ ಪ್ರಯಾಣದ ಮುಖ್ಯೋದ್ದೇಶವೂ, ನನ್ನ ಮುಂದಿನ ಬಾಳಿನ ಮಂಗಳಮಯ ಗುರಿಯೂ ಆಗಿದ್ದ—ಆ ರಹಸ್ಯವನ್ನು ಬೇಧಿಸುವ ಪ್ರಸಕ್ತಿಗೆ ಅದುವರೆಗೂ ಕೈಹಾಕಿರಲಿಲ್ಲ. ಅದುದರಿಂದ ನಾನು ಅಲ್ಲೆ ಮತ್ತೊಂದು ತಿಂಗಳು ತಂಗಿರಬೇಕಾಗಿತ್ತು. ಮನುಷ್ಯನಿಗೆ ಆತುರ ವಿದ್ದಾಗ ವಿನಾಡಿಗಳು ವಿಷಘಳಿಗೆಗಳಂತೆ ತೋರುತ್ತವೆ. ಹೊತ್ತು ಬೇಗನೆ ಹೋಗುವುದಿಲ್ಲ. ಕಾಲಕ್ಕೆ ಅವಸರವೇ ಇಲ್ಲದಿರುವಂತೆ ಕಂಡು ಅದು ನಿಧಾನ ವಾಗಿ ಮುನ್ನಡೆವಂತೆ ಭಾಸವಾಗುತ್ತದೆ. ಬೇರೆ ಯಾವ ಹವ್ಯಾಸವೂ ಇಲ್ಲದೆ ಇರುವ ಮನುಷ್ಯನಿಗೆ ಮರುದಿನ ಆಗಬೇಕಾದ ಕೆಲಸಕ್ಕೆ ಹಿಂದಿನ ದಿನದ ಒಂದೊಂದು ನಿಮಿಷವೂ ನಿರೀಕ್ಷಿಸಿ ನಿರೀಕ್ಷಿಸಿ ಆ ಒಂದೇ ಒಂದು ದಿವಸ ಒಂದು ತಿಂಗಳಂತೆ ಕಾಣಿಸುತ್ತದೆ. ಕಾರಣವಾದರೂ ಇಷ್ಟೇ....ಆ ಕಾಯುವಿಕೆಯಲ್ಲಿ ಅಷ್ಟೊಂದು ಬೇಸರವು ಅಡಗಿರುತ್ತದೆ. ಇಂದು ನೆಲವನ್ನು ಉತ್ತು, ಕಾಳನ್ನು ಚೆಲ್ಲಿ ಮಣ್ಣು ಮುಚ್ಚಿ ಮೊಳಕೆಬಂದ ಒಂದು ವಾರದಲ್ಲಿಯೇ ದವಸವನ್ನು ಎಂದಿಗೆ ಕುಯ್ದು ಕಣಜಕ್ಕೆ ತುಂಬಿಯೇನು ಎಂಬ ಆತುರದಲ್ಲಿ ತಿಂಗಳುಗಳು ವರ್ಷವಾಗಿ ಕಾಣಿಸುತ್ತವೆ. ಒಮ್ಮೊಮ್ಮೆ ಒಂದೇ ವರ್ಷದ ಅವಧಿಯು ಒಂದು ಯುಗದಂತೆ ಭಾಸವಾಗುತ್ತದೆ. ವಿರಹಿಗಳಿಗೆ ತಮ್ಮ ಕಾಂತೆಯರನ್ನು ಕಾಣಬಹುದಾದ ಕಾಲವು ಅತಿ ಸಮೀಪದಲ್ಲಿದ್ದರೂ ಅದು ಅತಿ ದೂರವಾದ ಕಾಲದಲ್ಲಿರುವಂತೆ—ಆ ನಿರೀಕ್ಷಣೆ—ಆ ಬೇಸರ ಇವು ಅಲ್ಪಕಾಲಕ್ಕೆ—ದೀರ್ಘ ಅವಧಿಯ ಉಡುಗೆ ಯನ್ನು ತೊಡಿಸುತ್ತವೆ. ಇರಲಿ; ಮತ್ತೊಮ್ಮೆ ಆ ಮೈದಾನ ವಿಚಿತ್ರ ದೃಶ್ಯದ ಪ್ರದರ್ಶನಕ್ಕೆ ಇನ್ನೊಂದು ತಿಂಗಳ ಅವಧಿ ಇತ್ತಲ್ಲವೆ? ಆದರೆ ನನ್ನ ಆತುರವು ಅಷ್ಟೊಂದು ಅಪಾರವಾಗಿದ್ದಿತು. ಆ ಅವಧಿಯನ್ನು ಹೇಗೆ ತಳ್ಳುವುದು? ಎಂದಿಗೆ ತಿಂಗಳು ಮುಗಿದೀತು? ಎಂದಿಗೆ ಮೈದಾನದಲ್ಲಿ ಮತ್ತೆ ದೃಶ್ಯವು ಕಂಡೀತು? ಎಂದಿಗೆ ರಹಸ್ಯವನ್ನು ಬಯಲುಮಾಡಿ ಬಾಸ್ರಾವಿಗೆ ಹಿಂದಿರುಗಿ

ಯೇನು? ಎಂದಿಗೆ ಈ ವಿಚಿತ್ರ ವೃತ್ತಾಂತವನ್ನು ನನ್ನ ಹೃದಯದ ಆರಾಧ್ಯ ದೇವತೆಯಾದ ಆ ರಾಜಕುಮಾರಿಗೆ ತಿಳುಹಿಸಿ, ಆಕೆಯ ಕೈಹಿಡಿದು ಸುಖವಾಗಿ ದ್ದೇನು? ಇವೇ ನನ್ನ ಯೋಚನೆ. ಹಗಲಿರುಳೂ ಯೋಚನೆ—ಯೋಚನೆ—ಯೋಚನೆ! ಬೇರೊಂದಿಲ್ಲ. ರಮಜಾನ್ ಹಬ್ಬದ ಕಾಲದಲ್ಲಿ—ಉಪವಾಸದ ಮಾಸದಲ್ಲಿ—ದಿನಗಳನ್ನು ಎಣಿಸುವಂತೆ, ನಾನು ಆ ತಿಂಗಳೆಲ್ಲ ಒಂದು-ಎರಡು-ಮೂರು ಎಂದು ಮುಂತಾಗಿ ಒಂದಾದಮೇಲೊಂದು ದಿನಗಳನ್ನು ಎಣಿಸುತ್ತಲೇ ಇದ್ದೆ. ಅಷ್ಟು ನಿಧಾನವಾಗಿ ಸಾಗುತ್ತಿತ್ತು ಆ ತಿಂಗಳು!

ಕಟ್ಟಕಡೆಗೆ ಅಮಾವಾಸ್ಯೆಯ ದಿನವೂ ಬಂದಿತು. ಮರುದಿನ ಎಂದಿನಂತೆ ಅದೇ ಮೈದಾನದಲ್ಲಿ ಅದೇ ತೆರನೆ ಕಣ್ಣು ಕುಕ್ಕುವ ಆ ಸಮೂಹ, ಹಿಂದಿನ ಸಲದಂತೆಯೇ ಅದೇ ಗೂಳಿ ಅದೇ ಸವಾರ, ಅದೇ ಗುಲಾಮ, ಅದೇಪ್ರದರ್ಶನ ಅದೇ ತೆರನೆ ರುಂಡವನ್ನು ತರಿಯುವಿಕೆ! ಈಸಲ ಇದರ ಗೂಢಾರ್ಥವನ್ನು ಹೊರಗೆಡಹಲೇ ಬೇಕೆಂದು ನಾನು ನಿರ್ಧರಿಸಿದೆ. ತರುಣ ಸವಾರನು ಗುಲಾಮನ ತಲೆಯನ್ನು ತರಿದುಹಾಕಿ ಗೂಳಿಯನ್ನು ಹತ್ತಿ ತಾನು ಹೊರಟು ಬಂದ ಸ್ಥಳಕ್ಕೇ ಹಿಂತಿರುಗಿ ಹೋಗುವುದರಲ್ಲಿದ್ದನು. ನಾನೂ ಅವನ ಹಿಂದೆ ಓಡತೊಡಗಿದೆ. ಆದರೆ ಪ್ರೇಕ್ಷಕರು ಓಡಿಬಂದು ನನ್ನನ್ನು ಬಲವಾಗಿ ಹಿಡಿದುಕೊಂಡರು. ನಾನು ಅವರ ಹಿಡಿತದಿಂದ ತಪ್ಪಿಸಿಕೊಳ್ಳಲಾರದೆ ಹೋದೆ.

ಅವರು ನನ್ನನ್ನು ತಡೆದು ಕೇಳಿದರು:

"ಹುಚ್ಚ! ಏನನ್ನು ನೀನು ಮಾಡಬಯಸುತ್ತಿರುವೆ? ನಿನಗೇನು ಬಾಳ ಮೇಲೆ ಅಷ್ಟೊಂದು ಬೇಸರವು ಹುಟ್ಟಿ ಬಿಟ್ಟಿತೆ? ನಿಷ್ಕಾರಣವಾಗಿ ಅವನ ಕತ್ತಿಗೆ ಬಲಿಯಾಗಲು ಯತ್ನಿಸುತ್ತಿರುವೆಯಾ? ಹಾಗೆ ನಿನಗೆ ಬೇಸರವಾದರೆ ಹೀಗೇಕೆ ಸಾಯಬೇಕೆಂದು ಬಯಸುವೆ? ಪ್ರಾಣಬಿಡಲು ಎಷ್ಟೋದಾರಿಗಳಿವೆ, ಆದರೆ ಆ ಗೂಳಿಯನ್ನೂ ಅದರ ಸವಾರನನ್ನೂ ಹಿಂಬಾಲಿಸಲು ನಾವು ಅವಕಾಶ ಕೊಡಲಾರೆವು."

ಆದುದರಿಂದ ಎರಡನೆಯ ಆವರ್ತಿ ನನ್ನ ಪ್ರಯತ್ನವು ವಿಫಲವಾಯಿತು. ಮತ್ತೊಂದು ಮಹಾ ಬೇಸರದ ತಿಂಗಳನ್ನು ಕಳೆಯಬೇಕಾಯಿತು. ಮತ್ತೆ ಅಮಾವಾಸ್ಯೆ ಬಂದಿತು. ಮರುದಿನವೇ ಎಂದಿನಂತೆ ಕಾರ್ಯಾಚರಣೆಗಳು,

ಯಾರ ಅಡ್ಡಿ ಅಡಚಣೆಗಳಿಗೂ ಸಿಕ್ಕಿ ಬೀಳಬಾರದು—ನನ್ನ ಕಾರ್ಯವನ್ನು ಜಯಿಸಲೇ ಬೇಕು ಎಂದು ತೀರ್ಮಾನಿಸಿಕೊಂಡೆ. ಎಂದಿನಂತೆ ನಾನು ಪ್ರೇಕ್ಷಕ ಸಮೂಹದಲ್ಲಿ ಕಲೆತುಕೊಳ್ಳಲಿಲ್ಲ. ಗುಲಾಮನನ್ನು ತರಿದನಂತರ ತರುಣ-ಸವಾರನು ಗೂಳಿಯನ್ನು ಹತ್ತಿ ಹಿಂತಿರುಗಿ ಬರುವ ದಾರಿ ನನಗೆ ಗೊತ್ತಿತ್ತು. ಆದುದರಿಂದ ಜನಸಂದಡಿಯಿಂದ ದೂರವಾಗಿ ಆ ದಾರಿಯಲ್ಲೆ ಒಂದು ಪೊದರ ಮರೆಯಲ್ಲಿ, ಅಡಗಿ ಕುಳಿತುಕೊಂಡು, ಸವಾರನು ಬರುವುದನ್ನೇ ಕಾಯು ತ್ತಿದ್ದೆ. ಈ ಸಲವೂ ಹಿಂದಿನ ಸಲದಂತೆಯೇ ಎಲ್ಲವೂ ನಡೆದುಹೋಯಿತು; ತರುಣ ಸವಾರನು ಗೂಳಿಯನ್ನು ಹತ್ತಿ ನಾನಿದ್ದ ಪ್ರದೇಶವನ್ನು ಹಾದು ವೇಗ ವಾಗಿ ಹೋಗುತ್ತಿದ್ದ. ನಾನು ಅವನ ಬೆನ್ನ ಹಿಂದೆ ಓಡಿದೆ. ನನ್ನ ಕಾಲು ಸಪ್ಪಳವನ್ನು ಕೇಳಿದ ಅನನು ಹಿಂತಿರುಗಿ ನೋಡಿದ. ಬಳಿಕ ಗೂಳಿಯನ್ನು ನಾನು ಓಡಿಬರುತ್ತಿದ್ದ ಕಡೆತಿರುಗಿಸಿ ನನ್ನನ್ನು ಧಾವಿಸಿ ಬಂದವನೇ ತನ್ನ ಕತ್ತಿ ಯಿಂದ ನನ್ನನ್ನು ಕೊಂದುಹಾಕಬೇಕೆಂದು ಯತ್ನಿಸಿದ, ಆದರೆ ನಾನು ಅವನಿಗೆ ಅತ್ಯಂತ ನಮ್ರತೆಯಿಂದ ವಂದಿಸಿದೆ — ತಲೆತಗ್ಗಿಸಿ ಕೈಮುಗಿಯುತ್ತ ನಿಂತು ಕೊಂಡೆ, ಹೆದರಿ, ಹಿಂಜರಿದು, ಓಡಿಹೋಗಲು ಯತ್ನಿಸಲಿಲ್ಲ. ನನ್ನ ವಿನಯ ಗಾಂಭೀರ್ಯಗಳನ್ನು ಕಂಡು ಅವನ ಮನಸ್ಸು ಚಲಿಸಿ, ನನ್ನಕಡೆ ಒಲಿಯಿತೆಂದು ಕಂಡಿತು, ತನ್ನ ಕಠಿಣ ಸ್ವಭಾವವನ್ನು ಕ್ಷಣಕಾಲ ಬಿಗಿಹಿಡಿದು ಅವನು ನನ್ನನ್ನು ಕುರಿತು ಹೇಳಿದ:

"ಎಲೈ ಯಾತ್ರಿಕನೆ! ನಾನು ನಿನ್ನನ್ನು ಕೊಲ್ಲದೆ ಮನ್ನಿಸಿದ್ದೇನೆ. ನಿನ್ನ ಬಾಳು ಮುಂದುವರಿಯಿತು. ಆದರೆ ನಿನ್ನ ತಲೆಯನ್ನು ತುಂಡರಿಸಿ ಬಿಡುವು ದಕ್ಕೆ ಮುನ್ನ ಇಲ್ಲಿಂದ ಹೊರಡು." ಹೀಗೆಂದು ಹೇಳಿ ರತ್ನಖಚಿತವಾದ ಒಂದು ಬಾಕು ತನ್ನ ಸೊಂಟದಿಂದ ತೆಗೆದು ನನ್ನತ್ತ ಎಸೆದನು. ಮತ್ತೆ ಹೀಗೆಂದು ಹೇಳಿದನು.

"ತೆಗೆದುಕೋ ಈ ಬಾಕುವನ್ನು ನಿನಗೆ ಕೊಡಲು ನನ್ನಲ್ಲಿ ಹಣವಿಲ್ಲ. ಆದರೆ ಈ ಬಾಕುವನ್ನು ತೆಗೆದುಕೊಂಡು ಹೋಗಿ ಈ ನಾಡಿನ ಅರಸನಿಗೆ ತೋರಿಸು. ಅವನು ಅದನ್ನು ಕಂಡ ಒಡನೆ ನೀನು ಏನು ಅಪೇಕ್ಷಿಸಿದರೂ ಕೊಡುತ್ತಾನೆ."

ನನ್ನ ನಾಲಿಗೆ ನಡುಗುತ್ತಿತ್ತು; ನನ್ನ ಗಂಟಲು ಒಣಗಿತ್ತು; ನನಗೆ ಏನು ಹೇಳಲೂ ಸಾಧ್ಯವಾಗಲಿಲ್ಲ. ಏಕೆ? ಏನಾದರೂ ಹೇಳುವ ಚೈತನ್ಯವಿದ್ದರೂ ಏನ್ನನ್ನು ಹೇಳಬೇಕು ಎಂದೇ ನನಗೆ ಗೊತ್ತಾಗುತ್ತಿರಲಿಲ್ಲ. ಆ ಬಳಿಕ ತರುಣನು ತನ್ನ ದಾರಿಯನ್ನು ಹಿಡಿದು ಮುಂದೆ ಹೊರಟನು. ಪ್ರಾಣಾಪಾಯವನ್ನೂ ಲಕ್ಷಿಸದೇ ನಾನ್ನು ಅವನನ್ನೇ ಯಥಾಪ್ರಕಾರವಾಗಿ ಹಿಂಬಾಲಿಸಿ ಓಡಿದೆ ಅವನ ವಿಚಿತ್ರ ಚರಿತ್ರೆಯ ರಹಸ್ಯವನ್ನು ಕಂಡುಹಿಡಿದು ಬಾಸ್ರಾರಾಣಿಯ ಕುತೂಹಲವನ್ನು ತೃಪ್ತಿಗೊಳಿಸುವುದಕ್ಕೆ ಇಂತಹ ಅವಕಾಶವು ಮತ್ತೊಮ್ಮೆ ದೊರೆಯಲಾರದೆಂದು ನಾನು ಮನಗಂಡೆ. ಆದರೆ ಈ ಸಲ ನನ್ನನ್ನು ವಧಿಸಿಬಿಡಬೇಕೆಂವೇ ಅವನು ತೀರ್ಮಾನಮಾಡಿಕೊಂಡಂತಿತ್ತು. ನಾನು ಹೆದರಲಿಲ್ಲ. ಅವನ ಬಳಿ ಹೋಗಿ ಅವನ ಮುಂದೆ ಕತ್ತನ್ನು ಚಾಚಿದೆ. ಕೊರಳು ತರಿಸಿಕೊಳ್ಳುವುದಕ್ಕೆ ಸಿದ್ಧನಾಗಿರುವಂತೆ ತೋರ್ಪಡಿಸಿಕೊಂಡೆ. ಅವನನ್ನು ಕಂಡು ಹೇಳಿದೆ :

"ಆಧುನಿಕ ಕಾಲದ ರುಸ್ತುಮ! ನನ್ನ ತಲೆಯನ್ನು ಕತ್ತರಿಸಿ ಹಾಕು! ಒಂದೇ ಏಟಿಗೆ ಕತ್ತರಿಸಿಹಾಕು. ನನ್ನನ್ನು ಈ ಮರವಸ್ಥೆಯಿಂದ ಮುಕ್ತಿ ಹೊಂದಿಸು. ನಿನ್ನ ರಕ್ತಪಾತವನ್ನು ನಾನು ಮನ್ನಿಸುತ್ತೇನೆ."

"ಎಂತಹ ರಾಕ್ಷಸ ಮೂರ್ತಿ ನೀನು!" ಅವನು ಕೇಳಿದ. "ಏತಕ್ಕಾದರೂ ರಕ್ತಪಾತದ ಹೊರೆಯನ್ನು ನನ್ನ ತಲೆಯ ಮೇಲೆ ತಳ್ಳಲೆತ್ನಿಸುತ್ತಿರುವೆಯಯ್ಯಾ! ನನ್ನನ್ನು ಅಪರಾಧಿ ಸ್ಥಾನಕ್ಕೆ ಏರಿಸಿಬಿಡಬೇಕೆಂಬುದೇ ನಿನ್ನ ಸಂಕಲ್ಪವೋ? ನಿನಗೇನು ಪ್ರಾಣವು ಹೊರೆಯಾಗಿ ಬಿಟ್ಟಿದೆಯೇ? ಹೋಗು, ಹೋಗು; ಹುಚ್ಚ! ಬಂದ ದಾರಿಯನ್ನು ಹಿಡಿದುಕೊಂಡು ಹೋಗು."

ಹಿಂಗೆಂದವನೇ ಅವನು ಆ ತರುವಾಯ ನನ್ನನ್ನು ಲಕ್ಷ್ಯಮಾಡದೆಯೇ ಮುಂದೆ ಸಾಗಿದ. ಅವನನ್ನು ಹಿಂಬಾಲಿಸಿದೆ. ಹೀಗೆ ನಾಲ್ಕು ಮೈಲಿಗಳ ದೂರ ಹೋದನಂತರ ಅವನು ಒಂದು ಚಚ್ಚೌಕದ ಮನೆಯ ಬಳಿ ಬಂದು ಸೇರಿದ. ಅವನ ಧ್ವನಿಯನ್ನು ಕೇಳಿ ಬಾಗಿಲು ತೆರೆಯಿತು. ಅವನು ಒಳಹೊಕ್ಕ. ಬಾಗಿಲು ಮುಚ್ಚಿತು. ಅವನು ಒಳಗೆ–ನಾನು ಹೊರಗೆ!

ಇದೀಗ ನನ್ನ ಅವಕಾಶವು ನಾಶವಾಯಿತು ಎಂದು ನಾನಂದುಕೊಂಡೆ; ಆ ಬಾಗಿಲನ್ನು ತೆರೆಯಿಸಲು ನಾನೇನು ಮಾಡಬಲ್ಲವನಾಗಿದ್ದೆ? ಅಷ್ಟರಲ್ಲಿ ಒಬ್ಬ ಗುಲಾಮನು ಒಂದು ಸಂದೇಶವನ್ನು ಹೊತ್ತು ತಂದ:

" ಒಳಗೆ ದಯಮಾಡಿಸಿ, ಆತ ನಿಮ್ಮನ್ನು ಹತ್ತಿರಕ್ಕೆ ಬರುವಂತೆ ಹೇಳಿ ಕಳುಹಿಸಿದ್ದಾನೆ. ಮೃತ್ಯುದೇವತೆಯು ನಿಮ್ಮ ತಲೆಯ ಮೇಲೆಯೇ ಹಾರಾಡುತ್ತಿದ್ದಂತೆ ಕಾಣಿಸುತ್ತದೆ. ಯಾವ ಕೆಟ್ಟ ವಿಧಿಶಾಸನವನ್ನು ಮೂಟೆ ಕಟ್ಟಿ ಹೊತ್ತು ತಂದಿರುವಿರಿ?''

"ಏನಂದೆಯಪ್ಪ? " ನಾನು ಹೇಳಿದೆ. "ಕೆಟ್ಟ ವಿಧಿಶಾಸನವೆ? ಏತಕ್ಕಾದೀತು? ಅದೆಲ್ಲ ಒಳ್ಳೆಯದಕ್ಕೇ. ಇದನ್ನೇ ನಾನು ಬಯಸಿದ್ದು. ನಡೆ ಹೋಗೋಣ."

ಗುಲಾಮನನ್ನು ಹಿಂಬಾಲಿಸಿ ನಾನು ಒಳಗೆ ಹೋದೆ. ಆದರೆ ಏನಾಶ್ಚರ್ಯ! ನನ್ನ ಮನಸ್ಸಿನಲ್ಲಿ ಭಯವೆಂಬುದು ಲೇಶಮಾತ್ರವೂ ತಲೆದೋರಲಿಲ್ಲ.

ತರುಣನ ಬಳಿ ಗುಲಾಮ ನನ್ನನ್ನು ಕರೆದುಕೊಂಡು ಹೋದ. ಅವನನ್ನು ನೋಡಿ ನಾನವನಿಗೆ ಅತ್ಯಂತ ನಮ್ರತೆಯಿಂದ ವಂದಿಸಿದೆ. ಕುಳಿತುಕೊಳ್ಳುವಂತೆ ಅವನು ನನಗೆ ಸನ್ನೆಮಾಡಿ ಅಕ್ಕಸಾಲಿಗನ ಯಾನಗಳನ್ನು ತನ್ನೆದುರಿಗೆ ಹಾಕಿಕೊಂಡು ಅವನು ಏಕಾಂಗಿಯಾಗಿ ಬಂದು ಮೆತ್ತನೆಯ ಆಸನದ ಮೇಲೆ ಕುಳಿತಿದ್ದ. ಆಗ ತಾನೇ ಒಂದು ಆಭರಣವನ್ನು ಮಾಡಿ ಮುಗಿಸಿದ್ದ. ಅವನು ಮೇಲೇಳುವ ಕಾಲವು ಒದಗಿತು. ಅವನ್ನರಿತ ಎಲ್ಲೆಲ್ಲಿದ್ದ ಅವನ ಗುಲಾಮರೂ ಅಲ್ಲಲ್ಲೆ ಒಂದೊಂದು ಕೊಠಡಿಯಲ್ಲಿ ಹೋಗಿ ತಲೆಮರೆಸಿಕೊಂಡರು. ಅವರು ಮಾಡಿದ್ದು ನನಗೆ ಅರ್ಥವಾಗದಿದ್ದರೂ ಅದರಂತೆಯೇ ನಾನೂ ಮಾಡುವುದು ಕ್ಷೇಮಕರವೆಂದರಿತು ನಾನು 'ಅಲ್ಲಿಂದೆದ್ದು ಓಡಿದೆ. ತರುಣನು ಮೇಲೆದ್ದವನೇ ಎಲ್ಲ ಕೊಠಡಿಗಳ ಚಿಲಕಗಳಿಗೂ ಸರಪಣಿಯನ್ನು ಹಾಕಿ ಬಿಗಿದ. ತೋಟದ ಒಂದು ಮೂಲೆಯಲ್ಲಿ ಗೂಳಿ ನಿಂತಿದ್ದ ಸ್ಥಳಕ್ಕೆ ಹೋದ. ಅವನದನ್ನು ತನ್ನ ಕಟ್ಟಿಗೆಯಿಂದ ರಫ ರಫ ಎಂದು ಬಡಿದ. ನೋವನ್ನು ತಾಳಲಾರದೆ ಅದು ಹೋ ಎಂದು ಅರಚಿತು. ಗೂಳಿಯ ಅರಚುವಿಕೆಯು ನನ್ನ ಕಿವಿಯಲ್ಲಿ ಬಿತ್ತು. ನನಗೆ ಆಗ ಅತ್ಯಂತ ಹೆಚ್ಚಿನ ಭಯವುಂಟಾಯಿತು. ಆದರೆ ಹಿಡಿದ ಕೆಲಸದಿಂದ

ಹಿಂಜರಿಯಬೇಬಾರದೆಂದು ನಾನು ದೃಢವಾಗಿ ನಿಶ್ಚಯಿಸಿದ್ದೆ. ನಾನು ಅಡಗಿ ಕುಳಿತದ್ದ ಕೊಠಡಿಯ ಕದವನ್ನು ಬಲವಂತವಾಗಿ ತೆರೆದು ಹೊರಗೆ ಬಂದೆ. ಅವನು ಮಾಡುತ್ತಿದ್ದುದನ್ನೆಲ್ಲಾ ನೋಡ ತೊಡಗಿದೆ.

ಮುಂದೆ ನಡೆದುದರಲ್ಲಿ ಅತ್ಮೀಯತೆಯು ಕಂಡಿತು. ತರುಣನು ಕೋಪದ ದಾರಿಯನ್ನು ತ್ಯಜಿಸಿ ಶಾಂತತೆಯ ಕಡೆ ತಿರುಗುತ್ತಿದ್ದಾನೆಂದು ಕಂಡುಬಂದಿತು. ಬಾಗಿಲುಗಳನ್ನೆಲ್ಲ ತೆರೆದ. ಒಳಗೆ ಅಡಗಿ ಕುಳಿತಿದ್ದ ಗುಲಾಮರು ಒಂದೊಂದು ರತ್ನಗಂಬಳಿಯನ್ನು ಹೊತ್ತುಕೊಂಡು ಹೊರಗೆ ಬಂದರು. ತನ್ನ ಮುಖವನ್ನೂ ಕೈಕಾಲುಗಳನ್ನೂ ತೊಳೆದುಕೊಂಡವನೇ ತರುಣನು ಪ್ರಾರ್ಥನೆಗೆ ನಿಂತುಕೊಂಡ. ತನ್ನ ಪ್ರಾರ್ಥನೆಯು ಮುಗಿದೊಡನೆಯೆ "ಆ ಯಾತ್ರಿಕನೆಲ್ಲಿ ?'' ಎಂದು ಕೇಳಿದ, ನನ್ನ ಹೆಸರನ್ನು ಕೇಳಿದೊಡನೆಯೇ ನಾನು ಅವನ ಬಳಿ ಓಡಿದೆ. ತಲೆತಗ್ಗಿಸಿ ಕೈಮುಗಿದು ಅವನೆದುರಿಗೆ ನಿಂತುಕೊಂಡೆ. ಅವನು ನನ್ನನ್ನು ಕುಳಿತುಕೊಳ್ಳುವಂತೆ ಹೇಳಿದ. ಊಟಕ್ಕೆ ಬಡಿಸಿದರು. ತನಗೆ ಬಡಿಸಿದುದರಲ್ಲಿ ಅವನು ನನಗೂ ಸ್ವಲ್ಪ ಕೊಟ್ಟ. ನನಗೆ ಹಸಿವಾಗಿತ್ತು. ಕೊಟ್ಟುದನ್ನು ಆತುರದಿಂದ ತಿಂದೆ. ಊಟವು ಬಹಳ ಹಿತಕರವಾಗಿತ್ತು.

ಊಟಮಾಡಿ ಕೈತೊಳೆದುಕೊಂಡ ಮೇಲೆ ಅವನು ಗುಲಾಮರನ್ನು ಕುರಿತು ನೀವೆಲ್ಲ ಹೋಗಿ ವಿಶ್ರಾಂತಿ ಪಡೆಯಿರಿ " ಎಂದ. ಬಳಿಕ ಆ ಕೊಠಡಿಯಲ್ಲಿ ಉಳಿದವರು ನಾವಿಬ್ಬರೇ. ನಾನು ಮತ್ತು ಆ ತರುಣ. ಆಗ ಅವನು ನನ್ನನ್ನು ಕುರಿತುಕೇಳಿದ :

" ಎಲೈ ಸ್ನೇಹಿತನೆ ! ನಿನಗಾವ ಸಂಕಟವು ದುರದೃಷ್ಟದಿಂದ ಪ್ರಾಪ್ತವಾಗಿ ನೀನು ಹೀಗೆ ಮರಣವನ್ನು ಅರಸುತ್ತ ಹೊರಟಿರುವೆ ? "

ಪರ್ಷಿಯಾದಿಂದ ಹೊರಟು, ಬಾಸ್ರಾವಿಗೆ ಬಂದು, ಅಲ್ಲಿ, ಅಲ್ಲಿಂದ ಮುಂದೆ ನಡೆದ ಎಲ್ಲ ಸಮಾಚಾರಗಳನ್ನೂ ಒಂದು ಬಿಡದೆ ನಾನವನಿಗೆ ತಿಳುಹಿಸಿ ದೈನ್ಯವಾಗಿ ಹೇಳಿದೆ:

" ಮಹಾಶಯ ! ನೀನು ದಯೆಮಾಡಿದರೆ ಸಾಕು ; ನಾನು ನನ್ನ ಉದ್ದೇಶವನ್ನು ಸಾಧಿಸಿಕೊಂಡು ಹಿಂತಿರುಗಬಲ್ಲೆ. ಅಷ್ಟಕ್ಕೇ ಉಪಕಾರಮಾಡಿ ಕಾಪಾಡು.

ನನ್ನ ಕಥೆಯನ್ನು ಅವನು ಅತ್ಯಂತ ಆಸಕ್ತಿಯಿಂದ ಕೇಳುತ್ತಿದ್ದಂತೆ ಅವನಿಗೆ ಉದ್ರೇಕವು ಕೆರಳಿ ಆವನು ಹುಚ್ಚನಂತೆ ಕೂಗಾಡ ತೊಡಗಿದ. ಆದರೆ ಕ್ಷಣಕಾಲದಲ್ಲೆ ಅವನ ಮನಸ್ಸು ಸ್ಥಿಮಿತಕ್ಕೆ ಬಂದಿತು. ಆಗ ಅವನು ನಿಟ್ಟು ಸಿರುಬಿಟ್ಟ. ನನ್ನಂತೆಯೇ ತಾನೂ ಪ್ರೇಮದ ಬಯಕೆ ಈಡೇರದೆ ಬಳಲು ತಿದ್ದಂತೆ ನನಗೆ ಭಾಸವಾಯಿತು. ಪರಸ್ಪರವಾದ ಆ ಸಂಕಟದ ಸಂದರ್ಭಗಳು ನಮ್ಮಿಬ್ಬರನ್ನೂ ಒಬ್ಬನ ಬಳಿ ಮತ್ತೊಬ್ಬನನ್ನು ಹತ್ತಹತ್ತಿರಕ್ಕೆ ಎಳೆದುವು. ಅವನು ತನ್ನ ಚಿತ್ತಕ್ಕೆ ಶಾಂತತೆಯನ್ನು ತಂದುಕೊಂಡು ಅತ್ಯಾಚಾರಕ್ಕೆ ಮನ ಸೋಲದೆ ಇದ್ದ ಆ ಕಾಲವನ್ನು ಕಂಡುಕೊಂಡೆ. ಆಗ ನಾನು ಅವನಲ್ಲಿ ದೈನ್ಯ ವಾಗಿ ಹೇಳಿಕೊಂಡೆ:

"ನನ್ನ ಎಲ್ಲ ವಿದ್ಯಾಮಾನಗಳನ್ನು ಮುಚ್ಚುಮರೆಯಿಲ್ಲದೆ ನಾನು ನಿನ್ನಲ್ಲಿ ಹೇಳಿಕೊಂಡೆ. ಈಗ ಮಹಾಶಯ! ನಿನ್ನ ಕಥೆಯನ್ನು ನಾನು ಕೇಳಲು ಕುತೂಹಲನಾಗಿದ್ದೇನೆ. ನಿನ್ನ ಕಥೆಯನ್ನು ಕೇಳಿ ನಿನ್ನ ಯಾತನೆಗಳೇನೆಂದು ಅರಿತುಕೊಂಡ ಮೇಲೆ ನನ್ನ ಕೈಲಾದ ಸಹಾಯವನ್ನು ನಾನು ನಿನಗೆ ಮಾಡು ತ್ತೇನೆ. ಆ ಯಾತನೆಗಳಿಂದ ನೀನು ಮುಕ್ತಿ ಹೊಂದುವ ವಿಧಾನಗಳನ್ನೂ ಪರ್ಯಾಲೋಚಿಸುತ್ತೇನೆ."

ಅವನಿಗಾಗಿ ನಾನು ತೋರಿಸಿದ ಮರುಕಕ್ಕಾಗಿ, ನಾವನಿಗೆ ಒತ್ತಾಸೆ ಮಾಡುತ್ತೇನೆಂದು ಕೊಟ್ಟ ಭರವಸೆಗಾಗಿ ಅವನು ನನ್ನನ್ನು ಬಹುವಾಗಿ ವಂದಿಸಿ ತನ್ನ ಬಾಳ ಕಥೆಯನ್ನು ನನ್ನಲ್ಲಿ ಹೇಳ ತೊಡಗಿದನು.

## ೨೭

"ಕೇಳು, ಸ್ನೇಹಿತನೇ!'' ಸಿಮ್ ರೋಜ್ ರಾಜಕುಮಾರನು ಹೇಳಿದನು. "ಕೇಳು, ನನಗೆ ನೆನಪಿದ್ದಷ್ಟು ನನ್ನ ಕಥೆಯನ್ನು ಹೇಳುತ್ತೇನೆ. ಅದನ್ನು ಕೇಳಿ ನೀನು ನನ್ನೊಂದಿಗೆ ಮರುಗದಿರಲಾರೆ.''

ಹೀಗೆನ್ನುತ್ತ ಉದ್ರೇಕಿಯಾದ ತರುಣನು ತನ್ನ ಆತ್ಮಕಥೆಯನ್ನು ನನ್ನಲ್ಲಿ ಹೇಳತೊಡಗಿದನು.

ನಾನು ಈ ಸಿಮ್ ರಾಜ್ಯದ ರಾಜಕುಮಾರ. ಈ ದೇಶದ ಅರಸನು ನನ್ನ ತಂದೆ. ನನ್ನ ಜನನ ಕಾಲದಲ್ಲಿ ಆತನು ಈ ದೇಶದ ಸುಪ್ರಸಿದ್ಧ ಜ್ಯೋತಿಷ್ಯರನ್ನೂ, ಪಂಡಿತರನ್ನೂ, ಭವಿಷ್ಯ ನುಡಿಯುವವರನ್ನೂ ತನ್ನ ಬಳಿ ಕರೆಸಿಕೊಂಡು, ನನ್ನ ಜಾತಕವನ್ನು ಸಿದ್ಧಗೊಳಿಸಬೇಕೆಂದೂ, ಗ್ರಹಗಳ ಗೋಚಾರ ರೀತಿಯಾಗಿ ನನ್ನ ಕಷ್ಟ ನಷ್ಟಗಳನ್ನು ಕುರಿತು ಸ್ಪಷ್ಟವಾಗಿ ಸೂಚನೆಗಳನ್ನು ಕೊಡಬೇಕೆಂದೂ ಅಜ್ಞಾಪಿಸಿದನು. ಅವರೆಲ್ಲ ರಾಜಾಸ್ಥಾನದಲ್ಲಿ ಸಭೆಸೇರಿದರು. ತಮತಮಗೆ ತಿಳಿದಷ್ಟು ನನ್ನ ಭವಿಷ್ಯವನ್ನು ಒಬ್ಬೊಬ್ಬರೂ ಪ್ರತ್ಯೇಕವಾಗಿ ಕಂಡುಹಿಡಿದುಕೊಂಡರು. ಬಳಿಕ ಒಬ್ಬರೊಡನೊಬ್ಬರು ಕಲೆತು ತಮ ತಮಗೆ ತೋರಿದುದನ್ನು ಕುರಿತು ಪ್ರಸ್ತಾಪಿಸಿ ಚರ್ಚೆ ಮಾಡಿದರು. ಕೊನೆಯಲ್ಲಿ ಅವರೆಲ್ಲ ನನ್ನ ಭವಿಷ್ಯವನ್ನು ಕುರಿತು ಒಮ್ಮತದಿಂದ ಒಂದು ನಿರ್ಧಾರಕ್ಕೆ ಬಂದರು. ಅದನ್ನು ರಾಜನಾದ ನನ್ನ ತಂದೆಯಲ್ಲಿ ಮುಂಬರುವ ತೆರನೆ ನಿವೇದಿಸಿಕೊಂಡರು:

"ದಯಾಮಯನಾದ ಭಗವಂತನ ಕೃಪೆಯಿಂದ ರಾಜಕುಮಾರನು ಉತ್ಕೃಷ್ಟ ಗ್ರಹ ದೆಶೆಯಲ್ಲಿ ಜನ್ಮ ತಾಳಿದ್ದಾನೆ. ಎಲ್ಲವೂ ಸರಿಯಾಗಿ ನಡೆದು ಬಂದರೆ ಆತನು ಅಲೆಕ್ಸಾಂಡರಿನಂತೆ ಯುದ್ಧದಲ್ಲಿಯೂ, ನೌಷಿರವಾನನಂತೆ ನ್ಯಾಯ ನಿರೂಪಣೆಯಲ್ಲಿಯೂ ವಿಖ್ಯಾತನಾಗಬೇಕು. ಅವನು ಕಲಾಶಾಸ್ತ್ರ

ಗಳಲ್ಲಿಯೂ, ವಿಜ್ಞಾನ ಶಾಸ್ತ್ರಗಳಲ್ಲಿಯೂ, ಏಕೆ? ಎಲ್ಲ ಬಗೆಯ ಜ್ಞಾನಮಾರ್ಗದಲ್ಲಿಯೂ, ಉದ್ದಂಡ ಪಂಡಿತನಾಗುತ್ತಾನೆ. ಅವನು ಯಾವುದೇ ಕೆಲಸಕ್ಕೆ ಕೈಹಾಕಲಿ ಅದನ್ನು ಸ್ಪಷ್ಟವಾಗಿಯೂ, ಪರಿಪೂರ್ಣವಾಗಿಯೂ, ನೆರವೇರಿಸುತ್ತಾನೆ. ಹತೀಮನ ಉದಾರತೆಯನ್ನೂ ರುಸ್ತುಮನ ಶೌರ್ಯವನ್ನೂ ಜನರು ಮರೆತು ಬಿಡುವಷ್ಟು ಅತಿಶಯ ಪ್ರಮಾಣದಲ್ಲಿ ಇವನು ಪ್ರಖ್ಯಾತನಾಗಿ ಎಲ್ಲರ ಬಾಯಲ್ಲೂ ಇವನ ಹೆಸರೇ ಉಚ್ಚರಿಸಪಟ್ಟು ಶ್ಲಾಘಿಸಲ್ಪಡುತ್ತದೆ.

ಆದರೆ ಈ ಎಲ್ಲ ತೆರನಾದ ಅಭ್ಯುದಯ ಸಾಧಕ ಕೀರ್ತಿ ವರ್ಧಕ ಅಂಶಗಳೂ ಒಂದೇ ಒಂದು ಅತಿಶಯ ವಿಚಾರವನ್ನು ಹೊಂದಿಕೊಂಡಿವೆ. ಅದಾಗಿ, ಅವನಿಗೆ ಹದಿನಾಲ್ಕು ವಯಸ್ಸು ಮುಗಿಯುವ ವರೆಗೂ ಅವನೂ ಸೂರ್ಯ ಚಂದ್ರರ ಬೆಳಕನ್ನೇ ನೋಡಬಾರದು. ಹಾಗೆನಾದರೂ ಅವನು ನೋಡಿದಲ್ಲಿ ಭಗವದನುಗ್ರಹದಿಂದ ಅವನಿಗುಂಟಾಗಬೇಕಾಗಿರುವ ಗ್ರಹಗಳ ಉತ್ತಮ ಫಲಗಳು ನಾಶವಾಗಿ ಹೋಗುತ್ತವೆ. ಅವನು ಹುಚ್ಚನಾಗಿ ಅನೇಕ ಜನರ ರಕ್ತವನ್ನು ಸುರಿಸುತ್ತಾನೆ. ಜನಸಮುದಾಯದಲ್ಲಿ ಕಲೆತು ಬಾಳುವಷ್ಟು ಸಹನೆ ಅವನಿಗಿರುವುದಿಲ್ಲ. ಬದಲಾಗಿ ಅಡವಿಗೆ ಓಡಿಹೋಗಿ ಮೃಗಪಕ್ಷಿಗಳೊಂದಿಗೆ ಬೆರೆತು ಬೆಳೆಯುತ್ತಾನೆ. ಆದುದರಿಂದ ಹಗಲು ಸೂರ್ಯನನ್ನಾಗಲಿ, ರಾತ್ರಿ ಚಂದ್ರನನ್ನಾಗಲಿ, ನಭೋಮಂಡಲದ ನಕ್ಷತ್ರಗಳನ್ನಾಗಲಿ ಅವನು ನೋಡದಂತೆ ತಡೆದಿಡಬೇಕು. ಎಂದ ಮೇಲೆ ಹದಿನಾಲ್ಕು ವರ್ಷಗಳ ಕಾಲ ಅವನು ಸೂರ್ಯ ಚಂದ್ರರ ಕಿರಣಕ್ಕೆ ಪ್ರವೇಶವಿಲ್ಲದ ಸ್ಥಳದಲ್ಲಿ ಏಕಾಂತ ವಾಸಮಾಡಬೇಕು. ಹಾಗೆ ಹದಿನಾಲ್ಕು ವರ್ಷಗಳನ್ನು ದಾಟಿದರೆ ಅದರನಂತರ ಅವನು ಪ್ರಖ್ಯಾತ ಪುರುಷನಾಗಿ ರಾಜ್ಯವಾಳುತ್ತ ಅತ್ಯಾತಿಶಯ ಸುಖ ಸಂತೋಷಗಳನ್ನು ಅನುಭವಿಸಬಹುದು."

ಜ್ಯೋತಿಷಗಳು ಒಮ್ಮತದಿಂದ ನುಡಿದ ಈ ಭವಿಷ್ಯವನ್ನು ಕೇಳಿದ ನನ್ನ ತಂದೆ ಈ ಉದ್ಯಾನವನ್ನು ನಿರ್ಮಿಸಿ, ಅದರೊಳಗೆ ನನ್ನ ವಾಸಕ್ಕಾಗಿ ಅನೇಕಾನೇಕ ಕೊಠಡಿಗಳುಳ್ಳ ಈ ಗೃಹವನ್ನೂ ಕಟ್ಟಿಸಿದನು. ನನ್ನ ಪ್ರತ್ಯೇಕ ವಾಸಕ್ಕಾಗಿ, ಒಳಗೆ ಬೆಳಕು ತೂರಿಬರದಂತಿರುವ ಒಂದು ನೆಲಮಾಳಿಗೆಯೂ ಕಟ್ಟಲ್ಪಟ್ಟಿತು. ಕೃತಕ ಬೆಳಕಿನ ಸಹಾಯದಿಂದ ನಾನು ಆ ಗುಹೆಯಲ್ಲೆ ವಾಸಮಾಡ

ತೊಡಗಿದೆ. ನನಗೊಬ್ಬ ಗುರು ನಿಯಮಿತನಾದ. ನಾನು ಏಳು ಭಾಷೆಗಳನ್ನು ಓದಿ ಬರೆಯಲು ಕಲಿತೆ. ಅಂತೆಯೇ ಕುಶಲಕಲೆಗಳಲ್ಲಿಯೂ, ವಿಜ್ಞಾನ ಶಾಸ್ತ್ರಗಳಲ್ಲಿಯೂ ಶಿಕ್ಷಣ ಪಡೆಯುತ್ತ ಬಂದೆ. ನನ್ನ ಪ್ರಪಂಚವೆಲ್ಲ ಆ ಗುಹೆಯಲ್ಲೆ ಅಡಗಿದ್ದಿತು. ಹೊರಗಿನ ಪ್ರಪಂಚವು ಹೇಗಿದೆಯೆಂದು ನಾನು ನೋಡಿದವನೇ ಅಲ್ಲ. ಸಣ್ಣ ಮಗುವಾಗಿದ್ದಾಗ ನನಗೆ ಸೇವಕರು ಗೊಂಬೆಗಳನ್ನೂ, ಹುವ್ವುಗಳನ್ನೂ ತಂದುಕೊಟ್ಟು ನನ್ನ ಮನಸ್ಸನ್ನು ರಂಜಿಸುತ್ತಿದ್ದರು. ಹೇಗೋ ಕಾಲವುತಳ್ಳಿ ನಾನು ಹತ್ತನೆಯ ವಯಸ್ಸಿಗೆ ಬಂದೆ. ಆವೇಳೆಗೆ ಎಷ್ಟೋ ವಿಷಯಗಳನ್ನು ಓದಿ ಕಲಿತಿದ್ದೆ.

ಕೆಲವು ವರ್ಷಗಳನಂತರ ನಾನು ವಾಸಿಸುತ್ತಿದ್ದ ಗುಹೆಯ ಮೇಲ್ಛಾವಣಿಯಿಂದ ಒಂದು ಹೂವು ಕೆಳಗಿಳಿದ ಬಂದಿತು. ನಾನದನ್ನು ನೋಡುತ್ತಿದ್ದಂತೆಯೇ ಅದರ ಆಕಾರವು ಅಧಿಕರಿಸುತ್ತಿತ್ತು. ನಾನದನ್ನು ಹಿಡಿದುಕೊಳ್ಳ ಹೋದೆ. ಆದರೆ ಅದು ನನ್ನಿಂದ ತಪ್ಪಿಸಿಕೊಂಡು ಮತ್ತೆ ಮೇಲ್ಛಾವಣಿಯ ಕಡೆ ಹೋಯಿತು. ಅದನ್ನೇ ನಾನು ಎವೆಯಿಕ್ಕದೆ ನೋಡುತ್ತಿದ್ದೆ. ಆಗ ಯಾರೋ ಗಟ್ಟಿಯಾಗಿ ನಕ್ಕದ್ದು ನನ್ನ ಕಿವಿಗಳಲ್ಲಿ ಬಿತ್ತು. ಮೇಲ್ಛಾವಣಿಯು ಬಿರುಕು ಬಿಟ್ಟು ಅದರ ಮೂಲಕ ಅತ್ಯಂತ ಸುಂದರ ಸ್ವರೂಪೆಯಾದ ಕನ್ಯೆಯೊಬ್ಬಳು ಕಾಣಿಸಿಕೊಂಡಳು. ಅವಳ ಪ್ರಕಾಶವನ್ನು ಕಂಡು ನನ್ನ ಕಣ್ಣುಗಳು ಕ್ಷಣಕಾಲ ಕುರುಡಾದಂತಾದುವು. ನನಗೆ ಪ್ರಜ್ಞೆಯೂ ತಪ್ಪಿದಂತಾಯಿತು. ಎಚ್ಚೆತ್ತುಕೊಂಡು ಮೇಲೆ ನೋಡುತ್ತೇನೆ: ರತ್ನಖಚಿತವಾದ ಸಿಂಹಾಸನ—ಅದನ್ನು ದೇವಲೋಕದ ಕನ್ನಿಕೆಯರು ಹೆಗಲಮೇಲೆ ಹೊತ್ತಿದ್ದಾರೆ. ಆ ಸಿಂಹಾಸನದಲ್ಲಿ ಮಂಡಿಸಿದ್ದವಳು ವಜ್ರ ವೈಢೂರ್ಯಾದಿ ರತ್ನಗಳಿಂದ ಕೆತ್ತಲ್ಪಟ್ಟ ಪ್ರಜ್ವಲಿತ ಕಿರೀಟವನ್ನು ಧರಿಸಿ, ದಿವ್ಯಾಲಂಕಾರಭರಿತಳಾದ ಒಬ್ಬ ಲಾವಣ್ಯಮಯಿ! ಸಿಂಹಾಸನವು ಮೇಲ್ಛಾವಣಿಯಿಂದ ಕೆಳಗಿಳಿದು ನೆಲಕ್ಕೆ ಬಂದಿತು.

ಸಿಂಹಾಸನದಮೇಲೆ ಕುಳಿತಿದ್ದವಳು ಸ್ಫುರದ್ರೂಪಿಣಿಯಾದ ಒಬ್ಬ ದೇವಕನ್ನಿಕೆ. ಹಾಗೆಂದು ನನಗೆ ಆಮೇಲೆ ತಿಳಿಯಿತು. ಅವಳು ಸನ್ನೆ ಮಾಡಿ ನನ್ನನ್ನು ತನ್ನ ಬಳಿ ಕರೆದು ಸಿಂಹಾಸನದಲ್ಲಿ ತನ್ನಪಕ್ಕದಲ್ಲಿ ಕುಳ್ಳಿರಿಸಿಕೊಂಡಳು ಅವಳು ನನ್ನನ್ನು ಪ್ರೀತಿಪುರಸ್ಸರವಾಗಿ ಮಾತನಾಡಿಸಿ, ನನ್ನ ಗಲ್ಲಕ್ಕೆ ಮುತ್ತಿಟ್ಟು

ಹೇಳಿದಳು : "ಮಾನವಜಾತಿ ವಿಶ್ವಾಸಘಾತುಕರಿಂದ ತುಂಬಿದೆ. ಆದರೂ ನಾನು ನಿನ್ನನ್ನು ನನ್ನಂತರಂಗದಿಂದ ಪ್ರೀತಿಸುತ್ತೇನೆ." ನಾನು ಮೋಹಪರವಶನಾದೆ. ನಿಜವಾಗಿ ಆನಂದವನ್ನು ಸವಿದುದು ಅಂದೇ ಎಂದು ನನಗೆ ಭಾಸವಾಯಿತು. ಅಂದಿನ ದಿನ ನನಗುಂಟಾದ ಅನುಭವದ ಬಂಧನದಿಂದ ಇದುವರೆಗೂ ನಾನು ಬಿಡಿಸಿಕೊಳ್ಳಲಾರದವನಾಗಿದ್ದೇನೆ.

ಓ ಮಿತ್ರ! ಏನೆಂದು ಹೇಳಲಿ? ಆ ದೇವಕನ್ನಿಕೆಯ ಬರುವಿಕೆಯೇ ನನ್ನೆಲ್ಲ ಸಹನಾತೀತ ಯಾತನೆಗಳು ಆರಂಭವಾದುದಕ್ಕೆ ಕುರುಹು ನನ್ನ ಈಗಿನ ಪರಿಸ್ಥಿತಿ—ನೀನು ನೋಡುತ್ತಿರುವ ಪರಿಸ್ಥಿತಿ—ಅವಳು ಬಂದಂದಿನಿಂದ ಆರಂಭ ವಾದದ್ದೇ. ಅದರ ಪರಿಣಾಮವಾಗಿಯೇ ನಾನೀಗ ಈ ದುಸ್ಥಿತಿಯಲ್ಲಿರುವುದು. ಈ ಮೊದಲೆ ಹೇಳಿದಂತೆ ನಾನು ಸಿಂಹಾಸನದಲ್ಲಿ ದೇವಕನ್ನಿಕೆಯ ಬಳಿ ಕುಳಿತಿದ್ದೆನಷ್ಟೆ. ನಾವಿಬ್ಬರೂ ಅತ್ಯಂತ ಸುಖ ಸಂತೋಷಗಳಿಂದ ನಲಿದಾಡಿ ದೆವು. ಅಷ್ಟರಲ್ಲಿ ಆಕಸ್ಮಿಕವಾಗಿ ಇನ್ನೂ ನಾಲ್ಕು ಜನ ದೇವಕನ್ನಿಕೆಯರು ನೆಲಮಾಳಿಗೆಯ ಮೇಲ್ಛಾವಣಿಯಿಂದ ಕೆಳಗಿಳಿದು ಬಂದು ನನ್ನ ನಚ್ಚಿನ ಗೆಳತಿಯ ಕಿವಿಯಲ್ಲಿ ಏನೋ ಪಿಸುಮಾತುಗಳನ್ನು ಹೇಳಿದರು : ಅದನ್ನು ಕೇಳಿ ವಿವರ್ಣಳಾಗಿ ಅವಳೆಂದಳು : "ಪ್ರಾಣಪ್ರಿಯ! ನಾನು ಇಲ್ಲೆ ನಿನ್ನೊಡನೆ ನಿಲ್ಲಬೇಕು ಅಥವಾ ನಿನ್ನನ್ನು ನನ್ನೊಡನೆ ಕರೆದೊಯ್ಯಬೇಕು ಎಂದು ನಾನು ಬಹಳವಾಗಿ ಬಯಸಿದ್ದೆ. ಆದರೆ ವಿಧಿ ಶಾಸನದಿಂದ ನನಗೆ ಎರಡೂ ಸಾಧ್ಯ ವಿಲ್ಲದುದಾಗಿದೆ. ಪ್ರೇಮದ ಕಣಜವೆ! ಪ್ರಣಾಮ! ಪ್ರಣಾಮ! ಹೊರಡು ತ್ತೇನೆ...............ದೇವರು ನಿನ್ನನ್ನು ಕಾಪಾಡಲಿ!"

"ಓ ಮೋಹಗಾತಿ! ಏನಿವು ನಿನ್ನ ಕ್ರೂರವಾದ ಮಾತುಗಳು? ನಾವು ಮತ್ತೆ ಸೇರಬೇಕು. ನೀನು ಬೇಗನೆ ಬಂದುಬಿಡುವೆಯಾದರೆ ನಾನು ಜೀವ ದೊಂದಿಗೆ ಇರುತ್ತೇನೆ. ಇಲ್ಲದಿದ್ದರೆ ನಾನು ಪ್ರಾಣತ್ಯಾಗ ಮಾಡುತ್ತೇನೆ" ಎಂದು ನಾನು ಅಂಗಲಾಚಿದೆ.

ನನ್ನ ಮಾತುಗಳನ್ನು ಕೇಳಿ ಅವಳು ಮತ್ತೆ ಹೇಳಿದಳು : "ದೇವರು ತಪ್ಪಿಸಲಿ! ಏನು ಅಮಂಗಳ ಮಾತುಗಳಿವು? ಸೈತಾನನ ಕಿವಿಗಳು ಕಿವುಡಾಗಲಿ. ನೀನಾಡಿದ ಅಪಶಬ್ದಗಳನ್ನು ಅವನು ಕೇಳದಿರಲಿ! ಮಾನವರ ಪುಣ್ಯಾಯು

ಸ್ಸಾದ ೧೨೦ ವರ್ಷಗಳನ್ನು ನೀನು ಬಾಳುವೆಯಂತೆ ! ಬದುಕಿದ್ದರೆ ನಾವಿಬ್ಬರೂ ಮತ್ತೆ ಕಲೆತು ಸುಖಿಸೋಣ."

"ಸುಂದರ ಮನೋಹರೆ! ಹಾಗಾದರೆ ನೀನಾರು ? ನಿನ್ನ ಹೆಸರೇನು ? ನೀನಿರುವುದೆಲ್ಲಿ ? ವಿಶದವಾಗಿ ಹೇಳು. ನೀನು ಬಾರದಿದ್ದರೆ— ಕಷ್ಟನಷ್ಟಗಳನ್ನು ಲೆಕ್ಕಿಸದೆ ನಾನೇ ನಿನ್ನನ್ನು ಹುಡುಕಿಕೊಂಡು ಬರುತ್ತೇನೆ."

ನನ್ನ ಮಾತಿಗೆ ಪ್ರತ್ಯುತ್ತರವಾಗಿ ಅವಳು ಹೇಳಿದಳು :

"ನಾನು ಜಿನ್ ರಾಜನ ಕುಮಾರಿ. ಪ್ರಪಂಚವನ್ನು ಸುತ್ತುಗಟ್ಟಿರುವ ಕಾಫ್ ಪರ್ವತಶ್ರೇಣಿಯಲ್ಲಿ ನನ್ನ ವಾಸ."

ಹೀಗೆಂದು ಹೇಳಿ ಸಿಂಹಾಸನವನ್ನು ಮೇಲೆ ಹತ್ತಿಸಿಕೊಂಡು ಅವಳು ಗುಹೆಯಿಂದ ಹೊರಗೆ ಹೊರಟುಹೋದಳು.

ಸಿಂಹಾಸನವು ನೆಲದಿಂದ 'ಮೆಲ್ಲಮೆಲ್ಲನೆ ಮೇಲೇಳುತ್ತಿದ್ದಾಗ ನಾನು ಅವಳನ್ನು ನಿಟ್ಟಿಸಿ ನೋಡುತ್ತಿದ್ದಂತೆಯೇ ಅವಳ ಆ ವಿಶಾಲಾಕ್ಷಿಗಳು ನನ್ನನ್ನೇ ನಿಟ್ಟಿಸಿ ನೋಡುತ್ತಿದ್ದುವು. ನನ್ನಲ್ಲಿ ಅವಳಿಗೆ ಪರಿಪೂರ್ಣ ಪ್ರೇಮವಿತ್ತೆಂದೂ, ವಿಧಿಯಿಲ್ಲದೆ ಅವಳು ನನ್ನನ್ನು ಬಿಟ್ಟಗಲುತ್ತಿರುವಳೆಂದೂ ಅವಳ ಆ ದೀನದೃಷ್ಟಿಯಿಂದ ನಾನು ಕಂಡುಕೊಂಡೆ. ಇದರಿಂದ ನನ್ನ ಯಾತನೆಯು ಇದ್ದದ್ದು ಹೆಚ್ಚಿನದೆನಿಸಿತು. ವಿರಹಾಗ್ನಿಯು ನನ್ನನ್ನು ಬೇಯಿಸತೊಡಗಿತು. ನಾನು ಕಂಗೆಟ್ಟೆ; ಮತಿಭ್ರಮಣವುಂಟಾಯಿತು. ನನ್ನ ಪ್ರಪಂಚವು ಸಂಪೂರ್ಣವಾಗಿ ಕತ್ತಲಿನಿಂದ ಕವಿದುಹೋಯಿತು. ಹುಚ್ಚನಂತೆ ನಾನು ತಲೆಯಮೇಲೆ ಮಣ್ಣೆರಚಿಕೊಂಡೆ ; ನಾನು ಉಟ್ಟುತೊಟ್ಟಿದ್ದ ಬಟ್ಟೆಗಳನ್ನು ಚಿಂದಿಚಿಂದಿಯಾಗಿ ಹರಿದು ಬಿಸಾಕಿದೆ. ಅನ್ನಾಹಾರಗಳನ್ನು ತೊರೆದೆ ; ಪಾನೀಯಗಳನ್ನು ಲಕ್ಷಿಸಲಿಲ್ಲ; ನಾನೇನು ಮಾಡುತ್ತಿದ್ದೆನೆಂಬುದೇ ನನಗೆ ತಿಳಿಯದಾಯಿತು. ನನ್ನೆಲ್ಲ ದೃಷ್ಟಿಯು ನನ್ನಿಂದ ಅಗಲಿಹೋದ ಆ ದೇವಕನ್ನಿಕೆಯಲ್ಲೆ ಲೀನವಾಗಿ ಹೋಯಿತು. ನಾನು ಆಡುತ್ತಿದ್ದುದು—ಮಾಡುತ್ತಿದ್ದುದು ಒಳಿತೋ—ಕೆಡುತೋ ! ನನಗೆ ಅವುಗಳ ವಿವೇಚನೆಯೇ ಅಳಿಸಿಹೋದಂತಾಯಿತು. ನನ್ನ ಮನಸ್ಸಿಗೆ ಇದ್ದಕ್ಕಿದ್ದಂತೆ ಉಂಟಾದ ಈ ಪ್ರಮಾದಕರ ಮಾರ್ಪಾಡನ್ನು ಕೇಳಿ ನನ್ನ ತಂದೆ ಘಾಬರಿಗೊಂಡನು. ತಕ್ಷಣವೇ ಈ ಪ್ರದೇಶಕ್ಕೆ ಹೊರಟುಬಂದನು.

ನನ್ನನ್ನು ನೋಡಿ—ನನ್ನ ಪರಿಸ್ಥಿತಿಗೆ ಏನಾದರೊಂದು ಉಪಶಮನವನ್ನುಂಟು ಮಾಡಬೇಕೆಂದೆಣಿಸಿ ತನಗೆ ಸಲಹೆ ನೀಡಲೋಸುಗ ತನ್ನೊಡನೆ ಪ್ರಧಾನಿ ಪ್ರಮುಖರನ್ನೂ, ಅರಿತು ನುರಿತ ವೈದ್ಯರನ್ನೂ, ನಂಬಿಕೆಗೆ ಪಾತ್ರರಾದ ಜ್ಯೋತಿಷಿಗಳನ್ನೂ, ಮುಲ್ಲಾರನ್ನೂ, ಪವಿತ್ರಾತ್ಮ ಫಕೀರರನ್ನೂ ಕರೆದುಕೊಂಡು ಬಂದನು. ನನ್ನನ್ನು ಕಂಡೊಡನೆಯೆ ಉಕ್ಕಿಬಂದ ತನ್ನ ದುಃಖವನ್ನು ತಾಳ ಲಾರದೆ ಅವನೂ ಬಿಕ್ಕಿಬಿಕ್ಕಿ ಅತ್ತನು. ಅಳುತ್ತ ನನ್ನನ್ನು ತನ್ನೆದೆಗೆ ಬಿಗಿದಪ್ಪಿ ಕೊಂಡನು.

ನನಗೆ ಹಿಡಿದಿದ್ದ ಹುಚ್ಚನ್ನು ಬಿಡಿಸಲು ಅವರೆಲ್ಲ ಏನೇನೋ ಪ್ರಯತ್ನ ಪಟ್ಟರು. ನನ್ನ ಶರೀರಪುಷ್ಟಿಗೂ, ಮೆದುಳನ್ನು ಶಾಂತಗೊಳಿಸುವುದಕ್ಕೂ ವೈದ್ಯರು ಏನೇನೋ ಔಷಧಿಗಳನ್ನು ಬರೆದುಕೊಟ್ಟರು. ಪವಿತ್ರಾತ್ಮ ಫಕೀರರು ಯಂತ್ರ, ತಂತ್ರ, ಮಂತ್ರಗಳನ್ನು ಕಾಗದಗಳಲ್ಲಿ ಬರೆದು, ಕೆಲವನ್ನು ನಾನು ನುಂಗುವಂತೆಯೂ, ಕೆಲವನ್ನು ಮೈಮೇಲೆ ಅಂಟಿಸಿಕೊಳ್ಳುವಂತೆಯೂ ಮಾಡಿದರು. ಮುಲ್ಲಾನರು ನನಗೆ ಹಿಡಿದಿದ್ದ ಸೈತಾನನನ್ನು ಬಿಡಿಸಲು ಪವಿತ್ರ ಮಂತ್ರಗಳನ್ನೂ ಉಚ್ಚರಿಸಿ, ಪ್ರಾರ್ಥನೆಗಳನ್ನು ಹೇಳಿ, ತಮ್ಮ ಬಿಸಿಯುಸಿರನ್ನು ನನ್ನಮೇಲೆ ಊದಿದರು. ಜ್ಯೋತಿಷಿಗಳು ಗ್ರಹಚಲನವು ನನಗೆ ವಿರುದ್ಧ ವಾದುದರಿಂದ ಈರೀತಿಯಾಯಿತೆಂದೂ, ನನ್ನ ತಂದೆಯು ಅವರಿಗೆಲ್ಲ ಯಥೇಚ್ಛ ವಾಗಿ ದಕ್ಷಿಣೆಗಳನ್ನು ಕೊಟ್ಟು ಗ್ರಹಗಳನ್ನು ತೃಪ್ತಿಪಡಿಸಬೇಕೆಂದೂ ಸಲಹೆ ಯಿತ್ತರು. ಹೀಗೆ ಮಾಡುವುದರಿಂದ ಗ್ರಹಗಳು ಬಲಹೀನವಾಗಿ, ನನ್ನನ್ನಾ ವರಿಸಿದ ಕೇಡಿನ ಪರಿಮಿತಿಯು ಕಡಿಮೆಯಾದೀತೆಂದೂ ಅವರು ಕಂಠೋಕ್ತ ವಾಗಿ ಸಾರಿದರು. ಅವರವರು ತಮತಮಗೆ ತಿಳಿದ ಪರಿಹಾರಗಳನ್ನು ಸೂಚಿಸಿ ದರು. ಆದರೆ ನಾನು ಅನುಭವಿಸುತ್ತಿದ್ದ ಯಾತನೆ ಏನೆಂಬುದನ್ನು ನಾನೊ ಬ್ಬನು ಮಾತ್ರ ಸ್ಪಷ್ಟವಾಗಿ ತಿಳಿದುಕೊಂಡಿದ್ದೆ. ಆ ಯಾತನೆಗಳು ನಾನು ಹಗಲಿರುಳೂ ಕಿರಿಚಿ–ಅರಚಿ–ಕಂಗೆಟ್ಟುಹೋಗುವಂತೆ ಮಾಡಿಬಿಟ್ಟದ್ದುವು.

ಈ ರೀತಿ ನಾನು ಮೂರು ವರ್ಷಕಾಲ ಚಿಂತಾಗ್ನಿಯಿಂದ ಬೆಂದು ಭಸ್ಮವಾ ಗುತ್ತಿದ್ದೆ. ನಾಲ್ಕನೆಯ ವರ್ಷದಲ್ಲಿ ರಾಜನಾದ ನನ್ನತಂದೆಗೆ ಚಿರಪರಿಚಿತನಾದ ಪ್ರಪಂಚದ ನಾನಾ ಭಾಗಗಳಲ್ಲಿ ನಾನಾ ಬಗೆಯ ಜನರ ನಡೆನುಡಿ ಆಚಾರ

ವ್ಯವಹಾರಗಳನ್ನು ಬಲ್ಲವನು ಆಗಿದ್ದ ಒಬ್ಬ ವಿಖ್ಯಾತ ವಿದೇಶೀ ವ್ಯಾಪಾರಿಯು ನಮ್ಮ ನಿಮ್‌ರೋಜಿಗೆ ಬಂದ. ಆತನನ್ನು ಕುರಿತು ನನ್ನ ತಂದೆ "ನೀವಿಷ್ಟು ದೇಶಗಳನ್ನೂ, ಸುತ್ತಿ ಇಷ್ಟು ಜನರನ್ನು ಕಂಡಿದ್ದೀರಲ್ಲ—ನಮ್ಮ ಕುಮಾರನ ವಿಚಿತ್ರ ವ್ಯಾಧಿಯನ್ನು ಗುಣಹೊಂದಿಸಬಲ್ಲ ಯಾವನಾದರೂ ಅನುಭವಸ್ಥ ವೈದ್ಯನನ್ನು ನೀವು ಬಲ್ಲರಾ ? ಈ ವ್ಯಾಧಿಯು ಗುಣ ಹೊಂದುವುದಾದರೆ ಸರಿ–ಅದಕ್ಕಾಗಿ ನಾನು ಯಾವ ಶ್ರಮ ವ್ಯಯಗಳನ್ನೂ ಲೆಕ್ಕಿಸುವುದಿಲ್ಲ"ವೆಂದು ಹೇಳಿದ. ಆ ವ್ಯಾಪಾರಿಯು ಸ್ವಲ್ಪಹೊತ್ತು ಯೋಚಿಸಿ ನನ್ನ ತಂದೆಯಲ್ಲಿ ಹೇಳಿದ್ದೇನೆಂದರೆ :

"ಪ್ರಭುಗಳಿಗೆ ವಿಜಯವಾಗಲಿ ! ರಾಜಕುಮಾರನನ್ನು ಪೀಡಿಸುತ್ತಿರುವ ಪ್ರಬಲವ್ಯಾಧಿಯನ್ನು ನಿವೃತ್ತಿಗೊಳಿಸಬಲ್ಲ ಒಬ್ಬ ಮಾನವ ಶ್ರೇಷ್ಠನನು ನಾನು ಬಲ್ಲೆ. ಹಿಂದೂಸ್ಥಾನದಲ್ಲಿ ಒಂದು ವಿಶಾಲವಾದ ನದಿಯ ನಡುವೆ ಒಂದು ದ್ವೀಪವೊಂದುಂಟು. ಅಲ್ಲಿ ಜಟಾಧಾರಿಯಾದ ಗೋಸಾಯಿಯೊಬ್ಬನು ಮಹದೇವನಿಗೊಂದು ದೇವಾಲಯವನ್ನು ಕಟ್ಟಿ ಅದರಲ್ಲಿ ವಾಸಿಸುತ್ತಿರುವನು. "ಹರಹರ ಮಹಾದೇವ ! ಶಂಭೋ! ಶಂಕರ ಮಹಾದೇವ!" ಎಂದು ತಪಸ್ಸನ್ನು ಆಚರಿಸುತ್ತಿದ್ದು ವರ್ಷಕ್ಕೊಮ್ಮೆ ಹೊರಗೆ ಬಂದು ಪವಿತ್ರ ನದಿಯಲ್ಲಿ ಮಿಂದು, ಭಸ್ಮವನ್ನು ಧರಿಸಿ, ನದಿಯ ದಡದಲ್ಲಿ ಕುಳಿತುಕೊಳ್ಳುವನು. ಗೋಸಾಯಿ ಹೊರಗೆ ಬರುವುದನ್ನೇ ನಿರೀಕ್ಷಿಸುತ್ತ ಸಾವಿರಾರು ಜನರು ದೇವಸ್ಥಾನದ ಸುತ್ತಲೂ ತಿಂಗಳು ತಿಂಗಳೆರಡು ಕಾದಿರುತ್ತಾರೆ. ಸ್ನಾನ ಮಾಡಿ, ಭಸ್ಮಧಾರಿ ಯಾಗಿ, ಶಂಕರಮಹಾದೇವ ! ಎನ್ನುತ್ತ ಕುಳಿತುಕೊಂಡಾಗ ಯಾವ ಯಾವ ಊರುಗಳಿಂದಲೋ, ಯಾವ ಯಾವ ವ್ಯಥೆ ವ್ಯಾಧಿಗಳಿಂದಲೋ ನೊಂದು ನರಳುತ್ತಿರುವ ಜನರು ಗೋಸಾಯಿಯ ಪಾದವನ್ನು ಮುಟ್ಟಿ ನಮಸ್ಕರಿಸುತ್ತಾರೆ. ತನ್ನ ಕಮಂಡಲದಲ್ಲಿ ತುಂಬಿಕೊಂಡು ಬಂದಿರುವ ಪವಿತ್ರ ನದಿಯ ನೀರನ್ನು ಗೋಸಾಯಿಯು ಅವರಮೇಲೆ ಪ್ರೋಕ್ಷಿಸುತ್ತಾನೆ. ಅದು ದೆವ್ವವಾಗಿರಲಿ, ಪೀಡೆಯಾಗಿರಲಿ, ಪಿಶಾಚಿಯಾಗಿರಲಿ, ಹುಚ್ಚಾಗಿರಲಿ, ತೊನ್ನಾಗಿರಲಿ ಕುಷ್ಠವಾಗಿರಲಿ, ಕ್ಷಯವಾಗಿರಲಿ, ಯಾವುದಿದ್ದರೂ ಹಿಡಿದವರನ್ನು ಬಿಟ್ಟಗಲಿ ಹೇಳದೆ ಕೇಳದೆ ಓಡಿಹೋಗಬೇಕಾದುದೇ ! ಗೋಸಾಯಿಯ ಆತ್ಮ ಶಕ್ತಿಯು

ಅಷ್ಟೊಂದು ಪ್ರಬಲತರವಾದದ್ದು! ನೀರಿನ ಪ್ರೋಕ್ಷಣೆಯಲ್ಲದೆ ಇನ್ನು ಕೆಲವರಿಗೆ ಕಾಡುಮೂಲಿಕೆಗಳಿಂದ ಆತನು ಔಷಧಿಗಳನ್ನೂ ಮಾಡಿಕೊಡುತ್ತಾನೆ. ಅದೇನು ದೈವಶಕ್ತಿ ಆತನಲ್ಲಿ ಅಡಗಿದೆಯೋ ಕಾಣೆ. ಅತನು ಗುಣಪಡಿಸದ ವ್ಯಾಧಿಯಿಲ್ಲ; ನಿವಾರಿಸದ ಬೇನೆಯಿಲ್ಲ. ರಾಜರ ಅಪ್ಪಣೆಯಾಗುವುದಾದರೆ ನಾನು ರಾಜಕುಮಾರನನ್ನು ಆ ಪವಿತ್ರಾತ್ಮನ ಬಳಿ ಕರೆದುಕೊಂಡು ಹೋಗಿಬರುತ್ತೇನೆ.

ಅರಸನಿಗೆ—ಅದಾಗಿ, ನನ್ನ ತಂದೆಗೆ—ವ್ಯಾಪಾರಿಯ ಸಲಹೆಯು ಸಂತೋಷವನ್ನುಂಟುಮಾಡಿತೆಂದು ಬೇರೆ ಹೇಳಬೇಕೆ? ತನಗೆ ನಂಬಿಕಸ್ಥನಾದ ಒಬ್ಬ ಪ್ರಧಾನಿಯೊಂದಿಗೆ ನನ್ನನ್ನೂ ವ್ಯಾಪಾರಿಯನ್ನೂ ಗೋಸಾಯಿಯ ಬಳಿ ಕಳುಹಿಸಿಕೊಟ್ಟನು. ಅರಸನಾದುದರಿಂದ ನನ್ನ ತಂದೆಗೇ ಯಾವುದಕ್ಕೇನು ಕಡಿಮೆಯಾಗಿದ್ದಿತು? ಹೆಚ್ಚುಕಾಲದ ಪ್ರಯಾಣಕ್ಕೆ ಬೇಕಾಗಬಹುದಾದ ಎಲ್ಲ ಸಲಕರಣೆ ಸಾಮಗ್ರಿಗಳನ್ನೂ ದೋಣಿಗಳಲ್ಲಿ ಹಾಕಿ-ನಮ್ಮನ್ನು ಹರಸಿ ಕಳುಹಿಸಿಕೊಟ್ಟನು. ಎಷ್ಟೋದೂರ—ಎಷ್ಟೋಕಾಲ ಪ್ರಯಾಣಮಾಡಿದ ಬಳಿಕ ನಾವು ಗೋಸಾಯಿಯ ವಾಸಸ್ಥಳವಾದ ಆ ದ್ವೀಪವನ್ನು ಮುಟ್ಟಿದೆವು. ಊರುಗಳ, ಊಟಗಳ, ವಾಯುಗುಣದ, ವಾತಾವರಣದ ವಿವಿಧ ಬದಲಾವಣೆಗಳಿಂದ ನನ್ನ ಮನಸ್ಸು ಇದ್ದುದರಲ್ಲಿ ಎಷ್ಟೋ ಸ್ಥಿಮಿತವಾಯಿತು. ಅಲ್ಪಸ್ವಲ್ಪ ಸಂತೋಷದ ಚಿಹ್ನೆಗಳೂ ಮೂಡಿದುವು. ಆದರೆ ಮೌನವು ನನ್ನನ್ನೂ ಏರಿಸಿತು. ನಾನದನ್ನು ಕಿತ್ತೊಗೆಯಲಾರದಾದೆ? ಯಾರೊಂದಿಗೆ ಮಾತನಾಡಲಿ? ಏನನ್ನು ಕುರಿತು ಮಾತನಾಡಲಿ? ಆ ಸುಂದರ ಸ್ವರದ್ರೂಪಿಣಿ ದೇವಕನ್ನಿಕೆಯನ್ನುಳಿದು ನನ್ನೆದೆಯಲ್ಲಿ ಬೇರಾವುದಕ್ಕೂ ಸ್ಥಳವಿರಲಿಲ್ಲ. ಯಾರೊಂದಿಗೂ ಮಾತನಾಡುತ್ತಿರಲಿಲ್ಲವಾದರೂ ನನ್ನಷ್ಟಕ್ಕೆ ನಾನು ನನ್ನ ದುರದೃಷ್ಟವನ್ನು ಕುರಿತು ಶೋಕಿಸುತ್ತಿದ್ದೆ. ಒಮ್ಮೊಮ್ಮೆ ಬಿಕ್ಕಿ ಅಳುತ್ತಲೂ ಇದ್ದೆ. ಒಂದೊಂದು ಸಲ ಎಷ್ಟು ಬಗೆಯಲ್ಲಿ ಸ್ಮರಿಸಿಕೊಂಡರೂ ಆ ಮನಮೋಹಕ ವನಿತೆಯ ಸುಂದರವದನಾರವಿಂದದ ಚಿತ್ರವೇ ಮರೆತುಹೋಗುತ್ತಿತ್ತು. ಅವಳು ಸಮಾನ ರಹಿತ ಸುಂದರಿಯೆಂದು ಗೊತ್ತಿದ್ದರೂ, ಅವಳ ಸ್ವರೂಪವು ಮರೆತು ಕಣ್ಮರೆಯಾಗಿಬಿಡುತ್ತಿತ್ತು. ಆಗಲೇ ನನ್ನ ದುಃಖವು ಒಂದಕ್ಕೆ ನೂರ್ಮಡಿಯಾಗಿ ನನ್ನ ಅಳುವು ಅವಳನ್ನು ಮಿಂಚುತ್ತಿತ್ತು.

ನಾವು ಹಿಂದೂಸ್ಥಾನದ-ಆ ದ್ವೀಪವನ್ನು, ಗುಡ್ಡದ ತಪ್ಪಲಿನಲ್ಲಿ-ನದೀ ತೀರದಲ್ಲಿ, ಮಹದೇವ ದೇವಾಲಯದ ಬಳಿ ಸೇರಿ ಎರಡು ಮೂರು ತಿಂಗಳಾದ ಮೇಲೆ ಒಂದಾನೊಂದು ದಿವಸ ಗೋಸಾಯಿಯು ಹೊರಗೆ ಬಂದನು. ಆ ವೇಳೆಗೆ ಅಲ್ಲಿ ಸುಮಾರು ಐದಾರು ಸಾವಿರ ವ್ಯಾಧಿಪೀಡಿತರೂ, ವ್ಯಥೆಯಿಂದ ದಗ್ಧರಾದವರೂ ಕಿಕ್ಕಿರಿದು ನೆರೆದು ಗೋಸಾಯಿಯ ದರ್ಶನವನ್ನೇ ಎದಿರು ನೋಡುತ್ತಿದ್ದರು. ನದಿಯ ದಡದಲ್ಲಿ ಒಂದು ಅಗಲವಾದ ಬಂಡೆ ಅರುಣೋದಯದಲ್ಲಿ ಪ್ರಭಾಕರನು ಪ್ರಶಾಂತ ಕಿರಣಗಳೊಂದಿಗೆ ಪ್ರಪಂಚದ ಮಾನವರ ದೃಷ್ಟಿಗೆ ಗೋಚರನಾಗುವಂತೆ, ಆತ್ಮ ಪ್ರಭೆಯಿಂದ ವಿರಾಜಿಸುತ್ತಿದ್ದ ಮಹದುಪಕಾರಿಯಾದ ದೈವಜ್ಞ ಯೋಗೀಶ್ವರನು ಅತಿ ಪ್ರಾತಃಕಾಲದಲ್ಲೇ ನದಿಯಲ್ಲಿ ಮಿಂದು, ಭಸ್ಮವನ್ನು ಧರಿಸಿ, ಆ ಬಂಡೆಯಮೇಲೆ ಕಾಣಿಸಿಕೊಂಡನು. ಅವನು ಕೇವಲ ಒಂದು ಲಂಗೋಟಿಯನ್ನು ಮಟ್ಟಿಗೆ ಧರಿಸಿದ್ದನು. ಅವನ ಜಡೆ ಆಲದ ಮರದ ಬಿಳಿಲಂತೆ ಇದ್ದಿತು. ತೇಜಸ್ಸಿನಿಂದ ಕೂಡಿದ ಅವನ ಕಣ್ಣೆರಡೂ ಮಿಂಚಿನಂತೆ ಹೊಳೆಯುತ್ತಿದ್ದುವು. ಅವನ ಕೊರಳಲ್ಲಿ ರುದ್ರಾಕ್ಷಿ ಮಾಲೆ; ಅವನ ಮೈಯಲ್ಲೆಲ್ಲ ಪಟ್ಟೆಪಟ್ಟೆಯಾಗಿ ಭಸ್ಮ! ಅವನು ಕುಳಿತಿದ್ದ ಮಟ್ಟವಾದ ಬಂಡೆಯಮೇಲೆ, ಅವನ ಬಲಭಾಗದಲ್ಲಿ ಒಂದು ಕಮಂಡಲ; ಅದರಲ್ಲಿ ಪಾವನಗಂಗೆ ತುಂಬಿದ್ದಿತು. ಸ್ನಾನಾನಂತರ ಜೋತುಬಿದ್ದ ತನ್ನ ದಾಡಿಯನ್ನು ಕೊಡವಿ ಗಂಟು ಹಾಕಿ, ಮೀಸೆಯ ತುದಿಯನ್ನು ಹುರಿಮಾಡಿ ಪಕ್ಕಕ್ಕೆ ನಿಲ್ಲಿಸಿದನು. ಮಧ್ಯೆ ಮಧ್ಯೆ 'ಜೈ ಶಂಕರ ಮಹಾದೇವ್!' ಎನ್ನುತ್ತಿದ್ದನು. ನೆರೆದವರು ಅದನ್ನನುಸರಿಸಿ 'ಜೈ ಶಂಕರ ಮಹಾದೇವ್!' ಎಂದು ಘೋಷಿಸುತ್ತಿದ್ದರು. ಗೋಸಾಯಿಯು ಚಂದನವನ್ನು ತೇದು ತನ್ನ ಹಣೆಯ ಮಧ್ಯದಲ್ಲಿ ಹುಬ್ಬುಗಳ ಮಧ್ಯದಿಂದ ಮೇಲ್ಭಾಗಕ್ಕೆ ತಿಲಕವನ್ನಿಟ್ಟುಕೊಂಡು ಮತ್ತೆ 'ಜೈ ಶಂಕರ ಮಹಾದೇವ್!" ಎಂದು ಉಚ್ಚರಿಸಿದನು. ಕ್ಷಣಕಾಲದಲ್ಲೆ ಅನೇಕ ಭಕ್ತರು ಹಣ್ಣುಹಂಪಲುಗಳನ್ನು ತಂದು ಯೋಗೀಶ್ವರನಿಗೆ ಒಪ್ಪಿಸಿದರು. ಅವುಗಳಲ್ಲಿ ಅಷ್ಟಿಷ್ಟು ರುಚಿನೋಡಿ, ಗೋಸಾಯಿಯು ಉಳಿದುದನ್ನು ನೆರೆದವರಿಗೆ ಹಂಚಿಬಿಟ್ಟನು. ಬಳಿಕ ವ್ಯಾಧಿಪೀಡಿತರು ಒಬ್ಬೊಬ್ಬರಾಗಿ ಬಂಡೆಯ ಬಳಿ ಬಂದು ಆತನಿಗೆ ಕಾಣಿಕೆಗಳನ್ನು ಒಪ್ಪಿಸಿ ನಮಸ್ಕರಿಸಿದರು. ಯೋಗೀಶ್ವರನು

ಕಮಂಡಲುವಿನಲ್ಲಿದ್ದ ನೀರನ್ನು ಒಂದು ದರ್ಭೆಯಿಂದ ತನ್ನನ್ನು ನಮಸ್ಕಸಿರಿಸಿ ದವರಮೇಲೆ ಪ್ರೋಕ್ಷಿಸುತ್ತಿದ್ದನು. ಕೆಲವರಿಗೆ ಮೂಲಿಕೆಗಳನ್ನೂ, ಗುಳಿಗೆ ಗಳನ್ನೂ, ಭಸ್ಮಗಳನ್ನೂ, ಲೇಹ್ಯಗಳನ್ನೂ ಕೊಟ್ಟುಕಳುಹಿಸುತ್ತಿದ್ದನು. ಬಂದವರೆಲ್ಲ ಚಿಕಿತ್ಸೆಪಡೆದು ತೆರಳುವ ವೇಳೆಗೆ ಹೊತ್ತು ನೆತ್ತಿಗೇರಿತ್ತು. ಯೋಗೀಶ್ವರನು (ಹಿಂದೂಸ್ಥಾನದವರು ಆತನನ್ನು ಹಾಗೆಂದೇ ಕರೆಯು ತ್ತಿದ್ದರು). ಕೊನೆಗುಳಿದ ನನ್ನನ್ನು ಕುರಿತು ಕೈಹಿಡಿದು ದೇವಸ್ಥಾನದ ಹೊರಗಡೆ ತೋಟದಲ್ಲಿದ್ದ ತನ್ನ ಕುಟೀರಕ್ಕೆ ಕರೆದೊಯ್ದು, ನಾನು ಹಿಂತಿರುಗಿ ಬರುವವರೆಗೂ ಇಲ್ಲೇ ವಾಸಿಸುತ್ತಿರು. ಇದೋ ಈ ಪಾತ್ರೆಯಲ್ಲಿ ಒಂದು ಬಗೆಯ ರಸಪಾಕವಿದೆ. ಇದರಲ್ಲಿ ದಿನವಹಿ ಊಟಕ್ಕೆ ಮುನ್ನ ಒಂದು ಗುಟುಕು ಕುಡಿ. ನಿನ್ನ ಮನಸ್ಸಿನಲ್ಲಿ ಸಂತೋಷವು ತುಂಬಿ ಮಲಗಿದಾಗ ಹಿತಕರ ಸ್ವಪ್ನಗಳಾಗು ತ್ತವೆ.' ಎಂದು ಹೇಳಿ ಆತನು ಎಲ್ಲಿಗೋ ಹೊರಟು ಹೋದನು. ಇಂತಹ ಪಾನೀಯವೇ ನನಗೆ ಬೇಕಾಗಿದ್ದುದೂ. ದಿನದಿನವೂ ನನ್ನ ದೇಹವೂ ಮನಸ್ಸು ಬಲಗೊಳ್ಳತೊಡಗಿದುವು. ಆದರೆ ತೋರಿಕೆಗೆ ನಾನು ಸಂತೋಷಿಯಂತೆ ಕಾಣಿಸುತ್ತಿದ್ದರೂ ನನ್ನಂತರಂಗದಲ್ಲಿ ಆ ಸುಂದರ ಮೋಹಿನಿಯ ಸ್ವರೂಪವನ್ನು ಕಾಣುವ ಬಯಕೆಯೇ ತೀವ್ರವಾಗಿತ್ತು.

ಒಂದು ದಿವಸ ಒಂದು ವಿಚಿತ್ರದ ಸಂಗತಿ ನಡೆಯಿತು. ಆ ಕುಟೀರದ ಗೋಡೆಯಲ್ಲಿ ಒಂದು ಗೂಡು; ಆ ಗೂಡಿನಲ್ಲಿ ಒಂದು ಪುಸ್ತಕ. ಆತುರ ದಿಂದಲೂ ಕುತೂಹಲದಿಂದಲೂ ನಾನು ಆ ಪುಸ್ತಕವನ್ನು ಹೊರಗೆಳೆದು, ತೆರೆದು ನೋಡಿದೆ. ಏನಾಶ್ಚರ್ಯ! ಅದರಲ್ಲಿಯ ಪುಟಗಳನ್ನು ಓದುತ್ತಿದ್ದಂತೆಲ್ಲ ನನ್ನ ಕೌತುಕವು ಅತ್ಯಂತ ಪ್ರಬಲವಾಯಿತು. ಸಾಗರದ ನೀರನ್ನು ಅಡಗಿಸಿ ಒಂದು ಸಣ್ಣ ಪಾತ್ರೆಯಲ್ಲಿ ಮುಚ್ಚಿಟ್ಟಂತೆ, ಪ್ರಪಂಚದ ಪ್ರಚಾರದಲ್ಲಿರುವ ಸಕಲ ಕಲೆಗಳ—ವಿಜ್ಞಾನಶಾಸ್ತ್ರಗಳ, ಮಾನವನ ಕಣ್ಣಿಗೆ ಮರೆಯಾಗಿದ್ದ ಇಹಪರಗಳ ವಿಚಾರವಾದ ಎಲ್ಲ ರಹಸ್ಯಗಳ ಸಾರವೂ ಆ ಗ್ರಂಥದಲ್ಲಿ ಅಡಗಿಸಿ ಇಡಲ್ಪಟ್ಟಿತ್ತು. ನಾನು ಆದನ್ನೆಲ್ಲ ಕ್ರಮವಾಗಿಯೂ, ಸಾವಧಾನವಾಗಿಯೂ ಓದುತ್ತ ಬಂದೆ. ಹಗಲು-ರಾತ್ರಿ ಆದೇ ಕೆಲಸ-ನನಗೆ. ಈ ತೆರನೆ ನಾನು ಮುಖ್ಯವಾಗಿ ಮನ ಶ್ಶಾಸ್ತ್ರ ಮತ್ತು ಪ್ರೇಮಶಾಸ್ತ್ರಗಳನ್ನು ಕೂಲಂಕಷವಾಗಿ ಓದಿ ಸೂತ್ರಗಳನ್ನು ಕರಗತ ಮಾಡಿಕೊಂಡೆ.

ಒಂದು ವರ್ಷವು ಮುಗಿಯಿತು. ಯೋಗೀಶ್ವರನು ಎಂದಿನಂತೆ ಹೊರ ಬಂದು, ನದಿಯಲ್ಲಿ ಮಿಂದು, ಭಸ್ಮಧಾರಿಯಾಗಿ ಬಂಡೆಯಮೇಲೆ ಕುಳಿತು ಸಂತಪ್ತಮಾನವರ ಸಂಕಟವನ್ನೂ, ವ್ಯಾಧಿಪೀಡಿತರ ಬಾಧೆಯನ್ನೂ ಪರಿಹರಿಸಿದನು. ಈ ಸಲ ನೆರೆದವರ ಗುಂಪಿನಲ್ಲಿ ನನ್ನನ್ನು ಕರೆತಂದು ಬಿಟ್ಟುಹೋದ ಪ್ರಧಾನಿಯೂ, ವ್ಯಾಪಾರಿಯೂ ಇದ್ದಾರೆಂದು ಹೇಳಬೇಕೇ ? ನನ್ನನ್ನು ಕಂಡು ನಾನು ತುಷ್ಟಪುಷ್ಟನಾಗಿರುವುದನ್ನು ನೋಡಿ ಅವರು ಸಂತೋಷದಿಂದ ಯೋಗೀಶ್ವರನ ಪಾದಗಳನ್ನು ಮುಟ್ಟಿ ನಮಸ್ಕರಿಸಿ ತಮ್ಮ ಕೃತಜ್ಞತೆಯನ್ನು ಆತನಿಗೆ ವ್ಯಕ್ತಪಡಿಸಿದರು.

ಆ ದಿನ ಯೋಗೀಶ್ವರನಿಂದ ಚಿಕಿತ್ಸೆ ಪಡೆಯಲು ಬಂದವರಲ್ಲಿ ಒಬ್ಬ ಸುಂದರ ತರುಣನೂ ಇದ್ದ. ಅವನು ಹುಚ್ಚನಾಗಿಬಿಟ್ಟಿದ್ದ. ನೆಟ್ಟಗೆ ನಿಂತು ಕೊಳ್ಳಲೂ ಅವನಿಗೆ ಸಾಧ್ಯವಿರಲಿಲ್ಲ. ಯೋಗೀಶ್ವರನ ದೃಷ್ಟಿಯು ಆ ಬಲಹೀನನ ಕಡೆ ಹೊರಳಿತು. ಉಳಿದವರೆಲ್ಲರನ್ನೂ ಕಳುಹಿಸಿಕೊಟ್ಟು "ಆತನನ್ನು ನಿನ್ನೊಡನೆ ಕರೆದುಕೊಂಡು ಬಾ" ಎಂದು ನನಗೆ ಹೇಳಿ ತಾನು ಕುಟೀರದ ಕಡೆ ಹೊರಟನು. ನಾವು ಆತನನ್ನು ಹಿಂಬಾಲಿಸಿದೆವು. ಕುಟೀರದೊಳಗೆ ಯೋಗೀಶ್ವರನು ಆ ಹುಚ್ಚು ತರುಣನ ತಲೆಬುರುಡೆಯನ್ನು ಕೊರೆದು ಅಲ್ಲಿ ಅಡಗಿದ್ದ ಒಂದು ಕೀಟವನ್ನು ಚಿಮುಟದಿಂದ ಹಿಡಿದೆಳೆಯತೊಡಗಿದನು. ಆದರೆ ಆ ಕೀಟವು ಹಿಡಿತಕ್ಕೆ ಸಿಕ್ಕದೆ ತಪ್ಪಿಸಿಕೊಳ್ಳುತ್ತಿತ್ತು. ಆಗ ನಾನು ಸಮಯ ಸ್ಫೂರ್ತಿಯಿಂದ "ಜನಾಬ್ ! ಆ ಚಿಮುಟವನ್ನು ಬಿಸಿಮಾಡಿ ನೋಡಿ. ಆಗ ಕೀಟವು ಬಿಸಿ ತಾಳಲಾರದೆ ತಾನು ಹಿಡಿದಿರುವ ಪಟ್ಟನ್ನು ಬಿಟ್ಟು ತಮ್ಮ ಚಿಮುಟದ ಹಿಡಿತಕ್ಕೆ ಸಿಕ್ಕೀತು ಎಂದೆ. ಹಾಗಲ್ಲದೆ ತಾವು ಹಾಗೆಯೇ ಅದನ್ನು ಬಲವಂತದಿಂದ ಎಳೆಯಲು ಯತ್ನಿಸಿದರೆ ಅದು ತರುಣನ ಮಿದುಳನ್ನು ಭದ್ರವಾಗಿ ಕಚ್ಚಿಕೊಳ್ಳುತ್ತದೆ. ಆಗ ಆತನ ಪ್ರಾಣಕ್ಕೆ ಅಪಾಯವಾದೀತು" ಎಂದು ಸಲಹೆಕೊಟ್ಟೆ.

ಇದನ್ನು ಕೇಳಿ ಯೋಗೀಶ್ವರನು ತಲೆಯನ್ನು ತಿರುಗಿಸಿ ನನ್ನ ಮುಖವನ್ನು ನೆಟ್ಟದೃಷ್ಟಿಯಿಂದ ನೋಡಿದನು. ಆ ನೋಟದಲ್ಲಿ ಏನೇನು ಮರ್ಮವು ಅಡಗಿದ್ದಿತೋ ನಾನರಿಯೆ. ಮರುಮಾತಾಡದೆ ಆತನು ಆ ಕೊಠಡಿಯನ್ನೂ

ತರುಣನನ್ನೂ ಅಲ್ಲಿಂದಲ್ಲೆ ಬಿಟ್ಟು ತೋಟದ ಮೂಲೆಗೆ ಹೋಗಿ, ಕಟ್ಟಿದ್ದ ತನ್ನ ನೀಳವಾದ ಜಡೆಯನ್ನು ಬಿಚ್ಚಿ, ಹೊಸೆದು, ಮರಕ್ಕೆ ನೇಣುಹಾಕಿಕೊಂಡು, ಪ್ರಾಣವನ್ನು ತ್ಯಜಿಸಿಬಿಟ್ಟನು! ಅತನು ಹಾಗೇಕೆ ಮಾಡಿದನೆಂದು ನಾನು ಖಚಿತವಾಗಿ ಹೇಳಲಾರೆ. ಆದರೆ ತನ್ನಲ್ಲಿ ಚಿಕಿತ್ಸೆಗಾಗಿ ಬಂದಿದ್ದ ರೋಗಿ ಯೊಬ್ಬನು ತನಗಿಂತಲೂ ಹೆಚ್ಚಾಗಿ ತಿಳಿದವನಂತೆ ಮಾತನಾಡಿದ ಖೇದವು ಆತನನ್ನು ನೋಯಿಸಿರಬಹುದು ಇಲ್ಲವೆ—ಆತನ ಚಿಕಿತ್ಸಾಶಕ್ತಿಗೆ ಮೂಲವಾದ ಜ್ಞಾನವನ್ನು ಆತನ ಪುಸ್ತಕವನ್ನು ನಾನು ಓದಿ ಅರಿತುಕೊಂಡೆನೆಂಬ ಅಸೂ ಯೆಯೂ ಇರಬಹುದು. ಅಂತೂ ಯೋಗೀಶ್ವರನ ಹತ್ಯೆಗೆ ನಾನು ಕಾರಣ ನಾದೆ. ಹುಚ್ಚ ತರುಣನ ಗತಿಯೇನಾಯಿತೋ ನನಗೆ ತಿಳಿಯದು. ನಾನು ಒಬ್ಬಂಟಿಗನಾಗಿ ಉಳಿದೆ. ಅತಿ ಸೂಕ್ಷ್ಮವಾಗಿ ಯೋಚಿಸಿ ಒಂದು ತೀರ್ಮಾ ನಕ್ಕೆ ಬಂದೆ. ಆ ಸಮಯದಲ್ಲಿ ನನಗೆ ಹಿತವನ್ನು ಹೇಳಬಲ್ಲವರಾರೂ ನನ್ನ ಬಳಿ ಇರಲಿಲ್ಲ. ಆದುದರಿಂದ ನಾನು ಯೋಗೀಶ್ವರನ ಶರೀರವನ್ನು ಕಾಲ ವಿಳಂಬವಿಲ್ಲದೆ ಅಲ್ಲೊಂದೆಡೆ ಹೂತುಬಿಡುವುದೊಳ್ಳೆಯದೆಂದು ಮನಗಂಡೆ. ಮರಕ್ಕೆ ಬಿಗಿದಿದ್ದ ಜಡೆಯನ್ನು ಬಿಚ್ಚಿದೆ. ಅದರಿಂದ ಎರಡು ಬೀಗದ ಕೈಗಳು ಠಣ್ಣೆಂದು ಕೆಳಗೆ ಬಿದ್ದುವು. ಮೃತಶರೀರವನ್ನು ಆದಷ್ಟು ಬೇಗ ಹೂತುಬಿಟ್ಟು ಬೀಗದಕೈಗಳನ್ನು ತೆಗೆದುಕೊಂಡು ಆ ಯೋಗಿಯ ಕುಟೀರಕ್ಕೆ ಹೋದೆ. ಬೀಗದಕೈಗಳ ಸಹಾಯದಿಂದ ಒಳಗಿನ ಕೊಠಡಿಗಳ ಬಾಗಿಲನ್ನು ತೆಗೆದೆ. ಆ ವಿಸ್ಮಯಾನಂದಕರ ದೃಶ್ಯವನ್ನು ನೋಡಿ ನನ್ನಕಣ್ಣುಗಳು ಕುರುಡಾದಂತಾದುವು. ಎರಡು ಕೊಠಡಿಗಳಲ್ಲೂ ನೆಲದಿಂದ ಮೇಲ್ಛಾವಣಿಯವರೆಗೆ ನವರತ್ನಗಳ ಒಂದೇ ರಾಶಿ! ಕಣಜದಲ್ಲಿ ಕಾಳು ತುಂಬಿದ್ದಂತೆ! ಒಂದು ಕೊಠಡಿಯಲ್ಲಿ ಮೂಲೆ ಯಲ್ಲೊಂದು ಕಬ್ಬಿಣದ ಪೆಟ್ಟಿ ಇದ್ದಿತು. ಅದರ ಬಾಗಿಲಿಗೆ ಚಿನ್ನದ ಸರಪಣಿ ಹಾಕಿ ಬಿಗಿದಿತ್ತು. ಬೀಗ ಹಾಕಿತ್ತು. ಪೆಟ್ಟಿಗೆಯನ್ನು ತೆರೆದು ನೋಡಿದೆ. ಅದರಲ್ಲೊಂದು ಪುಸ್ತಕವಿತ್ತು. "ಅತ್ಯಂತ ಭಯಂಕರವಾದ ಹೆಸರುಗಳು" ಎಂದು ಆ ಪುಸ್ತಕದ ಹೆಸರು. ಅದನ್ನು ಆತುರದಿಂದ ಬಿಚ್ಚಿ ನೋಡಿದೆ. ಜಿನ್ ಗಳನ್ನೂ ದೇವತೆಗಳನ್ನೂ ಕೂಗಿ ಬರಮಾಡಿಕೊಳ್ಳುವ ಬಗೆ ಹೇಗೆ, ವಾಯುವಿ ನಲ್ಲಿ ವಿಹರಿಸುವ ಆತ್ಮಗಳೊಂದಿಗೆ ಸಂಭಾಷಿಸುವುದು ಹೇಗೆ..........ಎಂದು

ಮುಂತಾದ ಅಮಾನುಷ ವಿಚಾರಗಳೆಲ್ಲ ಆ ಪುಸ್ತಕದಲ್ಲಿ ವ್ಯಕ್ತವಾಗಿ ವಿವರಿಸ ಲ್ಪಟ್ಟಿದ್ದುವು. ಇಂತಹ ಒಂದು ನಿಧಿಯು ನನ್ನ ಹಸ್ತಗತವಾದುದಕ್ಕಾಗಿ ನಾನು ಬಹುವಾಗಿ ಆನಂದಗೊಂಡೆ. ವಿಚಾರಪೂರ್ಣವಾದ ಆ ಪುಸ್ತಕವು ನಿಧಿಯಲ್ಲದೆ ಮತ್ತೇನು? ಅದರಲ್ಲೂ ಜಿನ್ ಮತ್ತು ದೇವಕನ್ನಿಕೆಯರನ್ನು ಆಜ್ಞಾಪಿಸಿ ಬೇಕೆಂದಾಗ ಕರೆಸುವ ವಿಧಾನಗಳನ್ನೊಳಗೊಂಡ ಆ ಪುಸ್ತಕವು ನನಗೆ ಅತ್ಯಂತ ಅಮೂಲ್ಯವಾದುದೇ ಅಲ್ಲವೆ? ಅದರಲ್ಲಿ ಉಕ್ತವಾದ ವಿಧಿ ನಿಯಮಗಳನ್ನನುಸರಿಸಿ ನಾನು ನನ್ನ ಸುಂದರ ಮೋಹಿನಿಯನ್ನು—ಪ್ರೇಮ ತಾರೆಯನ್ನು ಬೇಕೆನಿಸಿದಾಗ ಕರೆದು ಅವಳೊಡನೆ ಆನಂದಿಸಬಹುದಲ್ಲವೆ?

ನನ್ನೊಡನೆ ಬಂದಿದ್ದ ಆ ಪ್ರಧಾನಿಯನ್ನೂ, ವ್ಯಾಪಾರಿಯನ್ನೂ ಕರೆದು ಆ ಅಖಂಡ ನಿಧಿ ಸಮೂಹವನ್ನು ಅವರಿಗೆ ತೋರಿಸಿದೆ. ಅದನ್ನೆಲ್ಲ ಕಂಡು ಅವರು ಬೆಪ್ಪರಾಗಿ ಹೋದರು. ಯೋಗಿಯು ಮರಕ್ಕೆ ನೇಣುಹಾಕಿಕೊಂಡು ಸತ್ತುದರ ವಿಚಾರವಾಗಿ ಆ ಮೊದಲೇ ಅವರಿಗೆ ನಾನು ತಿಳಿಸಿದ್ದೆ. ಆ ನಿಧಿ ಯನ್ನೆಲ್ಲ ನನ್ನಿಷ್ಟದಂತೆ ಅವರು ನಮ್ಮ ದೋಣಿಗಳಿಗೆ ಹೇರಿದರು. ನನಗೆ ಅತ್ಯಂತ ಅಮೂಲ್ಯವಾದ ಆ ಪುಸ್ತಕಗಳನ್ನು ನಾನು ನನ್ನ ವಶದಲ್ಲಿಟ್ಟುಕೊಂಡೆ. ಎಲ್ಲರೂ ಆ ಸ್ಥಳವನ್ನು ಬಿಟ್ಟು ಹೊರಟು ಆದಷ್ಟು ಬೇಗ ನಿಮ್‌ರೋಜನ್ನು ಸೇರಿದೆವು. ನಮ್ಮನ್ನು ಎದಿರ್ಗೊಳ್ಳಲು ಬಂದ ನನ್ನ ತಂದೆಗೆ ನನ್ನ ಚಿಂತೆಯು ಸುಧಾರಿಸಿ ನಾನು ಸಂತಸದಿಂದ ಕೂಡಿ ಹಿಂತಿರುಗಿರುವುದನ್ನು ಕಂಡು ಅತ್ಯಾ ಂದ ವಾಯಿತು. ನಾವು ತಂದಿದ್ದ ಅಪಾರ ನಿಧಿಯನ್ನೂ ಆತನಿಗೊಪ್ಪಿಸಿ ಅದು ದೊರೆತ ವಿಧಾನವನ್ನೂ ಆತನಿಗೆ ತಿಳುಹಿಸಿದೆ. ಆತನ ಆನಂದಕ್ಕೆ ಎಲ್ಲೆ ಇಲ್ಲದಂತಾಯಿತು. ನನ್ನನ್ನು ತನ್ನ ಎದೆಗೆ ಬಿಗಿದಪ್ಪಿ ನನ್ನ ಗಲ್ಲಕ್ಕೆ ಮುತ್ತಿಟ್ಟು ಕಣ್ಣೀರು ಸುರಿಸಿದನು.

"ಈ ತೆರನೆ ಸುಖಸಂತೋಷಗಳಿಂದ ತಿರುಗಿ ಬಂದುದು ಅಲ್ಲಾನ ಮಹತ್ತರ ಕೃಪೆಯಿಂದ! ಎನ್ನುತ್ತ ನನ್ನ ತಂದೆ 'ಇನ್ನು ಮುಂದೆ ಅರಮನೆ ಯಲ್ಲಿಯೇ ಇರಬಹುದಲ್ಲ' ಎಂದ. ಆದರೆ ನಾನದಕ್ಕೆ ಒಲ್ಲದೆ ಹೋದೆ. ನನ್ನ ಗೃಹದಲ್ಲೇ ವಾಸಮಾಡಲು ಸಮ್ಮತಿಸಬೇಕೆಂದು ಆತನನ್ನು ಬಹುವಾಗಿ ಪ್ರಾರ್ಥಿಸಿದ್ದರಮೇಲೆ 'ಆಗಲಿ' ಎನ್ನುತ್ತ ಆತನು ಅಂಗೀಕರಿಸಿದನು. ನಾನು

ನನ್ನ ಗೃಹದಲ್ಲೆ ಏಕಾಂಗಿಯಾಗಿ ಇರುತ್ತ ಜಿನ್‌ಗಳನ್ನು ಒಲಿಸಿಕೊಂಡು ನನ್ನ ಕಿಂಕರರನ್ನಾಗಿ ಮಾಡಿಕೊಳ್ಳುವುದಕ್ಕಾಗಿ ನಲವತ್ತು ದಿವಸಗಳ ಉಪವಾಸ ಮಾಡಿ ಸೂಕ್ತ ಸಾಧನೆಗಳನ್ನು ಪಡೆದೆ. ಆ ಸಾಧನ ಕಾಲದಲ್ಲಿ ನಾನು ಭೂತ ಗಳೊಂದಿಗೆ ವ್ಯವಹರಿಸಬೇಕಾಗಿದ್ದುದರಿಂದ, ಮಾನವರ ಸಂಪರ್ಕವೇ ಇರ ಕೂಡದಾಗಿತ್ತು. ಇವನ್ನೆಲ್ಲ ನನ್ನ ತಂದೆಗೆ ಹೇಳಬಯಸದೆ ಹೇಗೋ ಆತನನ್ನು ಒಲಿಸಿ, ನಾನು ನನ್ನ ಗೃಹಕ್ಕೆ ಬಂದುದರಿಂದ ನನ್ನ ಸಾಧನೆಯೂ ಸಂಪೂರ್ಣ ಗೊಂಡಿತು.

ಆ ನಲವತ್ತು ದಿವಸಗಳ ಅವಧಿಯು ಮುಗಿದಮೇಲೆ ನಾನು ನನ್ನ ಸಾಧನಶಕ್ತಿಯಿಂದ ಮಧ್ಯರಾತ್ರಿಯಲ್ಲಿ ಪ್ರಳಯಸಮಾನವಾದ ಬಿರುಗಾಳಿ ಯನ್ನು ಎಬ್ಬಿಸಿದೆ. ಅದರ ಪರಿಣಾಮವಾಗಿ ಎಷ್ಟೋ ದೊಡ್ಡದೊಡ್ಡ ವೃಕ್ಷಗಳು ಬೇರು ಸಹಿತ ಮುರಿದುಬಿದ್ದುವು. ಹೆಬ್ಬಂಡೆಗಳು ಉರುಳಿದುವು ; ಅರಮನೆ ಗಳು ಆಡಿಹೋದುವು ; ನದಿಗಳು ದಡಕಿತ್ತು ಹರಿದುವು ; ಒಂದೇ ಅಲ್ಲೋಲ ಕಲ್ಲೋಲ! ಒಂದೇ ಆರ್ಭಟ! ದೇವಕನ್ನಿಕೆಯರು ನನ್ನ ಮುಂದೆ ಬಂದು ನಿಂತರು. ಸಿಂಹಸನಾರೂಢನಾಗಿ ಅವರ ರಾಜನೇ ನನ್ನ ಮುಂದೆ ಬಂದು ಕೇಳಿದ :

"ಮಿತ್ರ ! ಈ ಬಿರುಗಾಳಿಯನ್ನು ಎಬ್ಬಿಸಿದುದೇತಕ್ಕೆ ನನ್ನಿಂದ ಏನಾಗ ಬೇಕು ?"

"ಏನಾಗಬೇಕು ? ತಿಳಿಯುವುದಿಲ್ಲವೆ ? ನಾನು ನಿನ್ನ ಕುವರಿಯನ್ನು ಪ್ರೀತಿಸುತ್ತೇನೆ. ಅವಳಿಗಾಗಿ ನಾನು ಹಗಲಿರುಳೂ ಅನೇಕ ವರ್ಷಗಳಿಂದ ಹಂಬಲಿಸಿ, ಅಲೆದಲೆದು ಕಟ್ಟಕಡೆಗೆ ಅವಳನ್ನು ಕಾಣುವ ಶಕ್ತಿಯನ್ನು ಪಡೆ ದಿದ್ದೇನೆ. ನೀನು ಅವಳನ್ನು ನನಗೆ ತೋರಿಸುವೆಯಾದರೆ ಆಗ ನನ್ನ ಪ್ರಾಣ ವನ್ನು ರಕ್ಷಿಸಿದ ಪುಣ್ಯವು ನಿನಗೆ ಲಭಿಸೀತು."

ಜಿನ್ನರ ರಾಜನು ಹೇಳಿದ :

"ಮನುಷ್ಯರು ಮಣ್ಣಿನಿಂದ ಹುಟ್ಟಿದವರು. ನಾವಾದರೋ ಅಗ್ನಿಯಿಂದ ಹುಟ್ಟಿದವರು. ಇಂತಹ ಪರಸ್ಪರ ವಿರುದ್ಧಪ್ರಕೃತಿಯುಳ್ಳ ಮಾನವರಿಗೂ, ದೇವತೆಯರಿಗೂ ಹೇಗೆ ಸಂಬಂಧವು ಸರಿಹೊಂದೀತು ?

"ಹಾಗೇನು ?" ನಾನು ಹೇಳಿದೆ. "ಹಾಗಿದ್ದಲ್ಲಿ ನಾನು ಅವಳನ್ನು ನೋಡುವುದರೊಂದಿಗೆ ತೃಪ್ತನಾಗುತ್ತೇನೆ. ಅವಳನ್ನು ಮುಟ್ಟಲಾರೆ."

"ಮುಟ್ಟಲಾರೆ!" ಜಿನ್ನರ ರಾಜನು ಕೇಳಿದನು. "ಮಾನವರು ವಚನವನ್ನು ಕೊಡುವುದರಲ್ಲಿ ಎಷ್ಟು ಘಟ್ಟಿಗರೋ ಅವುಗಳನ್ನು ಮುರಿಯುವುದರಲ್ಲಿಯೂ ಅಷ್ಟೇ ಘಟ್ಟಿಗರು! ತಮಗೆ ಅನುಕೂಲವೆಂದೆನಿಸಿದಾಗ ಅವರು ಎಂತಹ ಪ್ರಮಾಣವನ್ನು ಬೇಕಾದರೂ ಮಾಡಿಯಾರು. ಬೇಡದಾಗ ಕನಸಿನಲ್ಲಿಯೂ ಅವರು ಆ ಪ್ರಮಾಣವನ್ನು ನೆನಸಲಾರರು, ಇದು ನಿನಗೆ ನಾನು ನೀಡಬೇಕಾದ ಎಚ್ಚರಿಕೆ. ನೀನು ಅವಳನ್ನು ನೋಡಲು ನನ್ನ ಅಭ್ಯಂತರವೇನೂ ಇಲ್ಲ. ಆದರೆ ವಚನವನ್ನು ಮುರಿದು ಆಕೆಯನ್ನು ಮುಟ್ಟಿದರೆ ಆಗ ನಿಮ್ಮಿಬ್ಬರ ನಾಶ ನಿಸ್ಸಂದೇಹವಾದುದು. ಇದು ಚೆನ್ನಾಗಿ ಜ್ಞಾಪಕವಿರಲಿ."

ಜಿನ್ನರ ರಾಜನು ಹೇಳಿದ ಮಾತಿನ ಅರ್ಥವನ್ನು ನಾನು ಚೆನ್ನಾಗಿ ಗ್ರಹಿಸಿದೆ. ಹೇಗಾದರೂ ಆ ನನ್ನ ಹೃದಯ ನಾಯಕಿಯನ್ನು ಅಡಿಗಡಿಗೆ ಕಣ್ಣುತುಂಬ ನೋಡುತ್ತಿರಬೇಕೆಂದು ಬಯಸಿ ಬಯಸಿ ಬೆಂಡಾಗಿದ್ದ ನಾನು ಪ್ರಮಾಣ ಮಾಡಿದೆ. ಅದಕ್ಕೆ ಅವನು ಒಪ್ಪಿ ಮೇಲೇರಿ ತನ್ನ ಲೋಕವನ್ನು ಸೇರಿದನು.

ಕೆಲವೇ ಕ್ಷಣಗಳಲ್ಲಿ ಆ ನನ್ನ ಹೃದಯ ದೇವತೆಯು ನನ್ನೆದುರಿಗೆ ಪ್ರಸನ್ನಳಾದಳು, ನಾನು ನನ್ನ ಪ್ರಮಾಣದಂತೆ ಅವಳ ಸುಂದರ ಸ್ವರೂಪವನ್ನೂ ಕಣ್ಣು ತುಂಬ ನೋಡಿ ನೋಡಿ ಆನಂದಿಸುತ್ತಿದ್ದೆ. ಸುಂದರಿಗೆ ನಾನು ವಚನ ಭ್ರಷ್ಠನಾಗದುದನ್ನು ಕಂಡು ಅತ್ಯಂತ ಸಂತೋಷವಾಯಿತು. ಆಗ ಅವಳು ಹೇಳಿದಳು.

"ನಿನ್ನ ಬಳಿ ಇರುವ ಆ ವಿಚಿತ್ರ ವಿಜ್ಞಾನಾದ ಪುಸ್ತಕವನ್ನು ಮಾತ್ರ ಭದ್ರವಾಗಿ ಕಾಪಾಡಿಕೋ. ಜಿನ್ನರಿಗೆ ಅದರಮೇಲೆ ಕಣ್ಣಿದೆ. ನೀನು ಎಚ್ಚರ ತಪ್ಪಿದರೆ ಸಾಕು. ಅದನ್ನು ನಿನ್ನಿಂದ, ಕೊಂಡುಯೋಗಲು, ಏಕೆ? ಕದ್ದು ಕೊಂಡಾದರೂ ಹೋಗಲು ಅವರು ಹೊಂಚು ಹಾಕುತ್ತಿದ್ದಾರೆ."

ಒಂದು ದಿವಸ ನಾನು ನನ್ನ ವಚನವನ್ನು ಮರೆತು ಆ ಸುಂದರ ರಮಣಿಯನ್ನು ಮುಟ್ಟಿ ಮುತ್ತಿಟ್ಟೆನು. ಅಷ್ಟೇ ಸಾಕು. "ಆ ಪುಸ್ತಕವನ್ನು ಇಲ್ಲಿ ತಾ.... ಮಾನವರಲ್ಲಿ ನೀನೊಬ್ಬ ಅಧಮ! ವಚನ ಭ್ರಷ್ಠ! ಆ ಪುಸ್ತಕದಲ್ಲಿ ಪರಮಾತ್ಮನ ಪವಿತ್ರ ಹಸ್ತಾಕ್ಷರವಿದೆ! ನಿನ್ನಂತಹ ಪಾತಕಿಗಳ ಕೈಯಲ್ಲಿ ಇರಬಾರದು. ತಾ

ಬೇಗ; ತಡಮಾಡದೆ ಪುಸ್ತಕವನ್ನು ಬೇಗ ತಾ" ಎಂದು ಅಶರೀರವಾಣಿಯು ಕೇಳಿಸಿತು. ನಾನು ಬುದ್ಧಿಹೀನನಾದೆ; ಪುಸ್ತಕವನ್ನು ಎತ್ತಿಕೊಟ್ಟೆ. ತಿರುಗಿ ನೋಡುತ್ತೇನೆ........ಅವನೊಬ್ಬ ಜಿನ್! ಅವನ್ನು ಕಿತ್ತುಕೊಳ್ಳಬೇಕೆಂದು ಯತ್ನಿಸಿದೆ. ಆ ವೇಳೆಗೆ ಮತ್ತೊಬ್ಬ ಜಿನ್ನನು ಮೊದಲನೆಯವನಿಂದ ಅದನ್ನು ಕಿತ್ತುಕೊಂಡು ಅದೃಶ್ಯನಾದ. ಪುಸ್ತಕವಲ್ಲಿ ಓದಿ ಬಾಯಿಪಾಠ ಮಾಡಿಕೊಂಡಿದ್ದ ಕೆಲವು ಮಂತ್ರಗಳನ್ನು ನಾನು ಉಚ್ಚರಿಸಿದೆ. ತಕ್ಷಣವೇ ನನ್ನ ಬಳಿ ನಿಂತಿದ್ದ ಜಿನ್ನನು ಗೂಳಿಯಾಗಿ ಮಾರ್ಪಾಡು ಹೊಂದಿದ, ಆ ಗೂಳಿಯನ್ನೇ ನಾನು ಈಗ ಸವಾರಿ ಮಾಡುತ್ತಿರುವುದು. ಇರಲಿ; ನಾನು ಪ್ರೀತಿಸಿದ ಆ ದೇವಕನ್ನಿಕೆ ನನ್ನ ಚುಂಬನದಿಂದ ಮೂರ್ಛಿತಳಾಗಿ ಕೆಳಗೆ ಬಿದ್ದಳು. ನಾನೆಷ್ಟೇ, ಪ್ರಯತ್ನಪಟ್ಟರೂ ಅವಳು ಎಚ್ಚೆತ್ತುಕೊಳ್ಳಲಿಲ್ಲ. ತತ್ಪರಿಣಾಮವಾಗಿ ನಾನು ನನ್ನ ಸರ್ವಸ್ವವನ್ನೂ ಕಳೆದುಕೊಂಡಂತೆ ಆಯಿತು. ಅದರಿಂದಾಚೆ ಮೊದಲಿಗಿಂತಲೂ ಹೆಚ್ಚಾಗಿ ನನ್ನ ಮನಸ್ಸು ಕದಡಿಹೋಯಿತು.

ಅಂದಿನಿಂದ–ಆದುರ್ದಿನದಿಂದ–ಆಚೆ ನೆಲೆಯಿಳಿದ ನನಗೆ, ಮಾನವರನ್ನು ಕಂಡರೆ ಆಗದು. ನನ್ನ ವರ್ಗಕ್ಕೇ ಸೇರಿದ ಮಾನವರನ್ನು ಕಂಡರೆ ನನಗೆ ಹಿಡಿಸಲಾರದ ಕ್ರೋಧ. ನನ್ನ ಬಳಿ ಯಾವ ಮಾನವನು ಬಂದರೂ ನನಗೆ ಹಿಡಿಸದು, ಏತಕ್ಕೇ ಎಂದು ನಾನು ಊಹಿಸಲಾರೆ. ಪಜನವನ್ನು ಮುರಿದು ಅನಂತಯಾತನೆಗಳಿಗೆ ಗುರಿಯಾದ ಬುದ್ಧಿಹೀನ ಮಾನವ ನಾನು ಎಂದೇ? ಆ ಸ್ವರದ್ರೂಪಿಣಿಯನ್ನು ವಂಚಿಸಿ ಚುಂಬನಮಾಡಿ ಆಕೆಯನ್ನು ಮೃತಪ್ರಾಯಳನ್ನಾಗಿ ಮಾಡಿದ ಕಿರಾತಕಮಾನವನು ನಾನು ಎಂದೇ? ಸಹಸ್ರ ಸಹಸ್ರ ಜನರ ಸಂಕಟಗಳನ್ನೂ ಪ್ರತಿ ಸಂವತ್ಸರವೂ ಪರಿಹರಿಸಿ ಸಂತಸಗೊಳಿಸುವ ಪ್ರಬಲ ಶಕ್ತಿಯನ್ನು ಹೊಂದಿದ್ದರೂ ತನ್ನ ಜ್ಞಾನಭಂಡಾರವನ್ನು ಕದ್ದವನು ನಾನೆಂದು ಅಸೂಯೆಗೊಂಡು ನೇಣು ಹಾಕಿಕೊಂಡ ಆ ಯೋಗೀಶ್ವರನೂ ಮಮಕಾರಕ್ಕೆ ಬಲಿಯಾದ ಮಾನವನೇ ಅಲ್ಲವೇ? ಮತಿಭ್ರಮಣ ಹೊಂದಿದ ನಾನು ಮತಿವಂತನಾಗಿ ಹಿಂದೂಸ್ಥಾನದಿಂದ ತಿರುಗಿಬಂದಮೇಲೆ ನನಗಿಂತ ನಾನು ತಂದು ಕೊಟ್ಟ ಅಪಾರ ನಿಧಿಯೇ ಹೆಚ್ಚೆನಿಸಿದುದೆಂದು ಪರಿಗಣಿಸಿರಬಹುದು ಸ್ವಾರ್ಥತೆಗೆ ಮನಸೋತಿರಬಹುದಾದ—ನನ್ನ ತಂದೆಯೂ ಮಾನವ ಕೂಟಕ್ಕೆ ಸೇರಿದವನೇ

ಅಲ್ಲವೆ ? ಹುಟ್ಟಿದ ವೇಳೆಯಲ್ಲಿ ಕೆಟ್ಟಗ್ರಹಗಳ ಪೀಡೆಯಿದೆಯೆಂಬನೆವದಿಂದ ಹದಿನಾಲ್ಕು ವರ್ಷ ನನ್ನನ್ನು ಕತ್ತಲು ಗವಿಯಲ್ಲಿ ತಳ್ಳಿಸಿ, ಕೃತ್ರಿಮ ಬೆಳಕಿನಲ್ಲಿ ಬೆಳೆಸಲು ಕಾರಣರಾದ—ನನ್ನನ್ನು ಮಾನವಗಣದಿಂದ ಬೇರ್ಪಡಿಸಿ ನನ್ನ ಮನಸ್ಸಿನ ರೀತಿನೀತಿಗಳ ಸ್ವರೂಪವನ್ನೇ ಪ್ರತ್ಯೇಕವೆನಿಸುವಂತೆ ಸಜ್ಜುಗೊಳಿಸಿದ ಆ ನನ್ನ ತಂದೆಯ ಪ್ರೇರೇಪಕರು—ಆ ಜ್ಯೋತಿಷಿಗಳು ಅವರೂ ಮಾನವರೇ ಅಲ್ಲವೇ ? ಮೋಹಿನಿಯು ಮೊದಲು ಸಲ ನನ್ನ ದೃಷ್ಟಿಯಿಂದ ಮಾಯಳಾಗಿ ನನಗೆ ಮತಿಭ್ರಮಣ ಉಂಟಾದಾಗ—ಮನಸ್ಸಿನ ಯಾತನೆಗೆ ಶರೀರಕ್ಕೆ ಔಷಧಿ ಬರೆದುಕೊಟ್ಟ—ವೈದ್ಯರು—ಗ್ರಹಗಳನ್ನೂ ಒಲಿಸುವ ನೆವದಿಂದ ಕಾಂಚಾಣದ ಕಾಣಿಕೆಯನ್ನು ಬೇಡಿದ ಜ್ಯೋತಿಷಿಗಳು—ಸೊಂಟ ಮುರಿದವನಿಗೆ ಕಣ್ಣಿನಲ್ಲಿ ಔಷಧಿಸುರಿಯುವಂತೆ, ಮೋಹಜಾಡ್ಯಕ್ಕೆ ಪ್ರಾರ್ಥನಾ ರೂಪವಾದ ಚಿಕಿತ್ಸೆಯನ್ನು ಸೂಚಿಸಿದ ಆ ಮುಲ್ಲಾನರೂ, ಅವರು ಇತ್ಯಾದಿಯಾದೆಲ್ಲ ಜನರು—ಅವರೆಲ್ಲ ಮಾನವರೇ ಅಲ್ಲವೆ ? ಇಂತಹ ಮಾನವ ಕೂಟವನ್ನು ಕಂಡು ಅಂದಿನಿಂದ ನನಗೆ ಸಹಿಸವೆ ಹೋಯಿತು. ಆದುದರಿಂದಲೇ ನಾನು ಮಾನವರಿಂದ ದೂರವಾಗಿ ಈ ತೋಟದಲ್ಲಿ-ನನಗಾಗಿಯೇ ಕಟ್ಟಲ್ಪಟ್ಟ ಈ ಗೃಹದಲ್ಲಿ-ವಾಸಿಸುತ್ತಿರುವುದು. ನನ್ನ ಮನಸ್ಸು ಭ್ರಮಿಸದಿರಲು ಒಂದು ನಿರ್ದಿಷ್ಟಕೆಲಸ ಬೇಕಲ್ಲವೆ ? ಆದುದರಿಂದಲೇ ಕುಶಲ ಕಲೆಯನ್ನೂ ಬಲ್ಲ ನಾನು ಪ್ರತಿ ತಿಂಗಳೂ ರತ್ನಖಚಿತವಾದ ಈ ಬಟ್ಟಲನ್ನೂ ತಯಾರಿಸುತ್ತೇನೆ. ತಿಂಗಳ ಮೊದಲನೆಯ ದಿನ ಈ ಗೂಳಿಯನ್ನು ಹತ್ತಿ ಮೈದಾನದಲ್ಲಿ ಬರುತ್ತೇನೆ. ನನ್ನನ್ನು ಹಿಂಬಾಲಿಸಿ ಬರುವ ಗುಲಾಮನು ಯಾರು ಬಲ್ಲೆಯಾ ? ಅವನು ಅಪರಾಧಿ—ದೇಶದ್ರೋಹಿ ! ನ್ಯಾಯಾಸ್ಥಾನದಲ್ಲಿ ಮರಣ ದಂಡನೆಗೆ ಗುರಿಯಾದವನು. ಹಾಗೆ ದಂಡನೆಗೆ ಗುರಿಯಾದವನನ್ನೂ ನನ್ನ ಬೆನ್ನ ಹಿಂದೆ ಕಳುಹಿಸುತ್ತಾರೆ. ಜನರ ಮುಂದೆ ಮಧ್ಯ ರಸ್ತೆಯಲ್ಲಿ ನಾನು ಇಳಿಯುತ್ತೇನೆ. ಸಾವಿಗೆ ಗುರಿಯಾದ ಆ ಗುಲಾಮ ನನ್ನ ಕುಶಲಕಲಾ ಪ್ರವೀಣತೆಯ ಪ್ರಸಾದವಾದ ಆ ರತ್ನಖಚಿತ ಬಟ್ಟಲನ್ನು ಎಲ್ಲರಿಗೂ ತೋರಿಸುತ್ತಾನೆ. ಬಳಿಕ ನಾನು ಎಲ್ಲರೆದುರಿಗೆ ಅವನ ತಲೆಯನ್ನೂ ತರಿಯುತ್ತೇನೆ. ನಾನವನಾ ತಲೆಯನ್ನೂ ತರಿಯದಿದ್ದರೆ ದಂಡನೆಗೆ ಗುರಿಯಾದ ಅವನು ಹೇಗೂ ಸಾಯತಕ್ಕವನೇ ಅಲ್ಲವೇ ? ಆದುದರಿಂದ ನಾನು ನಿರಪರಾಧಿಯಾದ ನರನೊಬ್ಬ

ನನ್ನೂ ಪ್ರತಿ ತಿಂಗಳೂ ಕೊಲ್ಲುತ್ತೇನೆಂದು ಜನರು ಆಡಿಕೊಂಡರೆ ಅದು ತಪ್ಪಾದೀತು. ಇರಲಿ ; ಇದೇ ನನ್ನ ಶೋಕಮಯ ಚರಿತ್ರೆ, ದೈವಭಕ್ತನಾದ ಯಾವನಾದರೊಬ್ಬ ಪವಿತ್ರಾತ್ಮನು ನನಗಾಗಿ ಪರಮಾತ್ಮನಲ್ಲಿ ಪ್ರಾರ್ಥನೆಯನ್ನೂ ಸಲ್ಲಿಸಿಯಾನು—ನನ್ನ ಬಯಕೆಯನ್ನು ಈಡೇರಿಸಿಯಾನು ಎಂದು ನಾನು ಕೋರುತ್ತ ಕಾಲ ತಳ್ಳುತ್ತಿದ್ದೇನೆ. ಮಿತ್ರ ! ನನ್ನ ಹುಚ್ಚಾಟದ ಕಥೆ ಇಲ್ಲಿಗೆ ಮುಗಿಯಿತು. ಅದಕ್ಕೆ ಇನ್ನೇನೂ ಸೇರಿಸಿ ಹೇಳಬೇಕಾಗಿರುವುದಿಲ್ಲ.

× × × × × × ×

ನಿಮ್‌ರೋಜ್ ರಾಜಕುಮಾರನು ತನ್ನ ಪ್ರಣಯ ಪ್ರಯತ್ನವು ವಿಫಲವಾದ ಕಥೆಯನ್ನು ಹೇಳಿ ಮುಗಿಸಿದಮೇಲೆ ನಾನು ಅಲ್ಲಿಂದಲ್ಲೆ ಪ್ರಮಾಣ ಮಾಡಿ ಹೇಳಿದೆ :

"ರಾಜಕುಮಾರಾ ! ಸಂಕಟಕರವಾದ ನಿನ್ನ ವೃತ್ತಾಂತವನ್ನು ಕೇಳಿ ನಾನು ಬಹುವಾಗಿ ಸಂತಾಪ ಪಡುತ್ತೇನೆ. ಪ್ರಣಯಾಭಿಲಾಷೆಯಿಂದ ನೀನು ವಿಫಲನಾಗಿ ವಿಶೇಷಯಾತನೆಗೆ ಗುರಿಯಾಗಿದ್ದೀಯೆ. ನಿನಗಾಗಿ ಈ ಪ್ರತಿಜ್ಞೆಯನ್ನು ಮಾಡುತ್ತೇನೆ. ಈ ಕ್ಷಣದಿಂದ ನಾನು ನನ್ನ ವೈಯಕ್ತಿಕ ಆಲೋಚನೆಗಳನ್ನು ಮರೆಯುತ್ತೇನೆ. ಬದಲಾಗಿ ನೊಂದ ನಿನ್ನ ಎದೆಗೆ ಶಾಂತಿಯನ್ನು ದೊರಕಿಸಿಕೊಡಲು, ಬತ್ತಿಹೋದ ನಿನ್ನ ಮನಸ್ಸಿನಲ್ಲಿ ಹೊಸ ಚೆಲುವೆಯನ್ನು ತೋರಿಸಲು ಅಖಂಡವಾಗಿ ದುಡಿಯುವುದೇ ಇನ್ನುಮುಂದೆ ನನ್ನ ಗುರಿಧ್ಯೇಯಗಳಾಗಿರುತ್ತವೆ. ನಿನ್ನ ಹಿತಸಾಧನೆಗಾಗಿ ನಾನು ಅಡವಿಗಳಲ್ಲೂ, ಗುಡ್ಡಗಳಲ್ಲೂ, ಗುಹೆಗಳಲ್ಲೂ, ಅಲೆದಲೆದು ಯಾವುದಾದರೊಂದು ಪರಿಹಾರವನ್ನು ಕಂಡುಹಿಡಿಯಲು ಪ್ರಯತ್ನಿಸುತ್ತೇನೆ. ನನಗೆ ಎದುರಾದ ಎಲ್ಲ ಅವಕಾಶಗಳನ್ನೂ, ಸನ್ನಿವೇಶಗಳನ್ನೂ, ಸದುಪಯೋಗಪಡಿಸಿ ಆ ಸುಂದರ ಲಲನಾಮಣಿಯನ್ನು ನೀನು ಮತ್ತೆ ಪಡೆದು ಸುಖವಾಗಿರಲಾದೀತೇ ಎಂದು ನೋಡುತ್ತೇನೆ. ನಾನು ಮೊಟ್ಟಮೊದಲು ನನ್ನ ರಾಜ್ಯವನ್ನು ಬಿಟ್ಟು ಹೊರಟಾಗ ಹತೀಮನ ಆದರ್ಶವನ್ನೂ ಎತ್ತಿ ಹಿಡಿಯಲು ಪ್ರಯತ್ನಿಸುವುದೇ ನನ್ನ ಗುರಿಯಾಗಿತ್ತು. ಈಗ ನನಗೆ ಆ ಗುರಿಯ ಸಾಧನೆಗೆ ಒಂದು ಸರಿಯಾದ ಅವಕಾಶವು ದೊರೆತಂತಾಯಿತು. ಮಿತ್ರ ! ರಾಜಕುಮಾರಾ ! ನಿನಗಾಗಿ ಹಗಲಿರುಳೂ ಶ್ರಮಿಸಿ ನಿನ್ನ ವ್ಯಾಕುಲವನ್ನು ನೀಗಿಸಲು ಬದ್ಧಕಂಕಣನಾಗಿದ್ದೇನೆ. ಅದುವರೆಗೂ ನೆಮ್ಮದಿಯಿಂದಿರು."

"ನನ್ನ ಪ್ರಮಾಣವನ್ನೂ—ಅವರ ಹಿನ್ನೆಲೆಯಲ್ಲಿದ್ದ ನನ್ನ ನಿಸ್ಪೃಹತೆಯನ್ನೂ ಕಂಡು ನಿಮ್‌ರೋಜ ಕುಮಾರನು ತನ್ನ ವಂದನೆಗಳನ್ನು ಒಪ್ಪಿಸಿದನು. ನಾನು ಅವನಿಂದ ಬೀಳ್ಕೊಂಡು ಅಲ್ಲಿಂದ ಹೊರಟುಹೋದೆ. ಕಳೆದ ಐದು ವರ್ಷಗಳಿಂದ ನಾನು ಕಾಡುಗುಡ್ಡಗಳಲ್ಲಿ ಮೈಮೇಲೆ ಮಣ್ಣೆರಚಿಕೊಳ್ಳುತ್ತ ಹಸಿವು ಬಾಯಾರಿಕೆಗಳನ್ನು ಮರೆತು ಅಲೆಯುತ್ತಿದ್ದೇನೆ. ಆದರೆ ನಿಮ್‌ರೋಜ್ ರಾಜಕುಮಾರನ ದುಃಖನಿವಾರಣೆಗೆ ಯಾವ ಉಪಾಯವೂ ಹೊಳೆಯಲಿಲ್ಲ. ಬಯಕೆಯು ಈಡೇರದೆ ಕಾಲವು ಕಳೆದು ಹೋಗುತ್ತಿದೆ. ಇದರಿಂದ ದಿನೇದಿನೇ ನಿರಾಶೆಯೇ ಬಲಿಯ ತೊಡಗಿದೆ. ಈಗ ನಿಮ್‌ರೋಜ್ ರಾಜಕುಮಾರನಿಗಾಗಲಿ, ನನಗಾಗಲಿ ಯಾತನೆಯು ಕೊನೆಗೊಳ್ಳುವ ಅವಕಾಶವು ಅಳಿಸಿ ಹೋಯಿತೆಂದೇ ನಾನು ಎಣಿಸುತ್ತೇನೆ. ಆಶಾಭಂಗದಿಂದ ವಚನಭ್ರಷ್ಟನಾಗುವುದಕ್ಕಿಂತ ಹೆಸರಳಿದು ಹಾಳಾಗುವುದೇ ಲೇಸೆಂದರಿತು ಪ್ರಾಣತ್ಯಾಗಮಾಡಲು ನಿಶ್ಚಯಿಸಿ ಗುಡ್ಡದ ಕಡಿದಾದ ಶಿಖರವನ್ನು ಹತ್ತಿ ಕೆಳಗುರುಳಬೇಕೆಂದಿದ್ದೆ. ಇನ್ನೇನು ನಾನು ಅಧಃಪಾತಾಳದಲ್ಲಿದ್ದ ಕಣಿವೆಯಲ್ಲಿ ಧುಮುಕಿ ನನ್ನ ಎಲುಬುಗಳು ಪುಡಿಪುಡಿಯಾಗಬೇಕು—ಆಗ ಮೊದಲನೆಯ ಫಕೀರನು ವರ್ಣಿಸಿದ ಆ ಅವ್ಯಕ್ತ ಸವಾರನು ನನಗೆ ಕಾಣಿಸಿಕೊಂಡು ನನ್ನನ್ನು ತಡೆದು, ಪ್ರಾಣತ್ಯಾಗ ಮಾಡಿಕೊಳ್ಳಬೇಡ ರೂಮ್ ದೇಶಕ್ಕೆ ನಡೆ, ನಿನ್ನಂತೆ ದುಃಖಕ್ಕೊಳಗಾದ ಇತರ ಫಕೀರರು ಅಲ್ಲಿ ಸೇರುತ್ತಾರೆ. ಇನ್ನು ಕೆಲವೇ ದಿವಸಗಳಲ್ಲಿ ನಿಮ್ಮೆಲ್ಲರ ಬಯಕೆಗಳೂ ಈಡೇರುತ್ತವೆ." ಎಂದು ಹೇಳಿ ಇಲ್ಲಿಗೆ ಕಳುಹಿಸಿದನು.

ಪವಿತ್ರಾತ್ಮ ಫಕೀರರೇ! ಕಟ್ಟಕಡೆಗೆ ನಾನು ನಿಮ್ಮನ್ನು ಕಂಡುದಾಯಿತು. ಈಗ ನನ್ನ ಮನಸ್ಸಿನಲ್ಲಿ ಹೊಸ ನಂಬಿಕೆಯು ಹುಟ್ಟಿದೆ. ಅನಂತ ಯಾತನೆಗಳಿಗೆ ಗುರಿಯಾದ ನಾವೊಬ್ಬೊಬರೂ ನಮ್ಮ ಹೃದಯಕ್ಕೆ ಅತ್ಯಂತ ಹಿತಕರವೆನಿಸುವ ನಮ್ಮ ನಮ್ಮ ಇಷ್ಟಾರ್ಥಗಳನ್ನು ಪಡೆಯುವ ಶುಭಕಾಲವು ಸಮೀಪಿಸಿದೆಯೆಂದು ದೃಢವಾಗಿ ನಂಬುತ್ತೇನೆ. ನಮ್ಮಿಬ್ಬರ ಜೀವನ ಕಥೆಗಳನ್ನು ಕೇಳಿದಿರಷ್ಟೆ. ಉಳಿದ ಇಬ್ಬರ ಕಥೆಯನ್ನು ಕೇಳಬೇಕು. ಆದರ ಈಗಾಗಲೇ ರಾತ್ರಿ ಬಹಳ ಹೊತ್ತು ಮಿಂಚಿದೆ. ಈಗ ವಿಶ್ರಾಂತಿ ತೆಗೆದುಕೊಳ್ಳೋಣ. ನಾಳೆ ಮತ್ತೆ ನಾವೆಲ್ಲರೂ ಇದೇ ಸ್ಥಳದಲ್ಲಿ ಸೇರಿ ಉಳಿದವರು ಕಥೆಗಳನ್ನೂ ಕೇಳೋಣ.

ಹೀಗೆಂದು ಎರಡನೆಯ ಫಕೀರನು ತನ್ನ ಕಥೆಯನ್ನು ಮುಗಿಸಿದನು.

# ಮೂರನೆಯ ಫಕೀರನು ಹೇಳಿದ ಕಥೆ

## ೨೮

ಮರುದಿನ ರಾತ್ರಿ ನಾಲ್ವರು ಫಕೀರರೂ ಎಂದಿನಂತೆ ನಿಶ್ಚಿತಪ್ರದೇಶದಲ್ಲಿ ಸೇರಿದರು, ರೂಮ್ ಸುಲ್ತಾನನೂ ಮರೆಯಾಗಿದ್ದನೆಂದು ಹೇಳಬೇಕಾದುದಿಲ್ಲ. ಆ ವೇಳೆಗೆ ತಮ್ಮ ತಮ್ಮ ಕಥೆಗಳನ್ನು ಇಬ್ಬರು ಫಕೀರರು ಹೇಳಿ ಮುಗಿಸಿದ್ದರಷ್ಟೆ. ಮೂರನೆಯ ಫಕೀರನು ತನ್ನ ಕಥೆಯನ್ನು ಈ ರೀತಿ ಹೇಳತೊಡಗಿದನು :

ನಾನು ಪರ್ಷಿಯಾದೇಶದ ರಾಜಕುಮಾರ, ಚಿಕ್ಕಂದಿನಲ್ಲಿ ನಾನು ಎಲ್ಲ ತೆರನಾದ ಆಟಪಾಟಗಳನ್ನು ಕಲಿತೆ. ನನಗೆ ಸುಮಾರು ಹದಿನೆಂಟು ವರ್ಷ ವಯಸ್ಸಾಗಿದ್ದಾಗ ನಾನು ನನ್ನ ಸಂಗಾತಿಗಳೊಂದಿಗೆ ಒಂದುದಿನ ದೂರದಕಾಡಿಗೆ ಬೇಟೆಗಾಗಿ ಹೋದೆ, ನನ್ನ ಕುದುರೆ ಬಹಳ ಚುರುಕಾಗಿದ್ದಿತು. ಅದು ನಿಂತಲ್ಲಿ ನಿಲ್ಲದೆ ಕಾಡುದಾರಿಯಲ್ಲಿ ನನ್ನನ್ನು ಬೇಗಬೇಗ ಕರೆದೊಯ್ದಿತು. ನನ್ನ ಸಂಗಾತಿಗರು ನನ್ನೊಡನೆ ಸರಿಸಮಾನರಾಗಿ ಸವಾರಿ ಮಾಡಲಾರದೆ ಹಿಂದೆಬಿದ್ದು ಕಾಡಿನಲ್ಲಿ ತಪ್ಪಿಸಿಕೊಂಡುಬಿಟ್ಟರು. ದಟ್ಟನಾದ ಅಡವಿಯ ಆ ಭಾಗದಲ್ಲಿ ಒಂದು ಸುಂದರವಾದ ಜಿಂಕೆಯು ನನ್ನ ಕಣ್ಣಿಗೆಬಿತ್ತು. ಅದರಕಾಲಿಗೆ ಚಿನ್ನದಗೆಜ್ಜೆಯನ್ನು ಕಟ್ಟಿತ್ತು. ನಾನು ಅದರಿಂದ ಆಕರ್ಷಿತನಾದೆ. ನನ್ನ ಸಂಗಾತಿಗಳನ್ನೂ ಮರೆತು ಆ ಮನೋಹರವಾದ ಜಿಂಕೆಯನ್ನೇ ಅಟ್ಟಿಸಿಕೊಂಡುಹೋದೆ. ಅದನ್ನು ಕೊಲ್ಲಬಾರದು. ಜೀವಸಹಿತಹಿಡಿದುಕೊಂಡು ಹೋಗಬೇಕು ಎಂದೆಣಿಸಿ ನಾನು ಅದನ್ನೇ ಹಿಂಬಾಲಿಸಿ ಅದು ಹೋದೆಡೆಗೆಲ್ಲ ಹೋದೆ. ಆದರೆ ಹತ್ತಿರ ಬರುವುದು ; ದೂರ ಓಡಿಹೋಗುವುದು ; ಮತ್ತೇ ಕಾಣಿಸಿಕೊಳ್ಳುವುದು ; ಇದ್ದಕ್ಕಿದ್ದಂತೆ ಎಲ್ಲಿಯೋ ಮಾಯವಾಗಿಬಿಡುವುದು ಹೀಗೆ ಜಿಂಕೆಯು ನನ್ನನ್ನು ಆಟವಾಡಿಸುತ್ತಿತ್ತು. ನನಗೆ ತಡೆಯಲಿಲ್ಲ. ಕೊನೆಗೆ ಅದನ್ನು ಬಾಣದಿಂದ ಗುರಿಯಿಟ್ಟು ಹೊಡೆದೆ. ಬಾಣವು ಜಿಂಕೆಯತೊಡೆಯಲ್ಲಿಹೊಕ್ಕು ಚಿಲ್ಲೆಂದು ರಕ್ತಸುರಿಸಿತು. ನೋವಿನಿಂದ

ತತ್ತ್ರಳಿಸಿ ; ಕುಂಟುತ್ತ ಜಿಂಕೆ ಓಡಿತು. ನಾನೂ ಅದನ್ನು ಹಿಂಬಾಲಿಸಿದೆ. ಅದು ಹೋದುದೆಲ್ಲಿ ? ಆ ಅರಣ್ಯದ ಒಂದು ಭಾಗದಲ್ಲಿದ್ದ ಒಂದು ನಯನಾನಂದಕರ ಸುಂದರಭವನದ ದ್ವಾರವನ್ನು ಪ್ರವೇಶಿಸಿ ಜಿಂಕೆಯು ಭವನದೊಳಗೆ ನುಗ್ಗಿತು ; ಈ ಅರಣ್ಯದಲ್ಲಿ ಇಂತಹ ಮನೋಹರ ಸೌಧವನ್ನು ಕಟ್ಟಿಕೊಂಡು ಇಲ್ಲಿ ವಾಸಿಸುವ ಮನುಷ್ಯರಾರು ಎಂದು ನಾನು ನನ್ನಲ್ಲೆ ತರ್ಕಿಸತೊಡಗಿದೆ. ಸ್ವಲ್ಪ ಕಾಲದಲ್ಲೆ ಒಳಗಿನಿಂದ ರೋದನವು ಕೇಳಿ ಬಂದಿತು :

"ಮಗು ! ನಿನ್ನನ್ನು ಬಾಣದಿಂದ ಘಾಯಗೊಳಿಸಿದ ಆ ನೀಚನಾರು ? ಆ ಪಾಪಿಯು ನನ್ನೆದುರಿಗೆ ಬಂದರೆ ಅವನ ಗತಿ ತೀರಿತು. ನರಳದಿರು ಕಂದ!......"

ನಾನು ಒಳಹೊಕ್ಕೆ. ಅವನೊಬ್ಬ ಅಪರಿಚಿತ ; ವೃದ್ಧನಂತೆ ಕಾಣಿಸುತ್ತಿದ್ದ. ಜಿಂಕೆಯು ನೆಲದಮೇಲೆ ಬಿದ್ದು ನೋವಿನಿಂದ ನರಳುತ್ತಿದೆ, ವೃದ್ಧನು "ಪಾಪಿ! ಪರಮಪಾಪಿ ! ನನ್ನ ಕಂದನನ್ನು ಘಾತಿಗೊಳಿಸಿದ ಪಾಪಿ !" ಎನ್ನುತ್ತ ಬಾಣವನ್ನು ಮೆಲ್ಲನೆ ಎಳೆಯುತ್ತಿದ್ದನು, ಜಿಂಕೆಯ ತೊಡೆಯಿಂದ ರಕ್ತವು ತಾನೇತಾನಾಗಿ ಸುರಿಯುತ್ತಿತ್ತು, ಇನ್ನು ಸುಮ್ಮನಿರುವುದು ಸರಿಯಲ್ಲವೆಂದು ನಾನು ವೃದ್ಧನ ಬಳಿ ಸಾರಿದೆ. "ಆ ಸುಂದರ ಪ್ರಾಣಿಯನ್ನು ಬಾಣದಿಂದ ಘಾಯಗೊಳಿಸಿದ ಪರಮ ಪಾಪಿ ನಾನೇ ! ಇದು ಸಾಕಿದ ಸಾರಂಗವೆಂದು ನನಗರಿವಾಗಲಿಲ್ಲ, ತಿಳಿಯದೆ ಮಾಡಿದ ತಪ್ಪನ್ನು ವಿಶಾಲ ಮನಸ್ಸಿನಿಂದ ಮನ್ನಿಸಬೇಕು" ಎನ್ನುತ್ತ ನಾನು ವೃದ್ಧನ ಕಾಲಿಗೆ ಬಿದ್ದೆ. ಬಳಿಕ ಬಾಣವನ್ನು ಮೆಲ್ಲಗೆ ಹೊರಗೆಳೆದೆ. ಆಗ ಆ ಪ್ರಾಣಿಯು ನೋವಿನಿಂದ ತತ್ತ್ರಳಿಸಿದುದನ್ನು ನೆನೆಸಿಕೊಂಡರೆ ಈಗಲೂ ನನಗೆ ಎದೆ ಝುಮ್ಮೆನ್ನಿಸುತ್ತದೆ. ವೃದ್ಧನು ಹಸಿರೆಲೆಗಳನ್ನು ಅರೆದು ಕಟ್ಟಿ ರಣದಿಂದ ಚಿಲುಮೆಯಂತೆ ಉಕ್ಕಿ ಬರುತ್ತಿದ್ದ ರಕ್ತವನ್ನು ನಿಲ್ಲಿಸಿದನು.

ಇದಾದಬಳಿಕ ಆ ಅಪರಿಚಿತನು ನನಗೆ ಊಟ ಉಪಚಾರಗಳನ್ನು ಮಾಡಿಸಿ, ವಿಶ್ರಾಂತಿ ತೆಗೆದುಕೊಳ್ಳುವಂತೆ ಹೇಳಿ ತಾನು ಒಳಗೊಂದು ಮಂಟಪದ ಬಳಿ ಕುಳಿತು ನವಮೋಹನಾಂಗಿಯಾದ ತರುಣಿಯೊಬ್ಬಳ ಪಾದದ ಬಳಿ ಕುಳಿತು 'ಅಯ್ಯೋ', ಎಂದು ಅಬ್ಬರಿಸಿ ರೋಧಿಸುತ್ತಿದ್ದನು, ನಾನು ಇಣಿಕಿ ನೋಡಿದೆ. ಆ ತರುಣಿ ಈತನಿಗೇನಾಗಬೇಕು ? ವೃದ್ಧನು ಅವಳಲ್ಲಿ ಅನುರಕ್ತ

ನಾಗಿರಬಹುದೇ? ಏನು ವಿಚಿತ್ರ? ವೃದ್ಧನಂತೆ ಕಾಣಿಸುವ ಈತನಿಗೂ—ನವ ತರುಣಿಗೂ ಎಲ್ಲಿಗೆಲ್ಲಿಯ ಪರಸಾಮ್ಯ? ಹಾಗಾದರೆ ಆ ಮೋಹದ ಅರಸಿ—ಆ ಅತುಳ ಲಾವಣ್ಯಮಯಿ ಈತನ ಮಗಳಿರಬಹುದೇ? ಹಾಗಿದ್ದರೆ ಈತನೇಕೆ ಆಕೆಯ ಪದತಲದಲ್ಲಿ ಕುಳಿತು ರೋದಿಸಬೇಕು? ಇಷ್ಟು ರೋದಿಸಿದರೂ ಅವಳೇಕೆ ಅಷ್ಟೊಂದು ನಿರ್ದಯಳಾಗಿ ತಟಸ್ಥಳಾಗಿರಬೇಕು? ನಾನು ನೋಡಿದೆ ಯೋಚಿಸಿದೆ. ನನಗೊಂದೂ ಅರ್ಥವಾಗಲಿಲ್ಲ. ಆ ವೇಳೆಗೆ ಎಷ್ಟೋ ಹೊತ್ತು ರೋದಿಸಿ ರೋದಿಸಿ ಸೋತುಹೋಗಿ ವೃದ್ಧನು ಮೂರ್ಛೆಯಿಂದ ಕೆಳಗೆ ಬಿದ್ದು ಬಿಟ್ಟನು, ಆದೇಸಮಯವನ್ನು ಸಾಧಿಸಿ ನಾನು ಸುಂದರ ಮೋಹನಾಂಗಿಯ ಬಳಿ ಸಾರಿದೆ. ಅವಳನ್ನು ಮಾತನಾಡಿಸಿದೆ, ಆದರೆ ಅವಳ ಕಣ್ಣುಗಳು ಚಲಿಸ ಲಿಲ್ಲ. ತನ್ನ ಸುಂದರವದನಾರವಿಂದದಿಂದ ನನ್ನೊಡನೆ ಒಂದೇ ಒಂದು ಮಾತನ್ನು ಆಡಬೇಕೆಂದು ಅವಳನ್ನು ಬೇಡಿದೆ. ಅವಳು ಚಲಿಸಲಿಲ್ಲ, ಬಾಯಿ ತೆರೆಯಲಿಲ್ಲ ನಿನ್ನ ಮೌನ ಮುದ್ರೆಯನ್ನು ತೊರೆದು ಒಂದೇ ಒಂದು ಮಾತನ್ನು ಆಡದಿದ್ದರೆ ನಾನು ಇಲ್ಲೇ—ನಿನ್ನೆದುರಿಗೆ ನನ್ನ ಪ್ರಾಣವನ್ನು ನೀಗಿಕೊಳ್ಳುತ್ತೇನೆ, ಎಂದು ಅವಳ ಪಾದಗಳನ್ನು ಮುಟ್ಟಿದೆ, ಅವು ಮಂಜುಗಡ್ಡೆಯಂತೆ ತಣ್ಣಗೆ ಕೊರೆಯು ತ್ತಿದ್ದುವು, ಆಗ ನನಗೆ ಸಂದೇಹವಾಯಿತು. ಅವಳ ಕೈಯನ್ನು ಮುಟ್ಟಿ ನೋಡಿದೆ. ಅದೂ ಕೊರೆಯುತ್ತಿತ್ತು. ಆಗ ನನಗರ್ಥವಾಯಿತು. ಇದು ಸುಂದರ ಕಲಾಸೃಷ್ಟಿ- ಎಂದು. ಆದರೂ ಆ ಪ್ರತಿಮೆಯಲ್ಲಿ ಎಷ್ಟೊಂದು ಕಲಾ ಕೌಶಲ್ಯವಿದ್ದಿತು. ಅದನ್ನು ಅಷ್ಟು ಸ್ವಾಭಾವಿಕವಾಗಿ ಕೆತ್ತಿದ ಆ ಶಿಲ್ಪಿ ಎಂತಹ ಅದ್ಭುತ ಪ್ರೌಢಿಮೆಯುಳ್ಳ ವನು! ಆ ಕಣ್ಣುಗಳಲ್ಲಿ ಅವನು ತುಂಬಿರುವ ಆ ಜೀವ ಕಳೆ ಎಷ್ಟು ರಮಣೀಯವೂ ಸ್ವಾಭಾವಿಕವೂ ಆಗಿತ್ತು! ಕ್ಷಣಕಾಲ ನಾನು ವಿಸ್ಮಯಾನಂದಕರ ಭಾವನೆಗೆ ಮಾರುಹೋಗಿ ಉನ್ಮತ್ತನಾದೆ. "ಈ ಸುಂದರ ಶಿಲ್ಪ ಕಾರ್ಯವೂ ಯಾವ ಪ್ರಕೀರ್ತಿತ ಅಭಿಜ್ಞನದಾಗಿರಬಹುದು?" ಎಂದು ನಾನು ಕೌತುಕದಿಂದ ತುಂಬಿ ಹೋದೆ.

ಆ ಬಳಿಕ ಅಪರಿಚಿತನು ಮೆಲ್ಲ ಮೆಲ್ಲನೆ ಎಚ್ಚೆತ್ತುಕೊಂಡ. ನಾನವನನ್ನು ಕೇಳಿದೆ: "ಅಯ್ಯಾ ಪುಣ್ಯವಂತನೆ! ನೇತ್ರಾನಂದಕರವೂ, ಅತ್ಯಂತ ಸ್ವಾಭಾ ವಿಕವೂ, ಜೀವಕಳೆಯಿಂದ ತುಂಬಿರುವುದೂ ಆದ ಈ ಶಿಲಾ ಪ್ರತಿಮೆ ಯಾರದು?

ಇದು ಇಲ್ಲಿಗೆ ಹೇಗೆ ಬಂದಿತು? ಈ ಮಂಗಳಮಯ ಪ್ರತಿಮೆಯು ಯಾವ ರಾಜ್ಯದ ಸುಂದರ ರಮಣೀಯದು? ನೀನೇಕೆ ಈ ಪ್ರತಿಮೆಯ ಪದತಲದಲ್ಲಿ ಬಿದ್ದು ಹೀಗೆ ಶೋಕಿಸುತ್ತಿರುವೆ? ಈ ವಿಚಾರಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವು ನನ್ನಲ್ಲಿ ಅತ್ಯಂತ ಪ್ರಬಲವಾಗಿದೆ."

"ಈ ವಿಚಾರಗಳನ್ನೆಲ್ಲ ಕಟ್ಟಿಕೊಂಡು ನೀನೇನು ಮಾಡುವಿಯಪ್ಪ? ನಾನು ಅನುಭವಿಸುತ್ತಿರುವ ಯಾತನೆಗಳು ನನ್ನ ಹಣೆಯಬರಹ. ಎಲ್ಲಿಂದಲೋ ಬಂದವನು ನೀನೇಕೆ ನಿನ್ನ ಮನಸ್ಸನ್ನು ಅವಸರವಾಗಿ ಸಂಕಟಕ್ಕೀಡುಮಾಡಿಕೊಳ್ಳುತ್ತಿಯೆ? ಹೋಗು ನಿನ್ನ ದಾರಿಯನ್ನು ಹಿಡಿದುಕೊಂಡು ಹೋಗು" ಎಂದ ಆ ವೃದ್ಧ.

ನನಗೆ ಸಹಿಸಲಿಲ್ಲ. "ನೀನು ಹೇಳಿಯೇ ತೀರಬೇಕು. ಈ ವಿಚಿತ್ರದ ಮರ್ಮವನ್ನು ನಾನು ತಿಳಿದುಕೊಳ್ಳದಿದ್ದರೆ ನನ್ನ ಪ್ರಾಣವು ಹಾರಿ ಹೋಗುತ್ತದೆ" ಎಂದೆಲ್ಲ ಅಂಗಲಾಚಿ ಬೇಡಿದೆ.

ವಿಧಿಯಿಲ್ಲದೆ ಅಪರಿಚಿತನು ನನಗೆ ಹೇಳಿದಕಥೆಯ ಸಂಕ್ಷಿಪ್ತ ಸಾರಾಂಶ ವಿದು :

"ನಾನು ಒಬ್ಬ ದೊಡ್ಡ ವ್ಯಾಪಾರಿಯಾಗಿದ್ದೆ. ಒಮ್ಮೆ ಒಂದು ಹಡಗಿನಲ್ಲಿ ಉತ್ತಮ ರೇಷ್ಮೆ ಉಡುಪುಗಳನ್ನು ತುಂಬಿಕೊಂಡು ಫ್ರಾಂಕಾಯ ದೇಶಕ್ಕೆ ಹೋದೆ. ಅಲ್ಲೊಂದು ಛತ್ರದಲ್ಲಿ ಇಳಿದುಕೊಂಡೆ. ನಾನೊಬ್ಬ ಪ್ರಮುಖವಿದೇಶೀ ವ್ಯಾಪಾರಿಯೆಂದೂ ನನ್ನಲ್ಲಿ ಬಹು ಬೆಲೆಬಾಳುವ ಜಗತ್ಪ್ರಸಿದ್ಧವಾದ ಬಟ್ಟೆ ಬರೆಗಳೂ ಇತರ ಸರಕುಗಳೂ ಇದ್ದವೆಂದು ರಾಜಕುಮಾರಿಗೆ ತಿಳಿಯಿತು. ಅವಳು ನನ್ನ ಸರಕುಗಳನ್ನು ನೋಡಬಯಸಿ ನನ್ನನ್ನು ತನ್ನ ಅಂತಃಪುರಕ್ಕೆ ಕರೆಯಿಸಿಕೊಂಡಳು. ನಮ್ಮಲ್ಲಿ ಇರುವಂತೆ ಆ ದೇಶದಲ್ಲಿ ಘೋಷಾಪದ್ಧತಿ ಇರುವುದಿಲ್ಲ. ನಾನು ರಾಜಕುಮಾರಿಯ ಅಂತಃಪುರಕ್ಕೆಹೋಗಿ, ಸೇವಕರ ಸಹಾಯದಿಂದ ನನ್ನ ಅತ್ಯಮೂಲ್ಯ ಸರಕುಗಳನ್ನು ಆಕೆಯಮುಂದೆ ಬಿಚ್ಚಿ ಹರಡಿದೆ. ಅವುಗಳನ್ನು ನೋಡಲು ರಾಜಕುಮಾರಿಯು ನನ್ನೆದುರಿಗೆ ಹಾಕಿದ್ದ ಸುಖಾಸನದಲ್ಲಿ ಮಂಡಿಸಿದಳು. ಅವಳು ಆ ಅಮೂಲ್ಯವಸ್ತು ವಸ್ತ್ರಗಳನ್ನು ಪರೀಕ್ಷಿಸುತ್ತಿದ್ದಂತೆ ನಾನು ಅವಳ ಸೌಂದರ್ಯಾತಿಶಯವನ್ನು ನೆಟ್ಟದೃಷ್ಟಿಯಿಂದ ನೋಡಿದೆ. ಅಂತಹಲಾವಣ್ಯ

ಮಯಿಯನ್ನು ನಾನು ಆದುವರೆಗೆ ನೋಡಿಯೇ ಇರಲಿಲ್ಲ. ಅವಳ ಮನಮೋಹಕ ರೂಪವನ್ನು ನೋಡುತ್ತ ನೋಡುತ್ತ ನಾನು ಮುಗ್ಧನಾಗಿಹೋದೆ. ಇದ್ದಕ್ಕಿದ್ದಂತೆ ಅವಳು "ಇವಕ್ಕೆಲ್ಲ ಎಷ್ಟು ಬೆಲೆ ?" ಎಂದು ಕೇಳಿದಳು, ಯಾವುದೋ ಕಲ್ಪನೆಯ ರಾಜ್ಯದಲ್ಲಿ ಓಲಾಡುತ್ತಿದ್ದ ನನ್ನ ಮನಸ್ಸು ಅವಳು ಕೇಳಿದ ಮಾತುಗಳಿಂದ ಎಚ್ಚರಗೊಂಡಿತು. "ಬೆಲೆಯಮಾತು ಹಾಗಿರಲಿ, ರಾಜಕುಮಾರಿಗೆ ಅವು ಒಪ್ಪಿದಲ್ಲಿ ನಾನು ಉಚಿತವಾಗಿಯೇ ಕೊಡಬಲ್ಲೆ" ಎಂದೆ.

"ಅದಾಗದು ; ಬೆಲೆ ಹೇಳು, ಸುಮ್ಮನೆ ಕೊಡುವುದು ಬೇಡ. ದೇವರ ದಯೆಯಿಂದ ನಮ್ಮಲ್ಲಿ ಸಾಕಷ್ಟು ಹಣವುಂಟು" ಎಂದಳು.

ನಾನು ಆ ಮಾತನ್ನು ಕೇಳಿ ನಾಚಿಕೊಂಡೆ. ವಿಧಿಯಿಲ್ಲದೆ ರಾಜಕುಮಾರಿಯು ಆರಿಸಿ ಎತ್ತಿಟ್ಟ ಸರಕುಗಳಿಗೆ ಬೆಲೆ ಹೇಳಿದೆ."

"ನಾಳೆ ಇಷ್ಟು ಹೊತ್ತಿಗೆ ಬಂದರೆ ಹಣವನ್ನು ಕೊಡುತ್ತೇನೆ; ಆಗಬಹುದೇ ? ಸರಕುಗಳನ್ನು ಇಲ್ಲಿಯೇ ಬಿಟ್ಟು ಹೋಗಬಹುದು" ಎಂದಳು,

ನನಗೆ ಅದರಿಂದ ಸಂತೋಷವೇ ಆಯಿತು. ಆ ಲೋಕೋತ್ತರ ಲಾವಣ್ಯಮಯಿಯನ್ನು ಮತ್ತೊಮ್ಮೆ ಕಣ್ಣುತುಂಬ ನೋಡುವ ಸುಯೋಗವು ದೊರೆತದ್ದಕ್ಕಾಗಿ ನಾನು ಅಲ್ಲಾನನ್ನು ಅನಂತವಾಗಿ ವಂದಿಸಿ, ನನ್ನ ಬಿಡಾರಕ್ಕೆ ತೆರಳಿದೆ, ಅಂದು ನನಗೆ ಊಟವೂ ಸಹ ಬೇಡವಾಯಿತು. ನಾನು ಉನ್ಮದಾವಸ್ಥೆಯಲ್ಲಿ ಬಿದ್ದೆ. ಮನಸ್ಸು ಚಂಚಲವಾಯಿತು, ಆ ರಾತ್ರಿಯೆಲ್ಲಾ ಹಾಸಿಗೆಯಲ್ಲಿ ಬಿದ್ದು ಅತ್ತಿಂದಿತ್ತ ಹೊರಳಾಡಿದೆ; ನಿದ್ರೆ ಹತ್ತಲಿಲ್ಲ, ಎಷ್ಟು ಹೊತ್ತಿಗೆ ಉದಯವಾದೀತು ? ಯಾವ ಘಳಿಗೆ ಆ ಸುಂದರ ಮನಮೋಹಿನಿಯನ್ನು ಮತ್ತೆ ನೋಡಬಲ್ಲೆ ? ಎಂಬ ಒಂದೇ ತವಕ ನನ್ನ ಮನಸ್ಸಿನಲ್ಲಿ.

ಮರುದಿನ ಗೊತ್ತಾದ ವೇಳೆಗೆ ರಾಜಕುಮಾರಿಯ ಸೇವಕರು ಬಂದು ನನ್ನನ್ನು ಅತ್ಯಂತ ಗೌರವದಿಂದ ಅಂತಃಪುರಕ್ಕೆ ಕರೆದುಕೊಂಡು ಹೋದರು. ರಾಜಕುಮಾರಿಯು ನನ್ನನ್ನು ಅತೀವ ಸತ್ಕಾರದಿಂದ ಬರಮಾಡಿಕೊಂಡು ತನ್ನೆದುರಿಗೆ ನನಗಾಗಿ ಹಾಕಿದ್ದ ಆಸನದಲ್ಲಿ ಕುಳಿತುಕೊಳ್ಳುವಂತೆ ಸೂಚಿಸಿದಳು. ಮೊದಲೇ ಏರ್ಪಡಿಸಿದ್ದಂತೆ ಅವಳು ನನ್ನನ್ನು ಊಟ ಉಪಚಾರಗಳಿಂದ ಸತ್ಕರಿಸಿದಳು. ಬಳಿಕ ನನ್ನನ್ನು ಕುರಿತು "ಹಣವು ಸಿದ್ಧವಾಗಿದೆ ; ಬೇಕಾದರೆ ಈಗಲೇ

ತೆಗೆದುಕೊಂಡು ಹೋಗಬಹುದು ಎಂದು ಅಷ್ರಾಫು (ಚಿನ್ನದ ಮೊಹರು) ಗಳು ತುಂಬಿದ ಹತ್ತು ಥೈಲಿಗಳನ್ನು ತರಿಸಿ ನನ್ನೆದುರಿಗೆ ಇರಿಸಿದಳು, ನಾನು ದೀರ್ಘ ವಾಗಿ ಯೋಚಿಸಿದೆ. ಇನ್ನೆರಡು ಮೂರು ತಿಂಗಳಾದರೂ ನಾನು ಆ ನಗರದಲ್ಲಿ ನಿಲ್ಲಬೇಕಾದ ಪ್ರಮೇಯವಿತ್ತು, ಆದುದರಿಂದ ಅವಳನ್ನು ಕುರಿತು "ಹಣವನ್ನು ಈಗ ಬಿಡಾರಕ್ಕೆ ತೆಗಿಸಿಕೊಂಡುಹೋಗಿ ಏನು ಮಾಡಲಿ? ಇಲ್ಲೇ ಇರಲಿ. ಊರಿಗೆ ಹೋಗುವಾಗ ತೆಗೆದುಕೊಂಡು ಹೋಗುತ್ತೇನೆ" ಎಂದೆ. ಇದರಿಂದ ರಾಜಕುಮಾರಿಯ ಮನಸ್ಸು ಹರ್ಷಗೊಂಡು ನನ್ನಲ್ಲಿ ಒಲಿಯಿತೆಂದೇ ಆ ಸಮ ಯದಲ್ಲಿ ನನಗೆ ಭಾಸವಾಯಿತು.

ಬಳಿಕ ರಾಜಕುಮಾರಿಯು ಹಸನ್ಮುಖಳಾಗಿ ತನ್ನ ಸೇವಕರನ್ನು ಹೊರಗೆ ಕಳುಹಿಸಿ ನನ್ನನ್ನು ಏಕಾಂತವಾಗಿ ಕೇಳಿದಳು :

"ನನಗೊಂದು ಪುಟ್ಟ ಉಪಕಾರವನ್ನು ಮಾಡಬಲ್ಲೆಯಾ? ಮಾಡುವು ದಾದರೆ ನಾನು ನಿನಗೆ ಅನಂತ ಕಾಲಕ್ಕೂ, ನಾನು ಋಣಿಯಾಗಿರುತ್ತೇನೆ."

ನಾನು ಬಯಸಿದ್ದೂ ಇಂತಹ ಅವಕಾಶವನ್ನೇ, ಆ ಮೋಹನಮೂರ್ತಿಯ ಅತುಳ ಲಾವಣ್ಯವನ್ನು ನಾನು ಕೊಂಡಾಡುತ್ತ ಹೇಳಿದೆ :

'ಜಗನ್ಮೋಹನೆ! ನಿನಗಾಗಿ ಈ ಗುಲಾಮನು ಯಾವ ಕೆಲಸ ಮಾಡು ವುದಕ್ಕೂ ಸಿದ್ಧನಾಗಿದ್ದಾನೆ, ಹೇಳು; ಅದು ಯಾವುದೇ ಕೆಲಸವಾಗಿರಲಿ, ಧನದಿಂದ ಜಯಿಸಬಹುದಿದ್ದರೆ ನನ್ನೆಲ್ಲ ಐಶ್ವರ್ಯವನ್ನೂ ನಾನು ವಿನಿಯೋಗಿಸು ತ್ತೇನೆ, ಶಕ್ತಿ ಸಾಮರ್ಥ್ಯಗಳಿಂದ ಸಾಧಿಸುವ ಕೆಲಸವಾಗಿದ್ದರೆ ನನ್ನಪ್ರಾಣವನ್ನೇ ಪಣವನ್ನಾಗಿಟ್ಟು ಹೋರಾಡುತ್ತೇನೆ."

"ಹಾಗಾದರೆ ನನ್ನ ಮೊಹರು ನಿಶಿ ಇರುವ ಈ ಚೀಟಿಯನ್ನು ತೆಗೆದುಕೊ ಊರ ಹೊರಗೆ ಉತ್ತರದಿಕ್ಕಿನಲ್ಲಿ ಒಂದು ಸರೋವರವಿದೆ. ಅದರ ಅಂಚಿನಲ್ಲೇ ಬಲಭಾಗದಲ್ಲಿ ಒಂದು ಉದ್ಯಾನವನವಿದೆ. ಅಲ್ಲಿ ಹೋಗಿ ನನ್ನ ಈ ಉಂಗುರ ವನ್ನು ತೋರಿಸು; ನಿನ್ನನ್ನು ಒಳಗೆ ಬಿಡುತ್ತಾರೆ. ಅಲ್ಲೊಂದು ದೊಡ್ಡ ಆಲದ ಮರಕ್ಕೆ ನೇತು ಹಾಕಿದಂತೆ ಒಂದು ಬೋನು ಇದೆ. ಅದರೊಳಗಡೆ ಒಬ್ಬ ನಿರ್ಭಾಗ್ಯ ಮಾನವನು ಬಂಧಿತನಾಗಿದ್ದಾನೆ. ಅವನನ್ನು ಕಂಡು, ನಾನು ಕೊಟ್ಟುದಾಗಿ ಹೇಳಿ ಈ ಚೀಟಿಯನ್ನು ಕೊಡು, ಅದನ್ನು ಓದಿ ಅವನೇನು

ಪ್ರತ್ಯುತ್ತರವನ್ನು ಕೊಡುತ್ತಾನೋ ಕೇಳಿಕೊಂಡು ಬಾ; ಈ ಕೆಲಸವನ್ನು ನೀನು ಜಯಪ್ರದವಾಗಿ ಮಾಡಿಕೊಂಡು ಬಂದರೆ! ನಿನಗೆ ನನ್ನಿಂದ ಅಪಾರವಾದ ಸನ್ಮಾನವುಂಟು."

ಹೀಗೆಂದು ರಾಜಕುಮಾರಿ ಹೇಳಿದಳು, ನಾನು ಆಗಬಹುದೆಂದು ಹೇಳಿ, ಅವಳನ್ನು ಬಹುವಾಗಿ ವಂದಿಸಿ, ಅವಳಿಂದ ಉಂಗುರವನ್ನು ಚೀಟಿಯನ್ನು ತೆಗೆದುಕೊಂಡು ಹೊರಟೆ, ಉತ್ತರದಿಕ್ಕಿನಲ್ಲಿ ಊರಹೊರಗೆ ಅವಳು ಹೇಳಿದಂತೆ ಸರೋವರವಿತ್ತು, ಅದರ ಬಲಭಾಗಕ್ಕೆ ಆ ಸುಂದರ ಉದ್ಯಾನ ವನವೂ ಗೋಚರಿಸಿತು, ಅದರ ಹೊರಬಾಗಿಲಲ್ಲಿ ಇಬ್ಬರು ಪಹರೆ ಕಾಯುತ್ತಿದ್ದರು, ರಾಜಕುಮಾರಿ ಕೊಟ್ಟಿದ್ದ ಉಂಗುರವನ್ನು ಅವರಿಗೆ ತೋರಿಸಿದೆ. ಅವರು ಮೊದಮೊದಲು ಒಬ್ಬರನ್ನೊಬ್ಬರು ನೋಡಿ ಹುಬ್ಬು ಗಂಟಕ್ಕಿದರು. ತರುವಾಯ ಸನ್ನೆಮಾಡಿ ಒಳಗೆ ಹೋಗುವಂತೆ ಅನುಮತಿಸಿದರು. ಸ್ವಲ್ಪ ದೂರದಲ್ಲೇ ಬೋನು ಕಂಡಿತು. ಓಡೋಡಿ ಅದರಬಳಿಗೆ ಹೋದೆ. ಅದರಲ್ಲಿ ಸುಂದರ ತರುಣನೊಬ್ಬನು ನಿರ್ಭಾಗ್ಯದೆಸೆಯಿಂದ ಬಂಧಿತನಾಗಿದ್ದುದನ್ನು ಕಂಡೆ. ರಾಜಕುಮಾರಿ ಕೊಟ್ಟಿದ್ದ ಚೀಟಿಯನ್ನು ಅವನಿಗೆ ಕೊಟ್ಟೆ, ಅವನು ಅದನ್ನು ಬಿಚ್ಚಿ ಓದಿದ; ಮತ್ತೆ ಓದಿದ. ಅವನ ಕಣ್ಣುಗಳಿಂದ ಘಳಘಳನೆ ಶೋಕಾಶ್ರುಗಳು ಹರಿಯತೊಡಗಿದುವು. ಅವನು ತನ್ನ ಕಾಲುಗಳಿಗೆ ಹಾಕಿದ್ದ ಬೇಡಿಗಳನ್ನೂ, ಕೈಗಳಿಗೆ ಕಟ್ಟಿದ್ದ ಸರಪಣಿಗಳನ್ನೂ ನೋಡಿ ನೋಡಿ ಬಿಕ್ಕಿ ಬಿಕ್ಕಿ ಅಳತೊಡಗಿದ ತನ್ನ ದುಃಖವನ್ನು ನೋಡಿಕೊಂಡಬಳಿಕ ನನಗೆ ಉತ್ತರ ಹೇಳುವನೆಂದು ನಾನು ನಿರೀಕ್ಷಿಸುತ್ತ ನಿಂತೆ, ನನ್ನ ಮುಖವು ಬೋನಿನಕಡೆ ತಿರುಗಿತ್ತು. ಅದೇ ಸಮಯಕ್ಕೆ ಸರಿಯಾಗಿ ಎಲ್ಲಿಂದಲೋ ಕತ್ತಿಯನ್ನು ಹಿಡಿದ ಇಬ್ಬರು ಗುಲಾಮರು ಬಂದು ನನ್ನನ್ನು ಖಡ್ಗದಿಂದ ಘಾತಿಸತೊಡಗಿದರು, ನಾನು ಇಂತಹ ಸಂಘಟನೆಯನ್ನು ಎದುರುನೋಡಲಿಲ್ಲ. ಹೇಗೋ ನನ್ನ ಸೊಂಟಕ್ಕೆ ಕೈಹಾಕಿ ಒರೆಯಿಂದ ಕತ್ತಿಯನ್ನು ಎಳೆದು ಆದಷ್ಟು ಸಾಹಸದಿಂದ ನಾನೂ ಆದಷ್ಟು ಅವರನ್ನು ಘಾಯಗೊಳಿಸಿದೆ. ಆದರೆ ಖಡ್ಗ ಕಾಳಗಕ್ಕೆ ನಾನು ಸಿದ್ಧನಾಗಿರಲಿಲ್ಲ. ಅವರಾದರೋ ಸಿದ್ಧರಾಗಿಯೇ ಬಂದಿದ್ದರು. ಮೇಲಾಗಿ ಅವರು ಇಬ್ಬರು—ನಾನು ಒಬ್ಬನೇ, ಬಲಾಬಲಗಳು ಸರಿಹೊಂದಲಿಲ್ಲ. ಅತಿಕ್ಷಿಪ್ರ

ದಲ್ಲಿಯೇ ಅವರು ನನ್ನನ್ನು ತೀವ್ರವಾಗಿ ಘಾಯಗೊಳಿಸಿ, ಕೆಳಗೆ ತಳ್ಳಿದರು. ನಾನು ಎಚ್ಚರತಪ್ಪಿ ಕೆಳಗೆ ಬಿದ್ದು ಎಷ್ಟೋ ಹೊತ್ತಾಗಿರಬಹುದು, ನನಗೆ ಪ್ರಜ್ಞೆಬಂದಾಗ ಕಣ್ಣು ಬಿಟ್ಟುನೋಡುತ್ತೇನೆ, ಆಗ ನಾನು ಆ ಉದ್ಯಾನವನ ದಲ್ಲಿರಲಿಲ್ಲ. ಬದಲಾಗಿ ನನ್ನನ್ನು ಬಿಳಿಯ ದುಪ್ಪಟಿಯಲ್ಲಿ ಸುತ್ತಿ ಆ ಇಬ್ಬರೂ ಹೊತ್ತುಕೊಂಡು ಹೋಗುತ್ತಿದ್ದಾರೆ. ನನಗೆ ತ್ರಾಣವು ಕುಂದಿಹೋಗಿತ್ತು. ಆದರೂ ಸಣ್ಣ ಧ್ವನಿಯಲ್ಲಿ ನನ್ನನ್ನು ಹೊತ್ತವರನ್ನು ಕರೆದೆ, ಅವರು "ಅರರೇ! ಇವನು ಸತ್ತಿಲ್ಲ; ಬದುಕಿದ್ದಾನೆ, ಈಗೇನುಮಾಡುವುದು?" ಎಂದು ತಮ್ಮಲ್ಲೇ ಮಾತನಾಡಿಕೊಂಡರು, ಆಗ ನಾನು "ನನ್ನನ್ನು ಮೊದಲು ಕೆಳಗಿಳಿಸಿ ಹೇಳು ತ್ತೇನೆ" ಎಂದೆ. ಅವರು ನನ್ನನ್ನು ಸರೋವರದ ಕಟ್ಟೆಯಮೇಲಿಳಿಸಿದರು.

"ನಿಮಗೆ ಹೊನ್ನು ಬೇಕೇ?" ಎಂದು ನಾನು ಕೇಳಿದೆ.

"ಹೊನ್ನು? ಎಷ್ಟು ಹೊನ್ನು ಕೊಡಬಲ್ಲೆ?" ಅವರಿಬ್ಬರೂ ಆತುರದಿಂದ ಕೇಳಿದರು.

"ಎಷ್ಟು ಬೇಕಾದಷ್ಟು.... ಹೇಳಿ, ಬೇಗ ಹೇಳಿ."

"ಆಳಿಗೆ ನೂರು ಕೊಡಬಲ್ಲೆಯಾ?"

"ನೂರೇಕೆ? ಇನ್ನೂರೇ ಕೊಡುತ್ತೇನೆ. ನಿರಪರಾಧಿಯೂ, ಪರದೇಶಿಯೂ ಆದ ನನ್ನನ್ನು ನಿಷ್ಕಾರಣವಾಗಿ ಈ ಗತಿಗೆ ತಂದ ನಿಮಗೆ ಎಷ್ಟುಕೊಟ್ಟರೆ ನಿಮ್ಮ ಋಣ ಹರಿಯುತ್ತದೆ? ಇರಲಿ; ನೀವು ಗುಲಾಮರು. ನಿಮ್ಮನ್ನು ಹೇಳಿಕೊಂಡೇನು ಸುಖ? ನನ್ನ ಬಿಡಾರಕ್ಕೆ ಸಾಗಿಸಿ ನನ್ನನ್ನು" ಎಂದು ನಾನು ತಂಗಿದ್ದ ಸ್ಥಳದ ಗುರುತನ್ನು ಹೇಳಿದೆ, ಅವರು ನನ್ನನ್ನು ಅಲ್ಲಿಗೆ ಕೊಂಡೊಯ್ದರು. ಅಲ್ಲಿ ನನ್ನ ವ್ಯಾಪಾರದ ಗೆಳೆಯರಿದ್ದರು. ಅವರಿಗೆ ಹೇಳಿ, ಗುಲಾಮರಿಗೆ ಇನ್ನೂರು ಹೊನ್ನು ಕೊಡಿಸಿದೆ, ಅವರ ಆನಂದಕ್ಕೆ ಮಿತಿಮೇರೆಗ ಳಿರಲಿಲ್ಲ. ಅವರು ನನ್ನ ಕಾಲಿಗೆ ಬಿದ್ದು ಮನ್ನಿಸಬೇಕೆಂದು ನೂರಾರು ಸಲ ಬೇಡಿಕೊಂಡರು, "ಗುಲಾಮರೇನು ಮಾಡಿಯಾರು? ಒಡೆಯನ ಮಾತನ್ನು ಅವರು ಕೇಳಲೇಬೇಕಲ್ಲವೇ?" ಎನ್ನುತ್ತ ನಾನವರನ್ನು ಕಳುಹಿಸಿಕೊಟ್ಟೆ. ಬಳಿಕ ನನ್ನ ಗೆಳೆಯರು ಹಕೀಮನನ್ನು ಕರೆತಂದರು. ಆತ ಬಹಳ ಘಟ್ಟಿಗ. ನನ್ನ ಬೆನ್ನಮೇಲೆ, ತಲೆಯಮೇಲೆ, ತೋಳಿನಮೇಲೆ ಖಡ್ಗದಿಂದಾಗಿದ್ದ ಘಾಯ

ಗಳನ್ನು ತೊಳೆದು ಔಷಧಿಯನ್ನು ಕಟ್ಟಿ ರಕ್ತದ ಸೋರುವಿಕೆಯನ್ನು ನಿಲ್ಲಿಸಿದನು. ಹಿರಿಯ ಪ್ರಮಾಣದಲ್ಲಿ ಅಫೀಮನ್ನು ಅವನಿಚ್ಛೆಯಂತೆ ನಾನು ಸೇವಿಸಿದನು. ಅತ್ಯಲ್ಪಕಾಲದಲ್ಲೆ ನನಗೆ ನಿದ್ರೆ ಹತ್ತಿತು. ನಾನು ಆ ರಾತ್ರಿ ಮತ್ತು ಮರು ದಿನವೆಲ್ಲಾ—ಸಂಜೆಯವರೆಗೆ ನಿದ್ರೆಮಾಡಿದೆ. ನಾನು ಎದ್ದಾಗ ನನ್ನ ಗೆಳೆಯರು ನನ್ನ ಪಕ್ಕದಲ್ಲೆ ಕಾವಲು ಕಾಯುತ್ತ ಕುಳಿತಿದ್ದರು. ನನಗೆ ವಿಶ್ರಾಂತಿಯಿಂದ ಎಷ್ಟೋ ಮೇಲೆನಿಸಿತು. ಮರುದಿನವೂ, ಮೂರನೆಯ ದಿನವೂ ಹಕೀಮನು ಘಾಯಗಳನ್ನೂ ಬಿಚ್ಚಿ ಹೊಸ ಔಷಧಿಯನ್ನು ಹಾಕಿ ಕಟ್ಟಿದನು. ಅಫೀಮಿನ ಸೇವನೆಯಿಂದ ಸುಖವಾಗಿ ನಿದ್ರೆ ಬಂದು ನನ್ನ ನೋವು ಎಷ್ಟೋ ಕಡಿಮೆ ಯಾದಂತಾಯಿತು.

ತರುವಾಯ ನನಗೆ ತಿಳಿಯಬಂದ ಸಮಾಚಾರವಿದು ? ಬೋನಿನಲ್ಲಿ ಬಂಧಿತನಾದ ತರುಣನು ಆ ಊರ ರಾಜಕುಮಾರನಂತೆ ಅವರ ತಂದೆ ಸಾಯು ವಾಗ ತನ್ನ ತಮ್ಮ, ಅದಾಗಿ ಈಗ ರಾಜ್ಯವಾಳುತ್ತಿರುವ ಅರಸನನ್ನು ತನ್ನ ಬಳಿಗೆ ಕರೆದು ' ತಮ್ಮಾ ! ರಾಜಕುಮಾರನಿನ್ನೂ ಚಿಕ್ಕವನು. ಅವನ ಹೆಸರಿನಲ್ಲಿ ನೀನೇ ರಾಜ್ಯವಾಳುತ್ತಿರು. ಅವನು ವಯಸ್ಸಿಗೆ ಬಂದಾಗ ಅವನಿಗೆ ನಿನ್ನ ಕುಮಾರಿಯನ್ನು ಕೊಟ್ಟು ಲಗ್ನಮಾಡಿ, ಅವನನ್ನು ಸಿಂಹಾಸನದಲ್ಲಿ ಕೂರಿಸು ' ಎಂದಿದ್ದನಂತೆ. ರಾಜನ ಮರಣಾನಂತರ ಕೃತ್ರಿಮಿಯಾದ ತಮ್ಮನು ರಾಜ ಕುಮಾರನನ್ನು ಅಂತಃಪುರದಲ್ಲೆ ಇಟ್ಟು ಬೆಳೆಸುತ್ತಿದ್ದ. ಹೆಂಗಸರೊಡನೆಯೇ ಓಡಾಡುತ್ತಿದ್ದ ಅವನಿಗೆ ಧೈರ್ಯವೀರ್ಯಗಳೇ ಬತ್ತಿಹೋದಂತಾದವು. ಆದರೆ ರಾಜಕುಮಾರಿ ಅವನನ್ನು ವಿಪುಲವಾಗಿ ಪ್ರೀತಿಸತೊಡಗಿದಳು. ಅವ ರಿಬ್ಬರೂ ಪರಸ್ಪರ ಒಬ್ಬರನ್ನೊಬ್ಬರು ಮದುವೆಮಾಡಿಕೊಳ್ಳುವುದಾಗಿ ನಿರ್ಧರಿಸಿ ಕೊಂಡರು. ಗತಿಸಿದ ಅರಸನ ಆಕಾಂಕ್ಷೆಯೂ ಅದೇತೆರನಾಗಿದ್ದಿತು. ಆದರೆ ಅಂತಹ ವಿವಾಹದಿಂದ ತಾನು ರಾಜ್ಯವನ್ನು ಬಿಟ್ಟುಕೊಡಬೇಕಾಗುತ್ತದೆಂದರಿತ ಚಿಕ್ಕಪ್ಪನು ಯುವರಾಜನನ್ನು ಉದ್ಯಾನವನದಲ್ಲಿ ದೊಡ್ಡದೊಂದು ಪಂಜರದಲ್ಲಿ ಬಂದಿಯಾಗಿರಿಸಿದನು. ಅವನಿಗೂ, ರಾಜಕುಮಾರಿಗೂ ಯಾವ ಸಂಪರ್ಕವೂ ಇರಬಾರದೆಂಬುದೇ ಅವನ ಆಶಯವಾಗಿದ್ದಿತು. ಆದರೆ ರಾಜಕುಮಾರಿಯು ನನ್ನನ್ನು ಉಪಾಯಾಂತರದಿಂದ ರಾಜಕುಮಾರನ ಬಳಿಗೆ ಕಳುಹಿಸಿದ್ದನ್ನು

ಗೂಢಾಚಾರರಿಂದ ತಿಳಿದುಕೊಂಡ ರಾಜನು ಗುಲಾಮರಿಗೆ ನನ್ನನ್ನು ಕೊಲೆ ಮಾಡಿಬಿಡಬೇಕೆಂದು ಆಜ್ಞೆಮಾಡಿ ಅವರನ್ನು ನನ್ನ ಬೆನ್ನಹಿಂದೆ ಕಳುಹಿಸಿದ್ದ. ಆದರೆ ದೈವಾಜ್ಞೆಯಿಂದ ನಾನು ಬದುಕಿಕೊಂಡೆ. ನನಗೊದಗಿದ ದುರವಸ್ಥೆಯನ್ನು ತಿಳಿದು ರಾಜಕುಮಾರಿಯು ನನಗಾಗಿ ಬಹುವಾಗಿ ಮನನೊಂದು ತನ್ನ ವೈದ್ಯನನ್ನು ಸಹ ನನ್ನ ಬಳಿ ಕಳುಹಿಸಿಕೊಟ್ಟಳು. ಆತನು ನಲವತ್ತು ದಿವಸಗಳು ನನ್ನ ಹುಣ್ಣುಗಳಿಗೆ ಔಷಧಿಯನ್ನು ತಿಕ್ಕಿ ಸಂಪೂರ್ಣವಾಗಿ ಗುಣಪಡಿಸಿದನು. ತರುವಾಯ ನನಗೆ ಸ್ನಾನಮಾಡಿಸಿ, ರಾಜಕುಮಾರಿಯೇ ಕಳುಹಿಸಿದ್ದ ಉತ್ತಮ ಉಡುಪುಗಳಿಂದ ನನ್ನನ್ನಲಂಕರಿಸಿ ಅವಳ ಬಳಿಗೆ ಕರೆದೊಯ್ದರು. ಅವಳು ನನ್ನಲ್ಲಿ ಅನಂತವಾಗಿ ಪರಿತಾಪಗೊಂಡು ಉತ್ತಮ ಸದ್ಗತಿಯನ್ನು, ಅಪಾರ ಧನವೊತ್ತವನ್ನೂ ಕೊಟ್ಟು 'ನೀನಿನ್ನು ಈ ನಗರದಲ್ಲಿ ನಿಂತು ಅಪಾಯಕ್ಕೆ ಗುರಿಯಾಗಬೇಡ, ನಿನ್ನ ದೇಶಕ್ಕೆ ಹೊರಟುಹೋಗು' ಎಂದಳು. ಆದರೆ ನನಗೆ ಅವಳನ್ನು ಬಿಟ್ಟು ಹೊರಟುಬರಲು ಮನಸ್ಸಾಗಲಿಲ್ಲ. ಅದನ್ನರಿತ ಅವಳು ನಿನಗೊದಗಿರುವ ಅಪಾಯದ ಅರಿವು ನಿನಗಾದಂತೆ ಕಾಣಿಸಲಿಲ್ಲ. ನಾನು ಹೇಳುವುದನ್ನು ಆಗ ಯಥಾರ್ಥ ಸ್ಥಿತಿಯನ್ನೂ ನೀನೇ ಗ್ರಹಿಸಬಲ್ಲೆ ಎನ್ನುತ್ತ ಹೇಳಿದ್ದೇನೆಂದರೆ :

" ನೀನು ಘಾಯಗೊಂಡ ಬಳಿಕ ರಾಜನು ಕುಪಿತನಾಗಿ ರಾಜಕುಮಾರನನ್ನು ತೀರಿಸಿಬಿಡಬೇಕೆಂದು ತೀರ್ಮಾನಿಸಿದನು. ವಜೀರನು ಆಲೋಚಿಸಿದ ಪ್ರಕಾರ ಅವನಿಗೆ ಊಟದಲ್ಲಿ ವಿಷವನ್ನು ಬೆರೆಸಿಕೊಟ್ಟರು. ಆದರೆ ದೈವಾನುಗ್ರಹದಿಂದ ಆ ವಿಷವು ಅವನ ಮೈಗಂಟಲಿಲ್ಲ. ತರುವಾಯ ವಜೀರನು ಮತ್ತೊಂದು ಉಪಾಯವನ್ನು ರಾಜನಿಗೆ ಸೂಚಿಸಿದನು ; ರಾಜಕುಮಾರನನ್ನು ನಾನೇ ಖಡ್ಗದಿಂದ ತನ್ನೆದುರಿಗೆ ಕಡಿದುಹಾಕಬೇಕೆಂದು ರಾಜಾಜ್ಞೆಯಾಯಿತು. ನನ್ನನ್ನೂ ಉದ್ಯಾನವನಕ್ಕೆ ಕರೆದುಕೊಂಡು ಹೋದರು. ರಾಜನು ಅಲ್ಲಿ ಸಿಂಹಾಸನದಲ್ಲಿ ಕುಳಿತಿದ್ದಾನೆ. ಅವನ ಪಕ್ಕದಲ್ಲಿ ವಜೀರನು ನಿಂತಿದ್ದಾನೆ. ಸೇವಕರು ಪಂಜರವನ್ನು ನೆಲಕ್ಕಿಳಿಸಿ ಬಾಗಿಲನ್ನು ತೆರೆದು ರಾಜಕುಮಾರನನ್ನು ಹೊರಗೆ ಕರೆತಂದರು. ನನ್ನ ಕೈಯ್ಯಲ್ಲಿ ಖಡ್ಗವನ್ನು ಕೊಟ್ಟು ಅವನ ತಲೆಯನ್ನು ಕಡಿದುಹಾಕು ಎಂದು ರಾಜನು ಆಜ್ಞೆ ಮಾಡಿದ. ಕಡಿದುಹಾಕುವಳಂತೆ

ನಟಿಸುತ್ತ ರಾಜಕುಮಾರನ ಬಳಿ ಹೋದವಳೇ ನಾನು ಕತ್ತಿಯನ್ನು ದೂರಕ್ಕೆಸೆದು ನನ್ನ ಪ್ರೀತಿಪಾತ್ರನಾದ ಪ್ರೇಯುಸನನ್ನು ಅತ್ಯಾತುರದಿಂದ ಆಲಂಗಿಸಿದೆನು." ಆಗ ರಾಜಕುಮಾರನು "ನಾನು ನನ್ನ ಪ್ರೇಯುಸಿಯು ತೆಕ್ಕೆಯಲ್ಲಿ ಈ ಸ್ವರ್ಗೀಯ ಆನಂದವನ್ನು ಅನುಭವಿಸುತ್ತಿರುವಂತೆ ನನ್ನನ್ನು ಕಡಿದು ಹಾಕಲಿ, ಬೇಡ ವೆನ್ನಲಿಲ್ಲ" ಎಂದ. ವಜೀರನು ಕತ್ತಿಯನ್ನು ಹಿಡಿದು ನನ್ನನ್ನು ಕಡಿದುಹಾಕಲು ನೋಡಿದ. ಆದರೆ ಅದೇ ಸಮಯಕ್ಕೆ ಸರಿಯಾಗಿ ಎಲ್ಲಿಂದಲೋ ಒಂದು ಬಾಣವು ದೂರಿಬಂದು ವಜೀರನ ತಲೆಯನ್ನು ಎರಡು ಹೋಳು ಮಾಡಿತು. ರಾಜನು ಬೆದರಿದ, ಪರಿವಾರದವರೂ ಬೆದರಿದರು. ಆತುರಾತುರದಿಂದ ರಾಜ ಕುಮಾರನನ್ನು ಬೋನಿನೊಳಕ್ಕೆ ತಳ್ಳಿಸಿ ಎಲ್ಲರೂ ಅಲ್ಲಿಂದ ಹೊರಟುಹೋದರು. ಆದರನಂತರ ರಾಜನು ನಿನ್ನಮೇಲೆ ಗೂಢಚಾರರನ್ನು ಹಾಕಿಸಿದ್ದಾನೆ. ನೀನು ನಿನ್ನ ಗೆಳೆಯರನ್ನು ಹೊರಡಿಸಿಕೊಂಡು ಆದಷ್ಟು ಬೇಗನೆ ಇಲ್ಲಿಂದ ಹೊರಟು ಹೋಗು.'

ರಾಜಕುಮಾರಿಯು ಈರೀತಿ ಹೇಳಿದಮೇಲೆ ಇನ್ನೂ ಅಲ್ಲಿ ನಿಲ್ಲುವುದು ಉಚಿತವಲ್ಲದೆಂದು ನನಗೂ ತೋರಿತು. ನಾನು ಹೊರಡಲನುವಾದೆ. ಆದರೆ ಆ ಸುಂದರ ಮೋಹನಾಂಗಿಯಲ್ಲಿ ನಾನು ಪರವಶನಾಗಿದ್ದೆ. ಆದರೆ ಅವಳನ್ನು ವಿವಾಹವಾಗಲು ಮೇಲ್ಕಂಡ ಕಾರಣಗಳಿಂದ ಅವಕಾಶವಿರಲಿಲ್ಲ. ಬಿಟ್ಟು ಹೋಗಲು ಮೊದಲೇ ಮನಸ್ಸಿಲ್ಲ. ಆಗ ನಾನು ಅವಳನ್ನು ಕೇಳಿದೆ:

'ನವಮೋಹನಾಂಗಿ! ನನಗೊಂದು ಉಪಕಾರ ಮಾಡುವೆಯಾ?'

'ಸಾಧ್ಯವಿದ್ದಲ್ಲಿ ಸಂತೋಷದಿಂದ ಮಾಡುತ್ತೇನೆ.'

'ನಿನ್ನ ರಾಜ್ಯದಲ್ಲಿರುವ ಅತ್ಯಂತ ಪ್ರವೀಣರಾದ ಶಿಲ್ಪಿ ಕಲಾಕುಶಲರಿಗೆ ಹೇಳಿ ನಿನ್ನ ಆಕಾರವನ್ನೂ, ರೂಪವನ್ನೂ, ಥಳಥಳಿಸುವ ಹೊಳಪನ್ನೂ, ಕಾಂತಿ ಯುಕ್ತವಾದ ಕಣ್ಣುಗಳನ್ನೂ ಬಿಂಬಕ್ಕೆ ಪ್ರತಿ ಬಿಂಬವಾಗಿ ಚಾಚೂತಪ್ಪದಂತೆ ಹೋಲುವ ಶಿಲಾಪ್ರತಿಮೆಯೊಂದನ್ನು—ಜೀವ ಕಳೆಯನ್ನುಳ್ಳ ಪ್ರತಿಮೆಯನ್ನು— ಮಾಡಿಸಿ ನನಗೆ ಕಳುಹಿಸಬೇಕು.'

ನಾನು ಬೇಡಿದೆ. ಅವಳು ಆಗಲಿ ಎಂದಳು. ಅದೇ ಶಿಲಾಮೂರ್ತಿಯೇ ಈಗ ನಿನ್ನೆದುರಿನಲ್ಲಿರುವುದು. ನನ್ನ ನಾಡಿಗೆ ಹಿಂತಿರುಗಿದಮೇಲೆ ನಾನು

ಈ ಸ್ಥಳಕ್ಕೆ ಬಂದೆ. ಇಲ್ಲಿ ಈ ಭವನವನ್ನು ಕಟ್ಟಿಸಿದೆ. ರಾಜಕುಮಾರಿಯು ತನ್ನ ವಚನದಂತೆ ಕಳುಹಿಸಿಕೊಟ್ಟ—ನೀನು ಹೇಳುವಂತೆ—ಜೀವಕಳೆಯಿಂದ ತುಂಬಿದ—ನನ್ನ ಆರಾಧ್ಯದೇವತೆಯಾದ ಈ ಶಿಲಾಮೂರ್ತಿಯನ್ನು ನಾನಿಲ್ಲಿ ಪ್ರತಿಷ್ಠಿಸಿದೆ. ನನ್ನ ಸೇವಕರಿಗೂ ಅನುಚರರಿಗೂ ಬೇಕಾದಷ್ಟು ಬಹುಮಾನ ವನ್ನು ಕೊಟ್ಟು ಇಲ್ಲಿಂದ ಕಳುಹಿಸಿದೆ, ಅವರೆಲ್ಲ ನನ್ನನ್ನು ಕೃತಜ್ಞತೆಯಿಂದ ನೆನಸುತ್ತ ನನಗೆ ಬೇಕಾದ ವಸ್ತು ವಸ್ತ್ರಗಳನ್ನೆಲ್ಲ ನಗರದಿಂದ ನನಗೆ ಅಡಿಗಡಿಗೆ ತಂದುಕೊಡುತ್ತಿದ್ದಾರೆ, ನಾನುಮಾತ್ರ ಏಕಾಂಗಿಯಾಗಿ, ಈ ನಿರ್ಜನ ಪ್ರದೇಶ ದಲ್ಲಿ ಪ್ರಕೃತಿ ಸೌಂದರ್ಯವನ್ನನುಭವಿಸುತ್ತ, ಈ ಶಿಲಾ ಮೂರ್ತಿಯನ್ನು ಅನು ದಿನವೂ ಎಡೆಬಿಡದೆ ಆರಾಧಿಸುತ್ತಿದ್ದೇನೆ. ಇದು ನನ್ನ ಸೌಂದರ್ಯೋಪಾಸನೆ! ಇದರಿಂದಲೇ ನನಗೆ ಅಮಿತ ಆನಂದ! ಎದೆಯ ಆಸೆ ಕೈಗೂಡದುದರಿಂದ ಅಡಿ ಗಡಿಗೆ ನಾನು ಅತ್ತು ಅತ್ತು ವಿರಹದ ಹೊರೆಯನ್ನು ಅಷ್ಟಿಷ್ಟು ಕಳಗಿಳುಹು ತ್ತಿದ್ದೇನೆ. ಇದೇ ನನ್ನ ಚರಿತ್ರೆ.''

ಅಪರಿಚಿತನ ಕಥೆಯು ಈ ರೀತಿ ಮುಗಿಯಿತು.

× × × × ×

ಶಿಲಾಪ್ರತಿಮೆಯ ಆರಾಧಕನಿಂದ ನಾನು ಕೇಳಿ ತಿಳಿದುಕೊಂಡ ವಿಚಾರ ಗಳನ್ನು ನನ್ನ ಮನಸ್ಸಿನಲ್ಲೇ ಗುಣಾಕಾರ ಹಾಕಿದೆ. ಕೊನೆಗೆ ಫಕೀರನ ವೇಷ ವನ್ನು ಧರಿಸಿ ನಾನು ಫ್ರಾಂಕಾಯಿರ ನಗರವನ್ನು ಕುರಿತು ಹೊರಟೆ. ಹಡಗಿನ ಪ್ರಯಾಣವು ಅತ್ಯಂತ ಪ್ರಯಾಸಕರವಾಗಿತ್ತು. ಒಂದು ತಿಂಗಳನಂತರ ನಾನು ಆ ನಗರವನ್ನು ಮುಟ್ಟಿದೆ. ಕೆಲವೇ ದಿವಸಗಳಲ್ಲಿ ಆ ಊರಿನ ದಾರಿ ಕೇರಿಗಳ ಲ್ಲೆಲ್ಲ ಹುಚ್ಚನಂತೆ ಅಲೆದಾಡಿದೆ. ರಾಜಕುಮಾರಿಯ ಅಂತಃಪುರವನ್ನು ಪ್ರವೇಶಿಸಿ ಅವಳ ದರ್ಶನವನ್ನು ಪಡೆಯಬೇಕೆಂದು ಅವಕಾಶಗಳನ್ನು ಹುಡುಕು ತ್ತಿದ್ದೆ. ನನ್ನನ್ನು ಅವಳಿಗೆ ಪರಿಚಯಮಾಡಿಸಿ ಕೊಡುವವರು ಯಾರೂ ಇರಲಿಲ್ಲ. ನನ್ನ ಪ್ರಯತ್ನಗಳು ಪದೇಪದೇ ವಿಫಲವಾಗುತ್ತಿದ್ದುದನ್ನು ಕಂಡು ನಾನು ಮನದಲ್ಲೇ ಮರುಗಿದೆ.

ಒಂದು ದಿವಸ ನಾನು ಪೇಟೆ ಸ್ಥಳದಲ್ಲಿ ನಿಂತಿದ್ದೆ. ಇದ್ದಕಿದ್ದಂತೆ ನೆರೆದಿದ್ದ ಜನರೆಲ್ಲ ಚಿಲ್ಲಾಪಿಲ್ಲಿಯಾಗಿ ಒಡಿ ದಿಕ್ಕೆಟ್ಟು ಓಡಿಹೋಗುತ್ತಿದ್ದರು. ವರ್ತಕರು ತಮ್ಮ ಅಂಗಡಿ ಬಾಗಿಲುಗಳನ್ನು ಮುಚ್ಚುತ್ತಿದ್ದರು, ಆಹಾ! ಆ

ಮುನ್ನ ಪೇಟೆಸ್ಥಳವು ಜನರಿಂದ ಕಿಕ್ಕಿರಿದು ಹೋಗಿತ್ತು, ಈಗ ಕ್ಷಣಕಾಲದಲ್ಲಿ ಅದೆಲ್ಲ ನಿರ್ಜನವಾಗಿ ಸ್ಮಶಾನದಂತೆ ಕಂಡಿತು, ರುಸ್ತುಮನಂತೆ ಕಾಣಿಸುತ್ತಿದ್ದ ಒಬ್ಬ ಯುವಕನು ತನ್ನ ಎರಡು ಹಸ್ತಗಳಲ್ಲಿಯೂ ಬಿಚ್ಚುಗತ್ತಿಗಳನ್ನು ಹಿಡಿದು ಸಿಂಹದಂತೆ ಘರ್ಜಿಸುತ್ತ ಪಕ್ಕದಗಲ್ಲಿಯಿಂದ ನುಗ್ಗಿಬಂದನು. ಆವನನ್ನು ಕಂಡರೆ ಅವನು ಹುಚ್ಚನಂತೆ ಕಾಣಿಸುತ್ತಿದ್ದನು. ಅವನು ರೋಷಾವೇಶದಿಂದ ಅರಚುತ್ತಿದ್ದನು. ಆವನಹಿಂದೆ ಇಬ್ಬರು ಗುಲಾಮರು ಒಂದು ಕೃತಕಶವವನ್ನು ಹೆಗಲಮೇಲೆ ಹೊತ್ತುಕೊಂಡು ಬರುತ್ತಿದ್ದರು. ಆ ದೃಶ್ಯವನ್ನು ಕಂಡ ನಾನು 'ಶವ' ವಾಹಕರಹಿಂದೆ ಹೊರಟು ಅವರು ಹೋದಂತ್ತೆಲ್ಲ ಅವನನ್ನು ಹಿಂಬಾಲಿಸ ಬೇಕೆಂದು ನಿರ್ಧರಿಸಿದೆ. ಮುನ್ನುಗ್ಗುತ್ತ ಆ ಆವೇಶಪೂರಿತ ತರುಣನು ಅರಮನೆ ಯಂತೆ ಕಾಣುತ್ತಿದ್ದ ಒಂದು ಸುಂದರ ಭವನದ ಮುಂದುಗಡೆಹೋದ. ಆವನನ್ನು ಹಿಂಬಾಲಿಸ ಕೂಡದೆಂದು ಎಷ್ಟೋಜನರು ನನ್ನ ಬಟ್ಟೆಯನ್ನು ಹಿಡಿದೆಳೆದು ಎಚ್ಚರಿಸಿದರು. ಆದರೂ ನಾನು ನನ್ನ ಸಂಕಲ್ಪದಿಂದ ವಿಮುಖನಾಗಲಿಲ್ಲ. ಆ ವೇಳೆಗೆ ಅವನು ನನ್ನಕಡೆ ತಿರುಗಿ ನನ್ನನ್ನು ಎರಡು ತುಂಡಾಗಿ ಕತ್ತರಿಸಿ ಹಾಕುತ್ತೇನೆಂದು ಆರ್ಭಟಿಸಿದನು. ನಾನು ನಿಂತಲ್ಲೆ ನಿಂತೆ. ಎಳ್ಳಷ್ಟೂ ಕದಲದೆ ನಾನು "ಆಗಬಹುದುಪುಣ್ಯವಂತ! ನನ್ನ ರಕ್ತವನ್ನು ಸುರಿಸು: ಅದಕ್ಕಾಗಿ ನಾನು ನಿನ್ನನ್ನು ಮನ್ನಿಸುತ್ತೇನೆ. ಬಾಳಲ್ಲಿ ನನ್ನ ಅತೀವ ಯಾತನೆಗಳು ನನ್ನನ್ನು ದಹಿಸುತ್ತಿವೆ. ಆದುದರಿಂದ ಸಾಯ ಬಯಸಿಯೇ ಹತಾಶನಾದ ನಾನು ನಿನ್ನ ಖಡ್ಗಕ್ಕೆ ತಲೆಯೊಡ್ಡಿ ನಿಂತಿದ್ದೇನೆ" ಎಂದೆ.

"ನೀನು ಯಾರು? ನಿನ್ನ ಧೈರ್ಯ ಸ್ಥೈರ್ಯಗಳು ನನ್ನನ್ನು ಮುಗ್ಧ ಗೊಳಿಸುತ್ತಿವೆ. ಪ್ರಾಣವನ್ನು ಕಳೆದುಕೊಳ್ಳುವಂತಹ ಅಪರಿಮಿತ ಕಷ್ಟವೇನು ನಿನಗೊದಗಿದ್ದು? "

ತರುಣನು ನನ್ನನ್ನು ಕೇಳಿದ. ಇಷ್ಟೇ ಸಾಕು ಎನ್ನುತ್ತ ನಾನು ಅವನನ್ನು ಕುರಿತು ಹೇಳಿದೆ:

"ಸ್ವಲ್ಪಕಾಲ ಕುಳಿತುಕೊಳ್ಳಪ್ಪ! ನನ್ನ ಚರಿತ್ರೆ ದೊಡ್ಡದು. ಬೇಸರವನ್ನು ಹುಟ್ಟಿಸಬಹುದು. ನಾನು ಪ್ರೇಮಯಾತನೆಗೆ ಸಿಲುಕಿ ನಿಮಿಷ ನಿಮಿಷಕ್ಕೂ ವಿರಹಾಗ್ನಿಯಿಂದ ಬೆಂದು ಹೋಗುತ್ತಿದ್ದೇನೆ. ನನಗೀಗ ಪ್ರಾಣದ ಅಂಜಿಕೆ ಯಿಲ್ಲ. "

ನನ್ನ ಮಾತನ್ನು ಕೇಳಿದನಂತರ ತರುಣನು ತನ್ನ ನಡುಕಟ್ಟನ್ನು ಬಿಚ್ಚಿ ಒತ್ತಟ್ಟಿಗಿರಸಿ, ಪಕ್ಕದಕೊಳದಲ್ಲಿ ಕೈಕಾಲು ತೊಳೆದು, ತಾನು ತಂದಿದ್ದ ಆಹಾರ ದಲ್ಲಿ ನನಗೆ ಸ್ವಲ್ಪಕೊಟ್ಟು ತಾನೂ ಸ್ವಲ್ಪ ತಿಂದು ಮುಗಿಸಿದನು. ಬಳಿಕ ಅವನು ನನ್ನನ್ನು ಕುರಿತು ಕೇಳಿದನು:

“ಈಗ ಹೇಳಯ್ಯ! ಏನು ನಿನಗೊದಗಿದ ಕಷ್ಟಗಳು ? ”

ನಾನು ಹೇಳಿದೆ! ಕಾಡಿನಲ್ಲಿ ಜಿಂಕೆಯನ್ನು ಬೇಟೆಯಾಡಿದ ಮೊದಲು ಆ ಅಪರಿಚಿತನನ್ನೂ ಕಂಡು, ಅವನು ಶಿಲಾಮೂರ್ತಿಯ ಮುಂದೆ ಔಪಾಸನೆ ಮಾಡುತ್ತಿದ್ದುದನ್ನೂ, ಜೀವಕಳೆಯಿಂದ ಕೂಡಿದ ಆ ಶಿಲಾಮೂರ್ತಿಯನ್ನು ಕಂಡೊಡನೆಯೆ ನನ್ನಲ್ಲಿ ಕೆರಳಿ ಬಂದ ಅಪಾರ ಪ್ರೇಮಯಾತನೆಯನ್ನು ಉಪ ಶಮನಮಾಡಿಕೊಳ್ಳಲು ಫ್ರಾಂಕಾಯಿರ ನಗರಕ್ಕೆ ಬಂದು, ಎಲ್ಲೆಲ್ಲೂ ಸುತ್ತಿ ಅಲೆದು, ರಾಜಕುಮಾರಿಯ ದರ್ಶನಕ್ಕೆ ಅವಕಾಶ ದೊರೆಯದೆ ಬೇಸರದಿಂದ ಪೇಟೆಯ ಸ್ಥಳಕ್ಕೆ ಬಂದಾಗ ನಾನು ಕಂಡ ಅತಿಶಯವನ್ನೂ, ಅದರ ನಂತರ ನಾನು ಅವನನ್ನು ಹಿಂಬಾಲಿಸಿದ ವಿಚಾರವನ್ನು ಒಂದೂ ಬಿಡದೆ ಸವಿಸ್ತಾರವಾಗಿ ಅವನಲ್ಲಿ ಹೇಳಿದೆ. ಆಗವನು ನಿಟ್ಟುಸಿರು ಬಿಟ್ಟು ಹೇಳಿದ :

“ಹಾಯ್ ದುರ್ದೈವವೆ! ಆ ನಿರ್ಭಾಗ್ಯ ರಾಜಕುಮಾರಿಯ ದೆಸೆಯಿಂದ ಈ ವೇಳೆಗೆ ಎಷ್ಟೊಂದು ಕುಟುಂಬಗಳು ನಿರ್ನಾಮವಾಗಿ ಹೋದುವು! ಇರಲಿ; ನಿನ್ನ ವಿರಹ ವ್ಯಾಧಿಗೆ ನನ್ನ ಬಳಿ ಒಂದು ಉತ್ತಮ ಔಷಧಿಯಿದೆ” ಎಂದು ಹೇಳುತ್ತ ಒಬ್ಬ ಹಜಾಮನನ್ನು ಕರೆದು ನನ್ನ ತಲೆಯನ್ನು ನುಣಪಾಗಿ ಬೋಳಿ ಸುವಂತೆ ಹೇಳಿದ, ಬಳಿಕ ನನಗೆ ಮಜ್ಜನ ಸ್ನಾನಮಾಡಿಸಿ ಉತ್ತಮ ಉಡುಪು ಗಳಿಂದ ನನ್ನನ್ನು ಅಲಂಕರಿಸಿದ. ಆ ಬಳಿಕ ರಾಜಕುಮಾರಿಯನ್ನು ಕುರಿತು ಕೆಲ ಸಮಾಚಾರಗಳನ್ನೂ ತರುಣನು ನನಗೆ ಹೇಳಿದ :

“ನೀನು ನೋಡುತ್ತಿರುವ ಈ ಕೃತಕ ಶವ ಯಾರನ್ನು ಸೂಚಿಸುತ್ತದೆ ಬಲ್ಲೆಯಾ? ಅದು ಇತ್ತೀಚಿಗೆ ಕೊಲೆ ಮಾಡಲ್ಪಟ್ಟ ಆ ನಿರ್ಭಾಗ್ಯ ರಾಜಕುಮಾ ರನ ಸಂಕೇತ, ನಾನವನ ಮಲ ತಮ್ಮ, ಅವನಿಗಾದ ಅವಮಾನ, ಅನ್ಯಾಯ, ಆಪಘಾತಗಳನ್ನೂ ಪ್ರತಿಭಟಿಸಿ ಪ್ರಜೆಗಳಿಗೆ ಅವನ ಸ್ಮರಣೆಯುಂಟಾಗಲೆಂದೂ, ಈ ಕೃತ್ರಿಮಿ, ದೇಶ ದ್ರೋಹಿ ರಾಜನಿಗೆ ನನ್ನ ಪ್ರತಿಭಟನೆಯೆಂದೂ ಸೂಚಿಸುವ

ಸಂಕೇತವಿದು. ಮೊದಲನೆಯ ವಜೀರನು ತನ್ನ ಕೃತ್ರಿಮ ಸಂಧಾನದಲ್ಲಿ ವಿಫಲನಾದಮೇಲೆ, ರಾಜನು ಮತ್ತೊಬ್ಬ ವಜೀರನಿಂದ ರಾಜಕುಮಾರನನ್ನು ಕೊಲ್ಲಿಸಿದನು. ನಾನು ಆ ವಜೀರನನ್ನು ತಕ್ಷಣ ಕತ್ತರಿಸಿ ಹಾಕಿ ಸೇಡನ್ನು ತೀರಿಸಿಕೊಂಡೆ. ರಾಜನನ್ನೂ ಕೊಂದು ತೀರಿಸುವುದರಲ್ಲಿದ್ದೆ. ಆದರೆ ಆ ಹೇಡಿ ಪ್ರಮಾಣಮಾಡತೊಡಗಿದ....'ಅಪರಾಧಿ ನಾನಲ್ಲ ನನ್ನ ಪ್ರಾಣವನ್ನೂ ಉಳಿಸು' ಎಂದೆಲ್ಲ ಅಂಗಲಾಚಿ ಬೇಡಿದ. ಇಂತಹ ನೀಚನ ರಕ್ತದಲ್ಲಿ ನನ್ನ ಖಡ್ಗವನ್ನು ತೋಯಿಸಿ ಅದನ್ನು ಅಪವಿತ್ರ ಮಾಡಲೇ ಎಂದು ಬೇಸರಗೊಂಡು ಆ ಮೂರ್ಖನನ್ನೂ ಕಾಲಲ್ಲಿ ಒದ್ದು 'ತೊಲಗಿ ಹೋಗು—ಅಯೋಗ್ಯ !' ಎಂದು ನೂಕಿದೆ. ಅಂದಿನಿಂದಾಚೆಗೆ ಇದುವರೆಗೂ ಶುಕ್ಲಪಕ್ಷದ ಪ್ರತಿ ಪ್ರಥಮ ಗುರುವಾರವೂ ನಾನು ಗತಿಸಿದ ಆ ನನ್ನ ಮಲ ಅಣ್ಣನ ಸಂಕೇತ ಸೂಚಕವಾದ ಈ ಕೃತಕ ಶವವನ್ನೂ ಹೊರಿಸಿಕೊಂಡು ಮೆರವಣಿಗೆ ಹೊರಟು ಜನರಿಗೆ ನಡೆದು ಹೋದ ಅಕ್ರಮ ಅನ್ಯಾಯಗಳನ್ನು ಕುರಿತು ಅವರನ್ನು ಎಚ್ಚರಿಸುತ್ತಿದ್ದೇನೆ."

ಆ ದಿನ ಸೂರ್ಯನು ಪಶ್ಚಿಮಾಂಬುಧಿಯಲ್ಲಿ ಮುಳುಗುವ ಸಂಧ್ಯಾಸಮಯವದು. ಆಗ ಆ ಆಗಂತುಕನು "ನಡೆ, ನಿನ್ನನ್ನು ರಾಜಕುಮಾರಿಯ ಬಳಿ ಕರೆದುಕೊಂಡು ಹೋಗುತ್ತೇವೆ. ಹೊತ್ತುಕೋ ಈ 'ಶವ'ವನ್ನು ನಿನ್ನ ತಲೆಯಮೇಲೆ, ನಾವೀಗ ಹೋಗುತ್ತಿರುವುದು ರಾಜಕುಮಾರಿಯ ಉದ್ಯಾನವನಕ್ಕೆ, ಭದ್ರ ! ಅಲ್ಲಿ ಮಾತನಾಡುವುದೆಲ್ಲ ನಾನೇ, ನಿನ್ನ ಬಾಯಿಗೆ ಬೀಗ ಹಾಕಿದಂತಿರಬೇಕು, ತಿಳಿಯಿತೇ ?" ಎಂದು ಹೇಳಿದ.

ಆಗಲಿ ಎನ್ನುತ್ತ ನಾನು 'ಶವ'ವನ್ನು ತಲೆಯಮೇಲೆ ಹೊತ್ತು ಉದ್ಯಾನವನ್ನೂ ತಲಪಿದೆ. ಅಲ್ಲೊಂದೆಡೆ ಅಪೂರ್ವ ನವರತ್ನಗಳಿಂದ ಅಲಂಕರಿಸಲ್ಪಟ್ಟು ದೀಪಸ್ತೋಮದಿಂದ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದ್ದ ಒಂದು ಮಂಟಪದ ಬಳಿ ಹೋದೆವು. ಆ ಮಂಟಪದಮೇಲೆ ಎತ್ತರವಾದ ವೇದಿಕೆಯಮೇಲೆ ಹಾಸಿದ್ದ ಮೆತ್ತನೆಯ ಹಾಸಿಗೆಯಮೇಲೆ 'ಶವ'ವನ್ನು ಇಳಿಸಲಾಯಿತು. ಬಳಿಕ ನಾನೂ, ಆಗಂತುಕನೂ ಒಂದು ಪಕ್ಕಕ್ಕೆ ಸರಿದು, ಅಲ್ಲೊಂದು ಮರದ ಕೆಳಗಿದ್ದ ಪೀಠದಮೇಲೆ ಕುಳಿತೆವು.

ಮರುಕ್ಷಣದಲ್ಲೇ ರಾಜಕುಮಾರಿಯು ಅಲ್ಲಿಗೆ ಚಿತ್ತೈಸಿದಳು. ಅವಳ ಮುಖದಲ್ಲಿ ಕ್ರೋಧವೂ, ಸಂತಾಪವೂ ಎದ್ದೆದ್ದು ಕಾಣುತ್ತಿದ್ದುವು. ಅವಳು ನೇರವಾಗ ಹೋಗಿ ಮಂಟಪದಲ್ಲಿ 'ಶವ'ದ ಬಳಿ ಕುಳಿತಳು. ಆಗಂತುಕನು

ಅವಳನ್ನು ಸಮೀಪಿಸಿ ಮೃತನ ಆತ್ಮಶಾಂತಿಗಾಗಿ ಪ್ರಾರ್ಥನೆಯನ್ನು ಪಠಿಸಿದನು. ಬಳಿಕ ಆತನು ನನ್ನ ವಿಚಾರವಾಗಿ ಅವಳೊಡನೆ ಮಾತನಾಡಿದುದರಲ್ಲಿ ನನ್ನ ಕಿವಿಯಲ್ಲಿ ಬಿದ್ದದ್ದು ಇವು :

"ಎಲೈ ಜಗನ್ಮೋಹನ ರಾಜಕುಮಾರಿ! ಪರ್ಷಿಯಾ ದೇಶದ ರಾಜ ಕುಮಾರನು ನಿನ್ನ ಸ್ಫುರದ್ರೂಪದ ವಿಚಾರವನ್ನು ಕೇಳಿ ನಿನ್ನಲ್ಲಿ ಮೋಹಗೊಂಡು, ತನ್ನ ಸಿಂಹಾಸನವನ್ನು ತ್ಯಜಿಸಿ, ಕಷ್ಟನಷ್ಟಗಳನ್ನು ಗಮನಿಸದೆ ಫಕೀರನ ವೇಷ ದಿಂದ ಇಲ್ಲಿಗೆ ಬಂದಿರುವನು. ಅವನು ನಿನ್ನಲ್ಲಿ ಅಪಾರ ರೀತಿಯಲ್ಲಿ ಅನುರಕ್ತ ನಾಗಿದ್ದಾನೆ. ಪ್ರೇಯಸಿಯನ್ನು ಕಾಣುವ ಪ್ರಯತ್ನಗಳಲ್ಲಿ ವಿಫಲನಾಗಿ, ವಿರ ಹಾಗ್ನಿಯಿಂದ ದಹಿಸಲ್ಪಟ್ಟು, ದಿಕ್ಕುತೋಚದೆ, ಹತಾಶನಾದ ತನ್ನನ್ನು ಕೊಂದು ಬಿಡುವಂತೆ ತನ್ನ ಶಿರಸ್ಸನ್ನು ನನ್ನ ಕತ್ತಿಗೆದುರಾಗಿ ಒಡ್ಡಿನಿಂತನು. ಇವನೊಬ ಅಚಲ ಪ್ರೇಮೋಪಾಸಕ! ಅವನು ಮಾಡಿದ ಅಪಾರ ತ್ಯಾಗವನ್ನು ಗ್ರಹಿಸಿ ಅವನಮೇಲೆ ದಯೆತೋರಿ ಅವನನ್ನು ಉದ್ಧರಿಸುವಿಯಾದರೆ ದೈವಕ್ಕೆ ಹೆದರಿ, ನ್ಯಾಯಕ್ಕೆ ತಲೆಬಾಗುವ ನಿನ್ನ ಉದಾರ ವರ್ತನೆಯ ಕೀರ್ತಿಯು ಆಚಂದ್ರಾರ್ಕ ವಾಗಿ ನಿಂತೀತು. ಪ್ರಶಂಸನೀಯವಾದ ನಿನ್ನ ದಯಾಗುಣವು ಆ ಪ್ರೇಮ ಭಿಕ್ಷುಕನ ಕತ್ತಲು ಕವಿದು ಹೋದ ಎದೆಯನ್ನು ಬೆಳಗಲಿ ಎಂದು ಪ್ರಾರ್ಥಿ ಸುತ್ತೇನೆ."

"ಅವನು ರಾಜಕುಮಾರನೆಂಬುದು ನಿಜವಾದರೆ, ಬರಲಿ; ನಾನವನಿಗೆ ಅವಶ್ಯವಾಗಿ ದರ್ಶನ ನೀಯುತ್ತೇನೆ." ಎಂದಳು ರಾಜಕುಮಾರಿ,

× × × × × × ×

ಆಗಂತುಕನು ನನ್ನನ್ನು ರಾಜಕುಮಾರಿಯ ಬಳಿ ಕರೆದೊಯ್ದನು. ಅವಳಿಗೆ ನನ್ನ ಪರಿಚಯಮಾಡಿಕೊಟ್ಟನು. ಅದರಿಂದ ನನ್ನೆದೆಯು ಎಂತಹ ಅಮಿತಾ ನಂದದಿಂದ ತುಂಬಿಹೋಯಿತೆಂದು ಹೇಳಬೇಕಾಗಿಲ್ಲ. ಆದಿನ ಅವಳು ಬಹಳ ಲಜ್ಜಾನ್ವಿತಳಾಗಿದ್ದಳು. ನಾನೂ ಸಹ ಮೌನವಾಗಿಯೇ ಇದ್ದೆ ; ಅಷ್ಟಲ್ಲದೇನು ? ಅವಳೊಡನೆ ಏನು ಮಾತನಾಡಬೇಕೆಂಬುದೇ ನನಗೆ ಗೊತ್ತಾಗಲಿಲ್ಲ. ನಾವು ಉಭ ಯತ್ರರೂ ಸಂಧಿಸಿದ ಸ್ವಲ್ಪ ಕಾಲಾನಂತರ ರಾಜಕುಮಾರಿಯು ತನ್ನ ಅಂತಃ

ಪುರಕ್ಕೆ ತೆರಳಿದಳು. ನಾನು ಆಗಂತುಕನ ಅತಿಥಿಯಾಗಿ ಅವನ ಮನೆಯಲ್ಲಿ ನಿಂತೆ. ಮರುದಿನ ಅದೇ ಹೊತ್ತಿಗೆ ಅವಳನ್ನು ಹೋಗಿ ನೋಡುವಂತೆ ನನ್ನ ಗೆಳೆಯನು ನನಗೆ ಸಲಹೆ ಹೇಳಿದ. ಅವನು ಹೇಳಿದಂತೆಯೇ ನಾನು ಮರುದಿನ ಸಂಧ್ಯಾಕಾಲ ಅದೇ ಮಂಟಪದಲ್ಲಿ ಹೋಗಿ ಕುಳಿತು ಅವಳ ಆಗಮನವನ್ನೇ ನಿರೀಕ್ಷಿಸುತ್ತಿದ್ದೆ. ಸುಮಾರು ಒಂದು ಗಂಟೆಯ ಕಾಲಕಾದಿದ್ದ ಬಳಿಕ ತನ್ನ ನಂಬುಗೆಯನ್ನು ಪಡೆದ ಸೇವಕಿಯೊಂದಿಗೆ ರಾಜಕುಮಾರಿಯ ಸವಾರಿಯು ಅಲ್ಲಿಗೆ ಚಿತ್ತೈಸಿತು. ನಾನು ಅವಳ ಪಾದಗಳನ್ನು ಚುಂಬಿಸಿದೆ; ಅವಳು ನನ್ನನ್ನು ಕೈಹಿಡಿದೆಬ್ಬಿಸಿ ಹೇಳಿದಳು:

"ಇದೀಗ ನನ್ನ ಮತ್ತು ನಿನ್ನ ಜೀವಿತದಲ್ಲಿ ಭಾಗ್ಯೋದಯದ ಕಾಲ. ಈ ಅಪಸ್ವರವಾತಾವರಣದಿಂದ ನನ್ನನ್ನು ಬೇರಾವುದಾದರೂ ದೂರದ ದೇಶಕ್ಕೆ ಕರೆದುಕೊಂಡು ಹೋಗಿ ಬಿಡು."

ರೋಗಿ ಬಯಸಿದ್ದು, ವೈದ್ಯ ಹೇಳಿದ್ದು ಎರಡೂ ಒಂದೇ ಎಂಬಂತೆ ನಾನು ಬಯಸಿದ್ದನ್ನೇ ಅವಳೂ ಹೇಳಿದಳು. ಅವಳ ಸಲಹೆಯನ್ನು ಮರುಮಾತಿಲ್ಲದೆ ನಾನು ಒಪ್ಪಿಕೊಂಡೆ. ಯಾರಿಗೂ ಕಾಣಿಸದಂತೆ ನಾವಿಬ್ಬರೂ ಆ ಉದ್ಯಾನ ವನವನ್ನು ಬಿಟ್ಟು ಹೊರಟೆವು. ಅಸದಳ ಯಾತನೆಗಳನ್ನು ತಾನು ಅನುಭವಿಸಿದ ಆ ಸ್ಮಶಾನ ಸದೃಶ ನಗರವನ್ನು ಬಿಟ್ಟು ನಡೆಯುವುದಕ್ಕೆ ಅವಳಿಗೂ, ಲೋಕೋತ್ತರ ಸುಂದರಿಯನ್ನು ಸತಿಯಾಗಿ ಪಡೆಯುವ ಕಾಲವು ಒದಗಿ ಬಂತೆಲ್ಲ ಎಂದು ನನಗೂ ಸಂತಸವೂ ಉಕ್ಕಿ ಬಂದಿತು. ಹೋಗುತ್ತಿರುವುದೆಲ್ಲಿಗೆ ಎಂದು ತಿಳಿಯದೆ ಹೊರಟೇ ಬಿಟ್ಟೆವು. ನಮಗೆ ದಾರಿ ತಪ್ಪಿತು. ನಾವೀಗ ನಗರದ ಯಾವ ಭಾಗದಲ್ಲಿದ್ದೆವು—ಎತ್ತ ಕಡೆ ಮುಂದೆ ನಡೆದು ಹೋಗಬೇಕು ಎಂದೇ ಗೊತ್ತಾಗ ಲಿಲ್ಲ. ನಮ್ಮ ರಹಸ್ಯವನ್ನು ಕಾಯಬಲ್ಲವನಾಗಿದ್ದ ಆ ಆಗಂತುಕನ ಮನೆಗೆ ನಾನವಳನ್ನು ಕರೆದುಕೊಂಡು ಹೋಗಬೇಕಾಗಿತ್ತು. ನಾನು ಹಾಗೆ ಮಾಡದೆ ಹೋದುದು ತಪ್ಪಾಯಿತು. ಆ ರಾತ್ರಿಯಾದರೂ ಅವನು ನಮಗೆ ನಿಲ್ಲಲು ನಿರಾತಂಕವಾದ ನೆರಳನ್ನು ನೀಡಬಲ್ಲವನಾಗಿದ್ದ. ನನಗಂತೂ ದಿಗ್ಭ್ರಮೆ ಹಿಡಿಯಿತು. ಅಲ್ಲೇ ಮತ್ತೊಂದು ರಸ್ತೆಗೆ ತಿರುಗಿದೆವು. ಆದರೆ ಇಳಿದು ಕೊಳ್ಳಲು ಯೋಗ್ಯವಾದ ಯಾವ ಮನೆಯೂ ಅಲ್ಲಿ ಕಾಣಿಸಲಿಲ್ಲ. ಹೀಗೆ ಕಲ್ಲು

ಮುಳ್ಳು, ಕೊರಕಲು ಹಾದಿಗಳಲ್ಲಿ, ನಿಶಿಕವಿದ ವೇಳೆಯಲ್ಲಿ ಎಷ್ಟು ಹೊತ್ತೊ, ಗೊತ್ತು ಗುರಿಗಳಿಲ್ಲದೆ ಕಾಲುನಡಿಗೆಯಲ್ಲಿ ಹೋಗುವುದು ಅವಳಿಗೆ ಒಗ್ಗಿದ ಪದ್ಧತಿಯಾಗಿರಲಿಲ್ಲ. "ನನ್ನ ಕಾಲುಗಳಲ್ಲಿ ಬೊಬ್ಬೆ ಎದ್ದಿವೆ—ನಡೆದೂ—ನಡೆದೂ, ಎಲ್ಲಿ ನಿಮ್ಮ ಮನೆಯಿರುವುದು? ನಾನು ಇನ್ನೊಂದು ಹೆಜ್ಜೆಯನ್ನೂ ಎತ್ತಿಡಲಾರೆ" ಎಂದಳು ಅವಳು. ನನ್ನ ಬುದ್ಧಿ ಭ್ರಮಿಸಿತು. ಏನು ಮಾಡುವುದು? ಎಲ್ಲಿಗೆ ಅವಳನ್ನು ಕರೆದೊಯ್ಯುವುದು? ನನಗೇನೂ ಹೊಳೆಯಲೇ ಇಲ್ಲ. "ಹೆದರಬೇಡ; ಅನತಿ ದೂರದಲ್ಲೆ ನನ್ನ ಗುಲಾಮನ ಮನೆ ಇದೆ. ಶ್ರಮಪಟ್ಟು ಸ್ವಲ್ಪದೂರ ನಡೆದು ಬಿಟ್ಟರೆ ನಾವದನ್ನು ಸೇರಿ ಬಿಡುತ್ತೇವೆ" ಎಂದು ಸಮಯೋಚಿತವಾಗಿ ನಾನವಳಲ್ಲಿ ಉತ್ಸಾಹವನ್ನು ತುಂಬಿದೆ.

ನಾನಾಡಿದ ಮಾತುಗಳಿನ್ನೂ ಮುಗಿದೇ ಇರಲಿಲ್ಲ. ಅಷ್ಟರಲ್ಲಿ ನಾವು ಹೋಗುತ್ತಿದ್ದ ದಾರಿಯಲ್ಲೆ ನಮಗೆದುರಾಗಿ ಬೀಗ ಹಾಕಿದ್ದ ಒಂದು ಮನೆಯು ಕಾಣಿಸಿತು. ಆ ಅಪರಿಚಿತ ನಗರದಲ್ಲಿ ಆ ಅರಿಯದ ಹಾದಿಯಲ್ಲಿ ಅದು ಯಾರ ಮನೆಯೆಂದು ನಾನು ಹೇಳಲಿ? ಮನೆ ಯಾರದ್ದಾದರೂ ಆಗಲಿ; ಅದಕ್ಕೆ ಬೀಗ ಹಾಕಿತ್ತು; ಅಷ್ಟೇ ಸಾಕು. ಬದಿಯಲ್ಲಿದ್ದ ಒಂದು ಕಲ್ಲನ್ನು ತೆಗೆದು ಬೀಗದ ಮೇಲೆ ಬಡಿದು ಅದನ್ನು ಒಡೆದು ಆಚೆಗೆ ಎಸೆದೆ. ಆಪತ್ಕಾಲದಲ್ಲಿ ಮಾನಮರ್ಯಾದೆಗಳು ಕೆಲಸಕ್ಕೆ ಬಂದವಲ್ಲ. ನಾನು ರಾಜಕುಮಾರಿಯನ್ನು ಕೈಹಿಡಿದು ಗೃಹಪ್ರವೇಶ ಮಾಡಿದೆ. ಆ ಗೃಹವನ್ನು ಒಂದು ತಡವೆ ಅವಸರದಿಂದ ಅವಲೋಕಿಸಿದ ಮಾತ್ರದಿಂದಲೇ ಅದು ಒಬ್ಬ ಘನವಂತನ ಒಡೆತನಕ್ಕೆ ಸೇರಿದ್ದಿರಬೇಕೆಂದೆನಿಸಿತು ನನಗೆ. ಒಳಗಡೆ ಕೋಣೆಗಳು ವಿಶಾಲವಾಗಿದ್ದುವು. ನೆಲಕ್ಕೆಲ್ಲ ರತ್ನಗಂಬಳಿಗಳು ಹಾಸಲ್ಪಟ್ಟಿದ್ದುವು. ಅಲ್ಲಲ್ಲಿ ಮೆತ್ತನೆಯ ಸುಖಾಸನಗಳು, ಒರಗುದಿಂಬುಗಳು ಎಲ್ಲಾ ಇದ್ದುವು. ಗೂಡುಗಳಲ್ಲಿ ಕಣ್ಣು ಕುಕ್ಕುವಷ್ಟು ಪ್ರಮಾಣದಲ್ಲಿ ಉತ್ತಮ ಮಾದಕದ್ರವ್ಯಗಳ ಸೀಸೆಗಳು ಮಿಂಚಿನಂತೆ ಹೊಳೆಯುತ್ತ ಕಂಗೊಳಿಸುತ್ತಿದ್ದುವು. ಅಡುಗೆಯ ಮನೆಯಲ್ಲಿ ರೊಟ್ಟಿಯೂ, ಬೇಯಿಸಿದ ಮಾಂಸವೂ ಸಿದ್ಧವಾಗಿದ್ದು ಮನೆಯ ಒಡೆಯನ ಬರುವಿಕೆಯನ್ನು ನಿರೀಕ್ಷಿಸುತ್ತಿರುವಂತಿತ್ತು. ನಾವು ಅಲೆದಲೆದು ಬಹಳ ಬಳಲಿದ್ದೆವು. ಸಂತೃಪ್ತಿಯಾಗಿ ಉಂಡು, ನಿಷಾದ್ರವ್ಯಗಳನ್ನು ಮನದಣಿಯೆ ಸೇವನೆಮಾಡಿ, ಆನಂದದಿಂದ ಮಲಗಿ ಮುದದಿಂದ ದಣಿವಾರಿಸಿಕೊಂಡೆವು.

ಹೇಗೂ ಯಾರದೆಂದೇ ತಿಳಿಯದ ಆ ಮನೆಯಲ್ಲಿ ಅತಿಕ್ರಮ ಪ್ರವೇಶ ಮಾಡಿದ ನಾವು ಅತ್ಯಾನಂದದಿಂದ ಆ ಇರುಳನ್ನು ಕಳೆದೆವು. ಪ್ರಾತಃಕಾಲ ವಾದೊಡನೆಯೆ ನಗರದ ನಾನಾ ಭಾಗಗಳಲ್ಲಿಯೂ ಒಂದೇಸಮನೆ ಗಲಭೆ ಎದ್ದು ಜನರೆಲ್ಲ ಹಾರಾಡಿಬಿಟ್ಟರು. 'ರಾಜಕುಮಾರಿ ಎಲ್ಲೋ ಹೊರಟು ಹೋಗಿದ್ದಾಳೆ' ಎಂಬ ಕೂಗು. ಅವಳಿಗಾಗಿ ನಗರದ ನಾನಾ ಕಡೆ ಬಲೆ ಬೀಸಿದ್ದು ಸಾಲದೆ ನಗರದಾಚೆ ಹತ್ತಾರು ಮೈಲಿ ಸುತ್ತಲೂ ಹುಡುಕಿ ನೋಡಿದರು.

ಮರುದಿನ ಬೆಳಗ್ಗೆ ನನ್ನಿಂದ ಒಂದು ಅಚಾತುರ್ಯ ನಡೆದುಹೋಯಿತು. ಅಜಾಗರೂಕತೆಯಿಂದ ಮೈಮರೆತು ನಾನು ಹೊರಬಾಗಿಲನ್ನು ಮುಚ್ಚಲು ಮರೆತಿದ್ದೆ. ಒಬ್ಬ ಕುರೂಪಿಯಾದ ಮುದುಕಿ—ಶೈತಾನನ ಅತ್ತೆಯಾಗಿರಲು ಅವಳಿಗೆ ಸರಿಸಮನೆನಿಸಿದವರಿರಲಾರರು!—ಬಾಗಿಲು ತೆಗೆದಿದ್ದನ್ನು ನೋಡಿ ನಿರ್ಭಯವಾಗಿ ಒಳಗೆ ನುಗ್ಗಿ ಬಂದು, ರಾಜಕುಮಾರಿಯ ಮುಂದೆ ನಿಂತು ಅವಳನ್ನು ಹರಸುವ ರೀತಿಯಲ್ಲಿ ತನ್ನ ಕೈಗಳನ್ನು ಮೇಲೆತ್ತಿ 'ನೀನೂ ನಿನ್ನ ಪತಿಯೂ ದೀರ್ಘಕಾಲ ಸುಖ ಸಂತೋಷಗಳನ್ನು ಅನುಭವಿಸುವಂತೆ ದೇವರು ಅನುಗ್ರಹಿಸಲಿ!' ಎಂದವಳೇ, "ನನ್ನ ಮಗಳು ಪ್ರಸವವೇದನೆಯನ್ನು ಅನುಭವಿಸುತ್ತಿದ್ದಾಳೆ....ನಾವು ಕಡು ಬಡವರು ; ಒಂದು ತುತ್ತು ಊಟವನ್ನೂ, ಒಂದು ಹೂಜಿಯಲ್ಲಿ ನೀರನ್ನೂ ಕೊಟ್ಟು ಉಪಕಾರಮಾಡು ತಾಯೆ! ಕಾಲವು ಮಿಂಚಿ ಹೋಗುವುದಕ್ಕೆ ಮುನ್ನ ನಾನದನ್ನು ಅವಳಿಗೆ ಮುಟ್ಟಿಸಬೇಕು" ಎಂದು ಗೋಗರೆದಳು.

ರಾಜಕುಮಾರಿಯ ಮನಸ್ಸು ಆ ಮುದಿಯಳ ದೈನ್ಯತೆಯನ್ನು ಕಂಡು ಕರುಣೆಯಿಂದ ಕರಗಿತು. ಅವಳು ಕೇಳಿದ್ದಕ್ಕಿಂತ ಹೆಚ್ಚಾಗಿಯೇ ಅವಳಿಗೆ ಆಹಾರವನ್ನು ಕೊಟ್ಟು ಕಳುಹಿಸಿದಳು. ಸುಮ್ಮನೆ ರೊಟ್ಟಿ ಮಾಂಸಗಳನ್ನು ಕೊಡುವುದರೊಂದಿಗೆ ಮುಕ್ತಾಯ ಮಾಡಿದ್ದರೆ ಚಿಂತೆಯಿರಲಿಲ್ಲ. ಆದರೆ ರಾಜಕುಮಾರಿಯು ಅದನ್ನೂ ಮಿಂಚಿ ಹಿಡಿಯಮ್ಮ! ಇದು ಅತ್ಯಮೂಲ್ಯವಾದ ಉಂಗುರ.. ಇದನ್ನು ಯಾರಾದರೂ ಸರಾಫರಿಗೆ ಮಾರಿ ಬಂದ ಹಣವನ್ನು ತೆಗೆದುಕೋ. ನೀನೂ ನಿನ್ನ ಮಗಳೂ ನಿಮ್ಮ ಜೀವವಿರುವವರೆಗೂ ತಾಪತ್ರಯವಿಲ್ಲದೆ ಬಂದ ಹಣದಿಂದ ನೆಮ್ಮದಿಯಾಗಿ ಬಾಳಬಹುದು' ಎನ್ನುತ್ತ ತನ್ನ

ಅಂಗುಲೀಯಾಭರಣವನ್ನು ಕಳಚಿ ಅವಳಿಗೆ ಕೊಟ್ಟಳು. ಆ ಕೆಟ್ಟ ಮುದುಕಿ ಉಂಗುರವನ್ನು ತಿರುಗಿಸಿ ತಿರುಗಿಸಿ ನೋಡಿದಳು. ಅದು ರಾಜಯೋಗ್ಯ ವಾದುದು ; ಅದರಿಂದ ತಪ್ಪಿಸಿಕೊಂಡು ಹೋದ ರಾಜಕುಮಾರಿಯನ್ನು ಕಂಡು ಹಿಡಿಯಲು ಸಾಕಷ್ಟು ಸವಕಾಶ ದೊರೆತೀತು ; ರಾಜಕುಮಾರಿಯನ್ನು ಹಿಡಿದುಕೊಟ್ಟು ಅರಸನಿಂದ ಘೋಷಿಸಲ್ಪಟ್ಟ ಹಿರಿಯ ಪಾರಿತೋಷಕವನ್ನು ಪಡೆಯಬಹುದು ; ಎಂದು ಮುಂತಾದ್ದೆಲ್ಲ ತನ್ನ ಮನಸ್ಸಿನಲ್ಲೆ ಹಿಗ್ಗುತ್ತ, ರಾಜ ಕುಮಾರಿಯನ್ನು ಮತ್ತೊಮ್ಮೆ ಕೃತ್ರಿಮ ನಗೆಯೊಡನೆ ವಂದಿಸಿ, ಆ ರಾಕ್ಷಸಿಯು ಅಲ್ಲಿಂದ ಕವಲಿದಳು. ನಾನು ಅವಳು ಹೋಗುವುದನ್ನೇ ನೋಡುತ್ತಿದ್ದೆ. ಹೊರಗೆ ಹೊರಟವಳೇ ಆ ಡಾಕಿಣಿಯು ರೊಟ್ಟಿ ಮಾಂಸಗಳನ್ನು ಹೊರಗೆಸೆದು, ಉಂಗುರವನ್ನು ಮಟ್ಟಿಗೆ ತನ್ನ ಸೊಂಟದಲ್ಲಿ ಭದ್ರಪಡಿಸಿಕೊಂಡಳು. ಆದರೆ ದೈವಲೀಲೆಯನ್ನು ಕಂಡವರಾರು ? ವಿಧಿ ಶಾಸನವನ್ನು ಅತಿಕ್ರಮಿಸಬಲ್ಲವ ರಾರು ? ಆ ಕರಾಳ ಕುರೂಪಿಯು ಹೊರಬಾಗಿಲನ್ನು ದಾಟಿ ಹತ್ತು ಹೆಜ್ಜೆ ಮುಂದಿಟ್ಟು ನಡೆಯುವುದಕ್ಕೂ, ಅದೇ ಸಮಯಕ್ಕೆ ಸರಿಯಾಗಿ ಅರಬ್ಬೀ ಕುದುರೆಯನ್ನು ಹತ್ತಿ–ಜೀನಿನ ಒಂದು ಕಡೆಗೆ ತಾನು ಬೇಟೆಯಾಡಿ ಕೊಂದ ಜಿಂಕೆಯನ್ನು ಕಟ್ಟಿಕೊಂಡು, ಕೈಯಲ್ಲಿ ಭರ್ಜಿಯನ್ನು ಹಿಡಿದು ಸಿಪಾಯಿಯೊಬ್ಬನು ಎದುರಿಗೆ ಬರುವುದಕ್ಕೂ ಸರಿಹೋಯಿತು. (ಆತನೇ ಮನೆಯ ಯಜಮಾನ ನೆಂದು ನನಗೆ ಅನಂತರ ತಿಳಿಯಿತು) ದೂರದಿಂದ ನೋಡಿದ. ತನ್ನ ಮನೆ ಬಾಗಿಲ ಬೀಗ ಮುರಿದು ಬಿದ್ದಿದೆ. ಈ ಕುರೂಪಿ ಮುದುಕಿ ತನ್ನ ಮನೆಯನ್ನು ಬಿಟ್ಟು ಹೊರಗೆ ಬಂದದ್ದನ್ನೂ, ರೊಟ್ಟಿ ಮಾಂಸಗಳನ್ನು ಹೊರಗೆಸೆದದ್ದನ್ನೂ ಅವನು ನೋಡಿದ. ಛಂಗೆಂದು ಕುದುರೆಯಿಂದ ಕೆಳಗೆ ನೆಗೆದವನೇ ಅವನು ಮುದುಕಿಯ ತಲೆಗೂದಲನ್ನು ಸರಕ್ಕನೆ ಹಿಡಿದುಕೊಂಡು—ಪಕ್ಕದ ಒಂದು ಮರದ ಬಳಿ ಎಳೆದುಕೊಂಡು ಹೋಗಿ ಅವಳ ಕೊರಳಿಗೆ ಹಗ್ಗವನ್ನು ಬಿಗಿದು ಅವಳನ್ನು ಮರದ ಒಂದು ಕೊಂಬೆಗೆ ನೇತುಹಾಕಿದನು. ಅವಳ ಅವತಾರ ಅಲ್ಲಿಗೇ ಮುಗಿಯಿತು !

ಮುದುಕಿಯ ಕತೆ ಆ ರೀತಿ ಮುಗಿಯಿತು. ಆದರೆ ಈಗ ನನ್ನ ಎದೆ ಢಬಢಬ ಎಂದು ಬಡಿದುಕೊಳ್ಳಲಾರಂಭಿಸಿತು. ಸಿಪಾಯಿಯು—ಮನೆಯ

ಯಜಮಾನ–ಮನೆಯೊಳಗೆ ಬಂದವನೇ ನಮಗಿದಿರಾದ. ಅತಿಕ್ರಮ ಪ್ರವೇಶ ಮಾಡಿದ ನಾವು ಅವನಿಗೇನು ಹೇಳಬೇಕೆಂದು ಯೋಚಿಸಿದೆ. ಕ್ಷಣಮಾತ್ರ ಮಿಂಚಿನಂತೆ ಒಂದು ಆಲೋಚನೆ ಹೊಳೆಯಿತು.

"ಮನ್ನಿಸಬೇಕು ; ಒಂದು ನಿಮಿಷ ನಿಮ್ಮೊಡನೆ ಮಾತನಾಡುವುದಿದೆ" ಎಂದು ನಾನು ಮನೆಯಾತನನ್ನು ಹೊರಗೆ ಕರೆದು, ನನ್ನ ಮತ್ತು ರಾಜಕುಮಾರಿಯ ವಿಚಾರವನ್ನೆಲ್ಲ ಆತನಿಗೆ ಕೂಲಂಕಷವಾಗಿ ವಿವರಿಸಿ ಹೇಳಿ ವಿಧಿಯಿಲ್ಲದ ನಮ್ಮ ಅತಿಕ್ರಮ ಪ್ರವೇಶಕ್ಕೂ, ಆತನಿಲ್ಲದ ವೇಳೆಯಲ್ಲಿ ಸ್ವಾತಂತ್ರ್ಯದಿಂದ ಆತನ ಅಡುಗೆ ಮನೆಯನ್ನು ಹೊಕ್ಕು ಹಸಿವನ್ನು ಅಡಗಿಸಿಕೊಂಡದ್ದಕ್ಕೂ ಕ್ಷಮಾಪಣೆಯನ್ನು ಬೇಡಿದೆ. ನಾವಿಬ್ಬರೂ ಯಾರು ಎಂದು ತಿಳಿದ ಒಡನೆಯೆ ಆತನು ಯಾವ ದೌಷ್ಟ್ಯದ ಮಾತನ್ನೂ ಆಡಲಿಲ್ಲ. ಬದಲಾಗಿ ಇಂತಹ ಉನ್ನತ ವರ್ಗದ ಅತಿಥಿಗಳು ಅಪ್ರಾರ್ಥಿತವಾಗಿ ಬಡವನ ಹೊಸ್ತಿಲನ್ನು ತುಳಿದು ನನ್ನ ಕುಟೀರವನ್ನು ಪಾವನ ಮಾಡಿದುದಕ್ಕಾಗಿ ನಾನು ನಿಮಗೆ ಅನಂತ ಕೃತಜ್ಞತೆಯನ್ನು ಸಲ್ಲಿಸತಕ್ಕದಾಗಿದೆ ಎಂದು ತಾನೇ ನಮಗೆ ಉಪಚಾರ ಹೇಳಿ 'ಆದರೆ ಹೀಗೆ ಬಾಗಿಲನ್ನು ಎಚ್ಚರಿಕೆ ತಪ್ಪಿ ತೆಗೆದುಬಿಟ್ಟದ್ದು ವಿವೇಕದ ಎಲ್ಲೆಯನ್ನು ದಾಟಿದಂತೆಯೇ ಆಯಿತು' ಎಂದು ನಮ್ಮನ್ನು ಒಂದು ಬಗೆಯಾಗಿ ಜರೆದನು. ಬಳಿಕ ಆತನು ನನ್ನನ್ನು ನೋಡಿ 'ಈ ಗೃಹವು ನಿಮ್ಮದೆಂದು ಭಾವಿಸಿರಿ ; ನಾನು ತಮ್ಮ ಗುಲಾಮ, ತಮ್ಮನ್ನು ಆಪತ್ತಿನಿಂದ ರಕ್ಷಿಸುವುದೇ ನನ್ನ ಕರ್ತವ್ಯವೆಂದರಿತಿದ್ದೇನೆ. ಎಷ್ಟು ದಿವಸ ಬೇಕೋ ಅಷ್ಟು ದಿವಸ ನೆಮ್ಮದಿಯಿಂದ ಇಲ್ಲಿ ಇದ್ದು ನನ್ನನ್ನು ಸನ್ಮಾನಿಸಬೇಕು' ಎಂದು ಅವನು ನಯವಾಗಿ ಪ್ರಾರ್ಥಿಸಿದ.

ಇಷ್ಟೆಲ್ಲ ಮನೆಯಾತನಾಡಿದ ಮಾತುಗಳನ್ನು ಕೇಳಿ ರಾಜಕುಮಾರಿಯು ಉಲ್ಲಾಸದಿಂದ,

"ಆದರೆ 'ನನ್ನ ಗುಲಾಮನ ಮನೆಗೆ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ' ಎಂದು ರಾಜಕುಮಾರನು ನನ್ನಲ್ಲಿ ಹೇಳಿದ್ದನಲ್ಲವೆ ?" ಎಂದು ಮನೆಯಾತನನ್ನು ಕೇಳಿದಳು–ಒಂದು ಸಣ್ಣ ಚಿಟಿಕೆಯನ್ನು ಇಟ್ಟಂತೆ.

"ಯಾರು ಇಲ್ಲ ಎಂದವರು ?" ಮನೆಯಾತ ಹೇಳಿದ : "ನಾವು ಸೈನಿಕರು ನಮ್ಮ ಹೊಟ್ಟೆಗಳನ್ನು ಹೊರೆಯುತ್ತಿರುವುದೇ ರಾಜಾಶ್ರಯದಿಂದ–ಅಡಿಗಡಿಗೆ

ಅವರು ನೀಡುವ ಆದರಭರಿತ ಸನ್ಮಾನಗಳಿಂದ. ಆದುದರಿಂದ ಅವರು ಹೇಳಿದ್ದು ಅಕ್ಷರಶಃ ನಿಜ. ಅದರಲ್ಲೇನೂ ಆಕ್ಷೇಪಣೆಯಿಲ್ಲ. ನೀವು ನನ್ನನ್ನು ಹಣ ಕೊಟ್ಟು ಕೊಳ್ಳದಿದ್ದರೂ ನಾನು ನಿಮ್ಮ ಗುಲಾಮನೇ. ಆದರೆ ನಾವು ಕೆಲವು ವೇಳೆ ರಹಸ್ಯಗಳನ್ನು ಕಾಪಾಡಬೇಕಾಗುತ್ತೆ. ಆ ಪಿಶಾಚಿ ಮುದುಕಿ ನಿಮ್ಮನ್ನು ಅಪಾರ ಕಷ್ಟಕ್ಕೆ ಗುರಿಮಾಡಿ ಬಿಡುತ್ತಿದ್ದಳು. ಆದರೆ ನಾನು ನಿಮ್ಮ ರಹಸ್ಯ ವನ್ನು ಕಾಪಾಡಲು ಬದ್ಧಕಂಕಣನಾಗಿದ್ದೇನೆ. ಯಾವ ಅಡ್ಡಿ ಅಡಚಣೆಗಳೂ ಇಲ್ಲದೆ ನೀವು ಇಲ್ಲಿ ಸುರಕ್ಷಿತವಾಗಿರಬಹುದು."

ನಾನು ಸಿಪಾಹಿಯ ಸುಗುಣವನ್ನು ಕಂಡು ಅವನನ್ನು ಬಹುವಾಗಿ ಅಭಿ ನಂದಿಸುತ್ತ ಹೇಳಿದೆ :

"ನೀನು ಬಹಳ ಧೈರ್ಯಶಾಲಿ! ನಿನ್ನ ಘನತೆಯಲ್ಲಿಯೂ ಸಹಾಯಶೀಲ ಸ್ವಭಾವದಲ್ಲಿಯೂ ನನಗೆ ಸಂಪೂರ್ಣ ನಂಬಿಕೆಯುಂಟು. ನನಗೆ ಸಾಧ್ಯ ವಾದೊಡನೆಯೇ ನಿನ್ನ ಈ ಅಪಾರ ದಯೆಗೆ ತಕ್ಕುದಾದ ಪ್ರತ್ಯುಪಕಾರವನ್ನು ನಾನು ಮಾಡಬೇಕೆಂದು ತೀರ್ಮಾನಿಸಿದ್ದೇನೆ. ನಿನ್ನ ಹೆಸರೇನು ಹೇಳು: ಅದನ್ನು ನಾನು ನೆನಪಿನಲ್ಲಿಡತಕ್ಕುದಿದೆ."

"ರಾಜಕುಮಾರಾ! ನನ್ನ ಹೆಸರು ಬಿಹಜಾದ್‌ಖಾನ್ ಎಂದು. ನಾನು ಸದಾ ನಿನ್ನ ಸೇವೆಗೆ ಸಿದ್ಧನಾಗಿದ್ದೇನೆ."

ಬಿಹಜಾದ್‌ಖಾನನ ದಯೆಯಿಂದಲೂ ಸಹಾಯ ಸಹಾನು ಭೂತಿಗಳಿಂ ದಲೂ ನಾವು ಸಂಪೂರ್ಣವಾಗಿ ಸಂತಸಗೊಂಡೆವು. ಅವನ ಕೋರಿಕೆಯಂತೆ ಅವನ ಮನೆಯಲ್ಲೆ ಆರುತಿಂಗಳಕಾಲ ಆನಂದಮಯವಾಗಿ ಕಾಲವನ್ನು ದೂಡಿ ದೆವು. ರಾಜಕುಮಾರಿಯು ಆ ಮನೆಗೆ ಸೇರಿದ ಉದ್ಯಾನವನವೊಂದನ್ನು ಹೊರತು ಹೊರಗೆ ಹೋಗುತ್ತಲೇ ಇರಲಿಲ್ಲ. ಆದುದರಿಂದ ಅವಳು ಬಿಹಜಾದ್ ಖಾನನ ಮನೆಯಲ್ಲಿರುವಳೆಂದು ಯಾರೂ ಸಂದೇಹ ಪಡುವಂತಿರಲಿಲ್ಲ.

ಹಾಗೆಂದ ಮಾತ್ರಕ್ಕೆ ನಾನು ನನ್ನ ರಾಜ್ಯವನ್ನೂ, ನನ್ನ ತಾಯ್ತಂದೆಯ ರನ್ನೂ ಮರೆತು ಬಿಡಲಾದೀತೇ? ಆದರೆ ರಾಜಕುಮಾರಿಗೆ ಮಾತ್ರ ತನ್ನ ತಾಯ್ತಂದೆಯರನ್ನು ಅಥವಾ, ತನ್ನ ರಾಜ್ಯವನ್ನು ಕುರಿತು ಯಾವ ಯೋಚ ನೆಯೂ ಇರಲಿಲ್ಲ. ಅವಳು ಅದುವರೆಗೆ ಅಲ್ಲಿ ಅನುಭವಿಸಿದ ಅತೀವ ಯಾತನೆ

ಗಳಿಂದ ಬಹುವಾಗಿ ಬಳಲಿ ಹೋಗಿದ್ದಳು. ಆದುದರಿಂದ ಆ ವಾತಾವರಣದಿಂದ ಯಾವ ಘಳಿಗೆಯಲ್ಲಿ ತಪ್ಪಿಸಿಕೊಂಡು ಹೊರಟುಹೋದೇನು ಎಂದೆನ್ನಿಸಿತ್ತು ಅವಳಿಗೆ, ಅವಳ ಈ ಆತುರವು ನನಗೆ ಅನುಕೂಲವೇ ಆಯಿತು. ಆದರೆ ನಾನೆಲ್ಲಿಗೆ ಹೋಗಿ ಬಿಟ್ಟೆನೋ, ನನ್ನ ಗತಿ ಏನಾಯಿತೋ ಎಂದು ನನ್ನ ತಾಯ್ತಂದೆಯರು ಅತಿಯಾಗಿ ದುಃಖಿಸುತ್ತಿರಬಹುದೆಂದು ನಾನು ಎಣಿಸಿದೆ. ಅವರು ನನ್ನ ಬರುವಿಕೆಯನ್ನೇ ಅತ್ಯಾತುರದಿಂದ ನಿರೀಕ್ಷಿಸುತ್ತಿರಬಹುದೆಂದೂ ಊಹಿಸಿದೆ. ನನ್ನ ಬಳಲಿಕೆಯನ್ನು ಕಂಡುಕೊಂಡ ಬಿಹ್‌ಜಾದ್‌ಖಾನನು "ಏನು ? ನನ್ನ ಆತಿಥ್ಯದಲ್ಲಿ ಏನಾದರೂ ಹೆಚ್ಚುಕಡಿಮೆಯಾಯಿತೇ ? ಅದರಿಂದ ನಿಮ್ಮ ಮನಸ್ಸಿಗೆ ಬೇಸರವೇ ? ಇದ್ದರೆ ಹೇಳಿ ; ಸರಿಪಡಿಸಿಕೊಳ್ಳುತ್ತೇನೆ" ಎಂದು ದೈನ್ಯದಿಂದ ಬೇಡಿದ. ಅದಕ್ಕೆ ಪ್ರತ್ಯುತ್ತರವಾಗಿ ಅತನ ಆತಿಥ್ಯವು ಅತ್ಯಂತ ಪರಿಪೂರ್ಣವೂ ಆನಂದದಾಯಕವೂ ಆಗಿದ್ದಿತೆಂದೂ, ಅದಕ್ಕೆ ನಾವು ಅಪಾರವಾಗಿ ಕೃತಜ್ಞರಾಗಿರುವುವೆಂದೂ ಆತನಿಗೆ ಭರವಸೆ ನೀಡಿ ತರುವಾಯ ನಾನವನಿಗೆ ನನ್ನೆದೆಯಲ್ಲಿದ್ದ ಕೋರಿಕೆಯನ್ನು ಬಿಚ್ಚಿ ಹೇಳಿದೆನು. ನನ್ನ ವ್ಯಥೆಗೆ ಕಾರಣವನ್ನು ಅರಿತ ಖಾನನು ಹೇಳಿದನು :

"ಇದಕ್ಕಾಗಿ ತವಕ ಪಡುವುದೇತಕ್ಕೆ ? ನಾನು ಇಂದೇ ಎರಡು ತುರ್ಕಿ ಕುದುರೆಗಳನ್ನು ತರಿಸಿ ಕೊಡುತ್ತೇನೆ. ನೀವಿಬ್ಬರೂ ಅವರಮೇಲೆ ಹತ್ತಿ ನಡೆಯಿರಿ. ನಿಮ್ಮ ಒಪ್ಪಿಕೆಯಾದರೆ ನಾನು ನಿಮ್ಮ ಬೆಂಗಾವಲಿನವನಾಗಿ ನಿಂತು ನಿಮ್ಮನ್ನು ದಾರಿಯುದ್ದಕ್ಕೂ ರಕ್ಷಿಸುತ್ತ ಬರುತ್ತೇನೆ."

ಬಳಿಕ ಅವನು ನಮ್ಮಿಬ್ಬರಿಗೂ ಒಂದೊಂದು ದಿವ್ಯಾಶ್ವವನ್ನು ತರಿಸಿಕೊಟ್ಟು ತಾನೂ ಸಂಪೂರ್ಣವಾಗಿ ಅಸ್ತ್ರಶಸ್ತ್ರಸಜ್ಜಿತನಾಗಿ ತನ್ನ ಉತ್ತಮಾಶ್ವವನ್ನೂ ಹತ್ತಿ ನಮಗೆ ದಾರಿ ತೋರಿಸುತ್ತ "ಯಾವ ಭಯವೂ ಇಲ್ಲದೆ ನನ್ನ ಗೌರವದಲ್ಲಿ ಸಂಪೂರ್ಣ ನಂಬಿಕೆಯನ್ನಿರಿಸಿ ನನ್ನನ್ನೂ ಹಿಂಬಾಲಿಸಿ" ಎನ್ನುತ್ತ ಬಿಹ್‌ಜಾದ್ ಖಾನನು ನಮ್ಮ ಮುಂದೆ ನಡೆದ.

× × × × × × ×

ನಾನು ನಗರದಿಂದ ಹೊರಬೀಳುವಾಗ ಯಾವ ಕೋಟೆಯ ಬಾಗಿಲನ್ನು ದಾಟಿ ಬಂದಿದ್ದೆವೋ ಅದೇ ಬಾಗಿಲ ಬಳಿ ಬಿಹ್‌ಜಾದ್‌ಖಾನನು ನಮ್ಮನ್ನು ಕರೆದೊಯ್ದನು. 'ಇದೇನು ಕೃತ್ರಿಮ ವಿರಬಹುದೇ?' ಎಂದು ಕ್ಷಣಕಾಲ ನಾನು ಆಶ್ಚರ್ಯದಿಂದ ಮಂಕನಾಗಿ ಹೋದೆ. ಆ ದ್ವಾರದ ಬಳಿ ಬಂದಮೇಲೆ ಬಿಹ್‌ಜಾದ್‌ಖಾನನ ವರ್ತನೆಯಿಂದ ನನಗಿನ್ನೂ ಆಶ್ಚರ್ಯವೂ, ಸಂದೇಹವೂ ಹೆಚ್ಚತೊಡಗಿತು. ಬಾಗಿಲ ಬಳಿ ಹೋದವನೇ ಕಾವಲುಗಾರರನ್ನು 'ಕತ್ತೆಗಳೇ ಏಳಿ' ಎಂದು ಅರಚಿ ಅವರನ್ನು ಎಬ್ಬರಿಸಿ ತನ್ನ ಭರ್ಜಿಯಿಂದ ತಿವಿದು ಬೀಗವನ್ನು ಒಡೆದು ಬಾಗಿಲನ್ನು ತೆರೆದನು. ಅಷ್ಟಕ್ಕೆ ನಿಲ್ಲದೆ ಅವನು ಉಚ್ಚಕಂಠದಿಂದ ಕೂಗಿ ಹೇಳಿದ:

"ಏಯ್! ಗೂಬೆಗಳೇ! ಹೋಗಿ; ನಿಮ್ಮರಸನಲ್ಲಿ ಹೇಳಿ. ಬಿಹ್‌ಜಾದ ಖಾನನು ರಾಜಕುಮಾರಿ ಮಿಹರ್‌ನೀಗಾರಳನ್ನೂ, ಈಗ ಅವಳ ಪತಿಯೂ ಅರಸನ ಅಳಿಯನೂ ಆದ ಕಾಮ್‌ಗಾರನನ್ನೂ ಕರೆದೊಯ್ದನೆಂದು ಹೇಳಿ. ಅವನ ಹೇಡಿ ಎದೆಯಲ್ಲೇನಾದರೂ ಪೌರುಷದ ಕಿಡಿಗಳು ಒಂದೆರಡು ಇನ್ನೂ ಉಳಿದಿದ್ದರೆ ಹೊರಗೆ ಬಂದು ತನ್ನ ಕುಮಾರಿಯನ್ನು ಬಿಡಿಸಿಕೊಂಡು ಹೋಗಲಿ. ಅವಳನ್ನು ನಾನು ರಹಸ್ಯದಿಂದ ಕರೆದುಕೊಂಡು ಹೊರಟುಹೋದನೆಂದಾಗಲಿ, ಅಥವಾ ನನ್ನ ರಕ್ಷಣೆಯಲ್ಲಿ ಅವಳನ್ನು ಬಹಿರಂಗವಾಗಿ ಕರೆದೊಯ್ಯಲು ಭಯ ಗೊಂಡೆನೆಂದಾಗಲಿ ಆ ಮೂರ್ಖನು ಭಾವಿಸದಿರಲಿ. ನನ್ನನ್ನೆದುರಿಸಲು ಆ ಹೇಡಿಯು ಹೆದರುವುದಾದರೆ ತನ್ನ ಅಂತಃಪುರದವರ ತೋಳತೆಕ್ಕೆಯಲ್ಲಿ ಸೆರೆ ಯಾಗಿ ಅರಮನೆಯಲ್ಲೆ ನಿಂತು ಸುಖಿಯಾಗಿರಲಿ."

ಬಿಹ್‌ಜಾದ್‌ಖಾನನ ಈ ಸಾಹಸಭರಿತ ಪಂಥ್ಯವನ್ನು ಕಂಡು ನಾನು ಅಮಿತಾನಂದವನ್ನು ಹೊಂದಿ ಹೆಮ್ಮೆಗೊಂಡೆನಾದರೂ ಅನವಸರವಾಗಿ ಸಹಾಯ ಶೂನ್ಯರಾದ ನಾವು ಹಿರಿಯ ಸೈನ್ಯದೊಂದಿಗೆ ಕಾದಾಡಬೇಕಾಗಿ ಬಂದೀತೆಂದೂ, ರಾಜಕುಮಾರಿಗೆ ಅಪಾಯ ಸಂಭವಿಸಬಹುದೆಂದೂ ಶಂಕಿಸಿದೆ. ಬಿಹ್‌ಜಾದ್ ಖಾನನು ಮಾಡಿದ ಸವಾಲು ಅತಿ ಶೀಘ್ರದಲ್ಲಿ ಅರಸನನ್ನು ಮುಟ್ಟಿತು. ಅವನು ಸ್ವತಃ ಹೊರಟುಬಂದು ನಮ್ಮನ್ನು ಎದುರಿಸಲು ಒಪ್ಪದವನಾಗಿ ತನ್ನ ವಜೀರ ನನ್ನೂ, ಸೇನಾಪತಿಯ ವಶದಲ್ಲಿ ಒಂದು ಸೈನಿಕ ದಳವನ್ನೂ ಕೊಟ್ಟು ಕಳುಹಿ ಸುತ್ತ ವಜೀರನಿಗೆ ಆಜ್ಞೆ ಮಾಡಿದ.

" ಆ ಮೂವರು ದ್ರೋಹಿಗಳನ್ನೂ, ಅವರೆಷ್ಟು ದೂರ ಹೋಗಿದ್ದರೂ ಸರಿ ಬೆನ್ನಟ್ಟಿಕೊಂಡು ಹೋಗಿ, ತಡೆಗಟ್ಟಿ, ಕೈ ಕಾಲುಗಳನ್ನು ಬಿಗಿದು ಕಟ್ಟಿ, ಇಲ್ಲಿ ನನ್ನೆದುರಿಗೆ ಹೊತ್ತು ತಂದು, ನನ್ನ ಸಿಂಹಾಸನದ ಎದುರಿನಲ್ಲಿ ಅವರ ಕೊರಳನ್ನು ಕತ್ತರಿಸಿಬಿಡಿ. "

ಅತ್ಯಲ್ಪ ಕಾಲದಲ್ಲೆ ವಜೀರನನ್ನು ಮುಂದಿಟ್ಟುಕೊಂಡು, ಸೇನಾಧಿಪತಿಯನ್ನು ಹಿಂಬಾಲಿಸಿ ಒಂದು ದೊಡ್ಡ ಸೈನ್ಯವು ನಮ್ಮನ್ನು ಬೆನ್ನಟ್ಟಿಬಂತು. ಬಿಹ್‌ಜಾದಾಖಾನನು ' ರಾಜಕುಮಾರಿಯನ್ನು ದೂರ ಕರೆದುಕೊಂಡು ಹೋಗಿ ಅವಳನ್ನು ಸಂರಕ್ಷಿಸುತ್ತಿರು ' ಎಂದು ನನಗೆ ಹೇಳಿ, ಸೈನ್ಯದೊಳಗೆ ಹುಲಿಯಂತೆ ರೋಷಾವೇಶದಿಂದ ಮುನ್ನುಗ್ಗಿ ವಜೀರ ಮತ್ತು ಸೇನಾಧಿಪತಿ ಇಬ್ಬರ ತಲೆಗಳನ್ನೂ ಕಣ್ಣುಮುಚ್ಚಿ ತೆರೆವಷ್ಟರಲ್ಲಿ ತನ್ನ ಕತ್ತಿಯಿಂದ ಹಾರಿಸಿಬಿಟ್ಟನು. ಬಳಿಕ ಎರಡು ಕೈಗಳಲ್ಲೂ ತೀಕ್ಷ್ಣ ಖಡ್ಗಗಳನ್ನು ಹಿರಿದು ಅವರನ್ನು ಸುತ್ತುವರಿದಿದ್ದವರಲ್ಲನೇಕರನ್ನು ಸವರಿ ಕೆಳಗುರುಳಿಸಿಬಿಟ್ಟನು. ಖಾನನ ಈ ಅಪಾರ ಸಾಹಸವನ್ನು ಕಂಡು ಬೆಚ್ಚಿ ಬೆದರಿ ಸೈನಿಕರು ಪಲಾಯನ ಸೂತ್ರವನ್ನು ಪಠಿಸಿದರು. ಖಾನನು ಅವರ ಬೆನ್ನಹಿಂದೆ ಸವಾರಿ ಮಾಡಿಕೊಂಡು ಸ್ವಲ್ಪದೂರ ಹೋಗಿ ಸಿಕ್ಕುಸಿಕ್ಕಿದವರನ್ನು ತರಿದು ಹಾಕಿದ. ಹೀಗೆ ಏಕಾಂಗಿಯಾಗಿ ನಾಯಕರೊಂದಿಗೆ ನೂರಾರು ಜನರನ್ನು ಕಡಿದುಹಾಕಿ ಖಾನನು ಹಿಂತಿರುಗಿ ನಾವಿದ್ದ ಬಳಿ ಬಂದು ಸೇರಿದನು. ಇಷ್ಟು ಜನರನ್ನು ಬರಬರನೆ ಒಬ್ಬೊಂಟಿಗನಾಗಿ ತರಿದು ಹಾಕಿದ ಅವನ ಮೈಮೇಲೆ ಒಂದು ಕಿರುಗಾಯವೂ ಇರಲಿಲ್ಲ. ಅದಲ್ಲದೆ ಅವನ ಉತ್ತಮ ಶಕ್ತಿ, ಸಾಹಸಗಳಿಗೆ ಸಾಕ್ಷಿ! ' ತಲೆ ಹೋದಮೇಲೆ ದೇಹದಿಂದೇನು ಸುಖ ? ' ಎನ್ನುವಂತೆ ನಾಯಕರನ್ನು ತರಿದುಹಾಕಿದಮೇಲೆ ಉಳಿದವರು ನಿಂತಾರೇ ? ಎಂದ ಬಿಹ್‌ಜಾದಖಾನ-ಸ್ವಲ್ಪ ಚೇತರಿಸಿಕೊಳ್ಳುತ್ತ. ಆ ಅಸಮ ಸಾಹಸ ಕೃತ್ಯದಿಂದ ಅವನು ಬಹಳ ದಣಿದಿದ್ದ. ಆದರೆ ಅಲ್ಲಿ ನಿಂತು ವಿಶ್ರಮಿಸಿಕೊಳ್ಳುವಂತಿರಲಿಲ್ಲ. ನಾವು ವಿಷಮ ಪರಿಸ್ಥಿತಿಗೆ ಒಳಗಾಗಿದ್ದೆವು. ಸೈನಿಕರು ಹಿಂತಿರುಗಿ ಓಡೋಡಿ ಬರುತ್ತಿರುವುದನ್ನು ದೂರದಿಂದ ಕೇಳಿದ ರಾಜ ತಾನೇ ಅಶ್ವಾರೂಢನಾಗಿ ಹೊರಟುಬಂದು ಪಲಾಯನ ಮಾಡುತ್ತಿದ್ದ ಸೈನಿಕರನ್ನು ತಡೆದು ಅವರನ್ನು ಹುರಿದುಂಬಿಸಿ ಅವರನ್ನು ಮತ್ತೆ ಎಳೆತಂದನು.

ಬಲಿಪೀಠಕ್ಕೆ ಕಟುಕನಿಂದ ಎಳೆದೊಯ್ಯಲ್ಪಟ್ಟ ಕುರಿ ಹಿಂಡಿನಂತೆ ಮನಸ್ಸಿಲ್ಲದ ಮನಸ್ಸಿನಿಂದ ಆ ಹೇಡಿ ಸೈನಿಕರು ಅರಸನನ್ನು ಹಿಂಬಾಲಿಸಿ ಬಂದರು. ಆದರೆ ಅವನಲ್ಲಿ ಎಳ್ಳಷ್ಟೂ ಎದೆಗಾರಿಕೆಯೂ ಉಳಿದಿರಲಿಲ್ಲ. ದೂರದಿಂದಲೇ ತನ್ನ ಎರಡು ಕೈಗಳಿಂದಲೂ ಖಡ್ಗಗಳನ್ನೂ ಝಳಪಿಸುತ್ತ ರಾಜನನ್ನು ಕಂಡು, 'ಎಲವೋ ಹೇಡಿ! ಇದೋ ಇದು ವಜೀರನ ತಲೆ, ಇದು ಸೇನಾಧಿಪತಿಯ ತಲೆ' ಎಂದು ಆ ಎರಡು ತಲೆಗಳನ್ನು ಅವನಿಗೆ ತೋರಿಸುತ್ತ 'ಬೇಗ ಬಾ; ನಿನ್ನ ತಲೆಯನ್ನೂ ತರಿದು ಅವುಗಳೊಂದಿಗೆ ಬಿಸಾಡುತ್ತೇನೆ. ಆಗ ನೀನು ಅಪೇಕ್ಷಿಸಿದಂತೆ ಮೂರು ತಲೆಗಳೇ ಆದುವು' ಎಂದು ಆರ್ಭಟಿಸುತ್ತ ಮುನ್ನುಗಿದ. ಆ ವೀರಸಿಂಹನ ಪರಾಕ್ರಮಭರಿತ ಸಾಹಸವನ್ನು ಮೊದಲೇ ಅರಿತಿದ್ದ ಹೇಡಿ ಸೈನಿಕರು ತಲೆ ಕಾಲು ತಿಳಿಯದೆ ಮತ್ತೆ ಪಲಾಯನ ಮಾಡಿಬಿಟ್ಟರು. "ಈ ಅದ್ಭುತ ಕೆಲಸಕ್ಕೆ ನಿನ್ನ ಸೈನಿಕರಾದರೆ ಸಾಲದೆ? ಅರಮನೆಯಲ್ಲಿ ರಾಣೀವಾಸವನ್ನು ವಿರಹಕ್ಕೆ ಗುರಿಪಡಿಸಿ ನೀನೇ ಬರಬೇಕಿತ್ತೆ? ನಿನ್ನ ಸೈನಿಕರಿಗೆ ಅಪ್ಪಣೆ ಮಾಡು; ಮುನ್ನುಗ್ಗಲಿ" ಎಂದು ಖಾನನು ಪರಿಹಾಸ್ಯ ಮಾಡಿದ. ಅವಮಾನವನ್ನು ತಡೆಯಲಾರದೆ ಕ್ರೋಧಾವೇಶದಿಂದ ತುಂಬಿ ಹೋದ ರಾಜನು ನನ್ನನ್ನು ತೋರಿಸುತ್ತ 'ಈ ದ್ರೋಹಿಯನ್ನು ಕೈ ಸೆರೆ ಹಿಡಿಯಿರಿ' ಎಂದು ಸೈನಿಕರಿಗೆ ಕೂಗಿ ಹೇಳಿದ. ಆದರೆ ಬಿಹ್‍ಜಾದಾಖಾನನು ಗಹಗಹಿಸಿ ನಕ್ಕ. ರಾಜನಿಗೆ ಇನ್ನೂ ಉಕ್ಕಿಬಂತು ಕೋಪ. 'ಹಿಡಿಯಿರಿ ಇವನನ್ನು ಮೊದಲು. ನೀವು ಮೂರ್ಖರು! ನಿಧಾನವೇಕೆ?' ಎಂದು ಆಬ್ಬರಿಸುತ್ತ ಹಿಂತಿರುಗಿ ನೋಡಿದ-ರಾಜ! ಆದರೆ ಅಲ್ಲಿ ಯಾರಿದ್ದಾರೆ? ಹೆದರಿದ ಆ ಸೈನಿಕರು ಆ ವೇಳೆಗೆ ಎಷ್ಟೋ ದೂರ ಪಲಾಯನ ಮಾಡಿದ್ದರು. ಉಳಿದವರು ರಾಜ-ಅವನಂತೆಯೇ ಹೇಡಿಗಳಾದ ಅವನ ಬೆಂಗಾವಲಿನವರು. ಸದ್ಯ ಪ್ರಾಣದೊಂದಿಗೆ ತಪ್ಪಿಸಿಕೊಂಡು ಓಡಿಹೋದರೆ ಸಾಲದೆ ಎಂದು ಅವರು ಜಪಮಣಿ ಎಣಿಸುತ್ತಿದ್ದರು. ಇನ್ನೂ ಅಲ್ಲಿ ನಿಂತರೆ ಪ್ರಾಣಕ್ಕೇ ಸಂಚಕಾರವೆಂದು ಅರಿತ ಆ ಹೇಡಿ ರಾಜ ತನ್ನ ಕುದುರೆಯನ್ನು ತಿರುಗಿಸಿ, ಚುರುಕಿನಿಂದ ಓಡಿಸಿ, ತಲೆಮರೆಸಿಕೊಂಡ.

ಯುದ್ಧ ಭೂಮಿಯು ಈಗ ಬರಿದಾಯಿತು. ಭಯಭೀತಿಗಳು ದೂರವಾದುವು. ನಮ್ಮ ಧೀರ ಸಂರಕ್ಷಕನು ನಮ್ಮೆಡೆಗೆ ಬಂದು ವಿನಯದಿಂದ

ನಮಸ್ಕರಿಸಿದನು. ಆ ರಣಧುರೀಣನ ಸಾಹಸವನ್ನು ಅತಿಶಯವಾಗಿ ಮೆಚ್ಚಿದ ರಾಜಕುಮಾರಿಯು 'ಖಾನ ಸಾಹೇಬ! ನಿನ್ನ ಈ ಋಣವನ್ನು ನಾನು ಈ ಜನ್ಮದಲ್ಲಿ ತೀರಿಸಲಾರೆ' ಎಂದು ಆನಂದ ಮತ್ತು ಕೃತಜ್ಞತೆಗಳ ಸೂಚಕವಾದ ಭಾಷ್ಪವನ್ನು ಧಾರಾಕಾರವಾಗಿ ಸುರಿಸಿದಳು.

"ಈಗ ನಾವು ಈ ಶೈತಾನೀ ಪ್ರದೇಶವನ್ನು ಬಿಟ್ಟು ಹೊರಡುವ" ಎನ್ನುತ್ತ ಮೊದಲಿನಂತೆಯೇ ಬಿಹ್‌ಜಾದಖಾನನು ತಮ್ಮ ಮುಂದೆ ದಾರಿ ತೋರಿಸುತ್ತ ನಡೆದ. ನಾನೂ ರಾಜಕುಮಾರಿಯೂ ಯಥಾಪ್ರಕಾರ ಅವನನ್ನು ಹಿಂಬಾಲಿಸಿದೆವು. ನಾವು ಪರ್ಷಿಯದ ಕಡೆ ಭೂಮಾರ್ಗವಾಗಿಯೇ ಪ್ರಯಾಣ ಮಾಡತೊಡಗಿದೆವು. ನಾವು ಮೂವರೂ ಸವಾರಿ ಮಾಡುತ್ತಿದ್ದುದು ಅತ್ಯುತ್ತಮ ವಾದ ಅಶ್ವಗಳು. ಆದುದರಿಂದ ಅತಿ ಶೀಘ್ರದಲ್ಲೇ ನಾವು ನಮ್ಮ ನಾಡಿನ ಗಡಿ ಯನ್ನು ಮುಟ್ಟಿದೆವು. ನಾನು ಹಿಂತಿರುಗಿ ಬಂದಿರುವುದಾಗಿ ನನ್ನ ತಂದೆ (ಪರ್ಷಿಯಾದ ಬಾಲ್ಕ್‌ದೇಶದ ಅರಸ) ಗೆ ಸಮಾಚಾರವನ್ನು ಮುಂಗಡವಾಗಿ ಕಳುಹಿಸಿಕೊಟ್ಟೆ. ಯಾವುದೋ ಅಪಮೃತ್ಯುವಿಗೊಳಗಾಗಿದ್ದಿರಬೇಕೆಂದು ನನ್ನ ಹಂಬಲವನ್ನು ತೊರೆದಿದ್ದ ನನ್ನ ತಂದೆಗಾದ ಆನಂದವನ್ನು ಬಣ್ಣಿಸಲಸದಳ ವಾದುದು. ಆತನು ತನ್ನ ಮಂತ್ರಿ ಸಭಾಸದ–ಪುರಪ್ರಮುಖರೊಂದಿಗೆ ನನ್ನ ನ್ನೆದುರುಗೊಳ್ಳುವುದಕ್ಕಾಗಿ ಹೊರಟುಬಂದು ಆಚೆ ದಡದಲ್ಲಿ ಕಾದಿದ್ದನು. ನಾವು ನಮುಗಡ್ಡವಾದ ಹೊಳೆಯನ್ನು ದಾಟಿದರೆ ಸಾಕು–ಆಚೆ ದಡದಲ್ಲಿ ನಮ್ಮ ರಾಜ್ಯ! ವರ್ಷಾಂತರಗಳಿಂದ ನಾನು ಬಿಟ್ಟಗಲಿದ್ದ ತಾಯ್ತಂದೆ–ಬಂಧು ಮಿತ್ರರು! ನನ್ನ ಎದೆಯು ಪುನರ್ಮಿಲನಕ್ಕೆ ತೀವ್ರವಾಗಿ ತವಕಗೊಂಡಿತು. ಆನಂದಪರವಶನಾದ ನಾನು ಊಹಾಪೋಹಗಳನ್ನೂ ಕಳೆದುಕೊಂಡ ನಾನು ನೀರಿನೊಳಕ್ಕೆ ನನ್ನ ಕುದುರೆಯನ್ನು ಓಡಿಸಿದೆ. ಅದು ಈಜಿಕೊಂಡು ನನ್ನನ್ನು ಆಚೆಯ ದಡಕ್ಕೆ ಸೇರಿಸಿತು. ನನ್ನ ತಂದೆಯು ತುಂಬಿ ಬಂದ ತನ್ನ ಆನಂದ ದಿಂದ ಮೈಯುಬ್ಬಿ ಭಾಷ್ಪಾಂಜಲಿ ಸುರಿಸುತ್ತ ನನ್ನನ್ನು ಗಾಢವಾಗಿ ಆಲಿಂಗಿಸಿ ಮೈದಡುವುತ್ತ 'ಕುಮಾರಾ! ದೈವೇಚ್ಛೆ. ನೀನು ಹೀಗೆ ಹಿಂತಿರುಗಿ ಬಂದು ಅಂದಕಾರದಲ್ಲಿ ತುಂಬಿ ಹೋಗಿದ್ದ ನಮ್ಮೆದೆಯನ್ನು ಮತ್ತೆ ಬೆಳಗಿದೆ!' ಎಂದು ಆದರದಿಂದ ನನ್ನ ತಲೆಯನ್ನು ನೇವರಿಸಿದ.

ನನ್ನ ಅದುವರೆಗಿನ ವೃತ್ತಾಂತವನ್ನೆಲ್ಲ ನನ್ನ ತಂದೆಗೆ ಸೂಕ್ಷ್ಮವಾಗಿ ತಿಳುಹಿಸಿದೆ. ಬಿಹ್‌ಜಾದ್‌ಖಾನನ ಉದಾರ ಸಹಾಯವನ್ನು ಕೊಂಡಾಡಿದೆ. ರಾಜಪುತ್ರಿಯು ನನ್ನನ್ನು ಕೈಹಿಡಿದಿರುವಳೆಂದೂ, ಆಚೆ ದಡದಲ್ಲಿ ಕಾಯುತ್ತಿರುವ ಳೆಂದೂ ಹೇಳಿದೆ. ಅವರಿಬ್ಬರನ್ನೂ ಕರೆತರಲು ನನ್ನ ತಂದೆ ದೋಣಿಗಳಿಗೆ ಏರ್ಪಾಡು ಮಾಡಿದನು. ಆವೇಳೆಗೆ ರಾಜಪುತ್ರಿಯ ಕುದುರೆಯು ನನ್ನ ಕುದುರೆಯು ಮರಿಯಿರಬಹುದೆಂದು ಕಾಣಿಸುತ್ತದೆ. ತನ್ನ ತಾಯಿ (ಕುದುರೆ) ನನ್ನನ್ನು ಹೊತ್ತು ಈಜಿಕೊಂಡು ದಡವನ್ನು ಸೇರಿದ್ದನ್ನು ಕಂಡು ತಾನೂ ನೀರಿ ನಲ್ಲಿ ಧುಮುಕಿತು. ರಾಜಪುತ್ರಿ ಹೆದರಿದಳು. ನಡುನೀರಿಗೆ ಈಜಿಕೊಂಡು ಬಂದಿತು. ಹೆದರಿದ ರಾಜಕುಮಾರಿ ಕಡಿವಾಣವನ್ನು ಸಡಿಲಬಿಡುವುದಕ್ಕೆ ಬದಲಾಗಿ ಅದನ್ನು ಬಲವಾಗಿ ಹಿಡಿದೆಳೆದಳು. ಕುದುರೆಯು ಈಜಲು ಸಾಧ್ಯ ವಿಲ್ಲದೆ ಸುಳಿಗೆ ಸಿಕ್ಕಿಬಿದ್ದು ರಾಜಪುತ್ರಿಯೊಡನೆ ಮಡುವಿನಲ್ಲಿ ಮುಳುಗಿತು. ಅವಳನ್ನು ರಕ್ಷಿಸುವುದಕ್ಕಾಗಿ ಬಿಹ್‌ಜಾದಖಾನನೂ ನದಿಯಲ್ಲಿ ಹಾರಿದ. ಅವನ ಕುದುರೆಯು ಈಜಿಕೊಂಡು ರಾಜಪುತ್ರಿ ಮುಳುಗಿದ್ದ ಕಡೆಗೆ ಖಾನನನ್ನು ಕೊಂಡೊಯ್ದಿತು. ಖಾನನು ನೀರಿನೊಳಗೆ ಮುಳುಗಿ ಎಲ್ಲೆಲ್ಲೂ ಹುಡುಕಿದ. ರಾಜಪುತ್ರಿಯ ಸುಳಿವೇ ಇಲ್ಲ. ಎರಡಾವರ್ತಿ ನೀರಿನ ಮೇಲೆ ಕಾಣಿಸಿಕೊಂಡು ಕೊನೆಯ ಪ್ರಯತ್ನವೋ ಎಂಬಂತೆ ಮೂರನೆಯಾವರ್ತಿ ನೀರಿನಲ್ಲಿ ಮುಳುಗಿ ದವನು ಮೇಲೇಳಲೇ ಇಲ್ಲ. ಈ ಅಪಘಾತವನ್ನು ನಾವೆಲ್ಲ ಆಚೆಯ ದಡದಿಂದ ನೋಡುತ್ತಲೇ ನಿಸ್ಸಹಾಯರಾಗಿ ನಿಂತಿದ್ದೆವು. ಆ ವೇಳೆಗೆ ರಾಜಪುತ್ರಿಯನ್ನು ಕರೆತರಲೆಂದು ಏರ್ಪಡಿಸಿದ ದೋಣಿಗಳು ಸಿದ್ಧವಾದುವು. ಆದರೆ ಕೆಲಸವು ಕೈ ಮಿಂಚಿ ಹೋದ ಮೇಲೆ ದೋಣಿಗಳು ಬಂದೇನು ಫಲ? ರಾಜನ ಆಜ್ಞೆಯಂತೆ ಈಜು ಬಲ್ಲವರು ಹೊಳೆಯಲ್ಲಿ ಮುಳುಗಿ ಹುಡುಕಿ ನೋಡಿದರು. ಬೆಸ್ತರು ನಾನಾ ಕಡೆಗಳಲ್ಲೂ ಬಲೆ ಬೀಸಿ ಬೀಸಿ ಬೇಸತ್ತರು. ಮುಳುಗಿಹೋದ ರಾಜ ಪುತ್ರಿ, ಬಿಹ್‌ಜಾದಖಾನ ಮತ್ತು ಅವರ ಎರಡು ಕುದುರೆಗಳ ಸುಳಿವೇ ಸಿಕ್ಕ ದಾಯಿತು. ಆಗ ನನಗುಂಟಾದ ಯಾತನೆಯನ್ನು ಹೇಗೆ ಬಣ್ಣಿಸಲಿ? ತಂದೆಯ ಬಲವಂತಕ್ಕಾಗಿ ಕೆಲದಿನಗಳು ಮಾತ್ರ ಅರಮನೆಯಲ್ಲಿ ತಂಗಿದ್ದೆ. ಅತೀವ ಯಾತನೆಯಿಂದ ಅನ್ನಾಹಾರಗಳನ್ನು ತೊರೆದೆ. ವೈದ್ಯರು ಔಷಧಿಗಳನ್ನು ಕುಡಿ

ಸಿದರು ; ಮುಲ್ಲಾನರು ಪ್ರಾರ್ಥನೆಗಳನ್ನು ಪಠಿಸಿದರು. ಆದರೆ ಶೋಕಪೀಡಿತ ನಾದ ನಾನು ದಿನೇ ದಿನೇ ಬಲಹೀನನಾಗುತ್ತ ಬಂದೆ.

ಇಷ್ಟು ಪ್ರಯಾಸದಿಂದ, ಸಂಪಾದಿಸಿ ಕರೆತಂದ ರಾಜಪುತ್ರಿಯನ್ನೂ, ಆ ದೀನದಯಾಳು ಸಾಹಸವೀರ ಬಿಹದ್‌ಜಾದಖಾನನನ್ನೂ ಊರ ಬಾಗಿಲಲ್ಲಿ ಕಳೆದುಕೊಂಡ ನನ್ನ ವ್ಯಥೆ ನನ್ನನ್ನು ಇರಿಯತೊಡಗಿತು. ಒಂದು ದಿನ ನಾನು ಬಾಳಲ್ಲಿ ಬೇಸರಗೊಂಡು ಪ್ರಾಣವನ್ನು ತೊರೆದುಬಿಡುವ ಸನ್ನಾಹದಲ್ಲಿ, ಅದೇ ಹೊಳೆಯಲ್ಲಿ ಬಿದ್ದು ರಾಜಪುತ್ರಿ ಮುಳುಗಿ ಹೋದೆಡೆಗೆ ಈಜಿಕೊಂಡು ಹೋದೆ. ಸೆಳವಿನಲ್ಲಿ ಸಿಲುಕಿ ಇನ್ನೇನು ಮುಳುಗಿ ಹೋಗುವುದರಲ್ಲಿದ್ದೆ. ಅಷ್ಟರಲ್ಲಿ ನಿಮಗೆ ಕಾಣಿಸಿಕೊಂಡ ಅದೇ ಸವಾರನು ನನ್ನನ್ನು ತಡೆಗಟ್ಟಿ ಹೇಳಿದನು :

"ಏನಿದು ಈ ಅಚಾತುರ್ಯ! ಪ್ರಾಣವನ್ನು ತೊರೆವ ಈ ಹಂಚಿಕೆ ಏಕೆ? ಬಿಹ್‌ಜಾದಖಾನನೂ, ರಾಜಪುತ್ರಿಯೂ ಜೀವಸಹಿತ ಇದ್ದಾರೆ. ದೈವ ದಲ್ಲಿ ನಂಬಿಕೆಯನ್ನು ತೊರೆಯದಿರು. ಪ್ರಾಣವೊಂದಿದ್ದರೆ ಎಂದಾದರೂ ನಿನ್ನ ಬಯಕೆ ಈಡೇರೀತು. ಹೋಗು; ನಿನ್ನಂತೆ ಬಳಲಿ ಬೆಂಡಾದ ಇನ್ನಿಬ್ಬರು ಫಕೀರರು ಈಗ ರೂಮ್ ನಗರದಲ್ಲಿದ್ದಾರೆ. ಅವರೊಡನೆ ಹೋಗಿ ಸೇರಿಕೋ. ನಾಲ್ಕನೆಯ ಫಕೀರನೊಬ್ಬನು ಅಲ್ಲಿಗೆ ಬಂದು ಸೇರುತ್ತಾನೆ. ನಿಮ್ಮ ನಿಮ್ಮ ಕಥೆಗಳನ್ನು ಪರಸ್ಪರವಾಗಿ ಹೇಳಿಕೊಳ್ಳುತ್ತ ಒಬ್ಬರನ್ನು ಬಿಟ್ಟೊಬ್ಬರು ಅಗಲ ದಂತೆ ಒಗ್ಗಟ್ಟಾಗಿರಿ. ನೀವು ರೂಮ್ ಸುಲ್ತಾನನನ್ನು ಸಂಧಿಸುವಿರಿ. ಆಗ ನಿಮ್ಮೆಲ್ಲ ಕಷ್ಟಗಳೂ ಪರಿಹಾರ ಹೊಂದಿ. ನಿಮ್ಮ ಬಯಕೆಗಳು ಈಡೇರಿ ನೀವು ಸುಖ ಸಂತೋಷಗಳಲ್ಲಿ ಓಲಾಡುವಿರಿ."

ಹೀಗೆಂದು ಹೇಳಿ ಸವಾರನು ಅದೃಶ್ಯನಾದನು. ಅವನ ಮಾತಿನಂತೆ ನನ್ನ ಸಂಕಟದ ಹೊರೆಯನ್ನು ಹೊತ್ತು ನಿಮ್ಮ ಬಳಿ ಬಂದು ಸೇರಿದ್ದೇನೆ ಎಂದು

ಮೂರನೆಯ ಫಕೀರನು ತನ್ನ ಕಥೆಯನ್ನು ಹೇಳಿ ಮುಗಿಸಿದನು.

# ನಾಲ್ಕನೆಯ ಫಕೀರನು ಹೇಳಿದ ಕಥೆ

## ೨೯

ನಾಲ್ಕನೆಯ ಫಕೀರನು 'ನೀವೆಲ್ಲ ನನ್ನ ಮಿತ್ರರು. ದೈವನ್ಯಾಯವನ್ನೂ ದೈವಸಂಕಲ್ಪವನ್ನೂ ಚೆನ್ನಾಗಿ ಅಳೆದು ನೋಡಿದವರು. ಆದುದರಿಂದ ನಾನು ಅನುಭವಿಸಿದ ಚಿತ್ರವಿಚಿತ್ರ ಹಿಂಸೆಗಳನ್ನೂ ಕೊನೆಗೆ ನನ್ನ ಬಾಳು ಸಾರರಹಿತ ನಾಗಿ ಹುಚ್ಚನಂತೆ ಫಕೀರವೇಷವನ್ನು ತಾಳಿ ನಾನು ಅಲೆದಲೆದು ಇಲ್ಲಿಗೆ ಬಂದೆ ನನ್ನ ವ್ಯಸನಮಯ ಕಥೆಯನ್ನು ಕೇಳಿ ನೀವು ಮರುಕಗೊಳ್ಳದಿರಲಾರಿರಿ— ನಾನು ಹೇಳುವ ಕಥೆಯನ್ನು ಸಾವಧಾನದಿಂದ ಲಾಲಿಸಿ' ಎನ್ನುತ್ತ ನಾಲ್ಕನೆಯ ಫಕೀರನು ಈ ರೀತಿ ಹೇಳತೊಡಗಿದನು :

ನಾನು ಚೀಣದೇಶದ ರಾಜಕುಮಾರ. ಬಾಲ್ಯದಲ್ಲಿ ನನ್ನನ್ನು ಅತ್ಯಂತ ಮುದ್ದಾಗಿ ಆರೈಕೆಮಾಡಿ ಬೆಳಸುತ್ತ ಬಂದರು. ನನ್ನ ಬಾಲ್ಯದ ದಿನಗಳು ಸ್ವರ್ಣಮಯವಾದ ದಿನಗಳು. ನನಗೇನೋ ಸಕಲ ವಿಧಗಳಲ್ಲೂ ರಾಜಯೋಗ್ಯ ವಾದ ಉತ್ತಮ ಶಿಕ್ಷಣವೇ ದೊರೆಯಿತು. ಆದರೆ ನನಗೆ ಲೋಕಾನುಭವವಿರ ಲಿಲ್ಲ. ಕೆಡುಕೆಂಬುದು–ಕೃತ್ರಿಮವೆಂಬುದು ಹೇಗಿರಬಹುದೋ ನನಗರಿವಾಗ ಲಿಲ್ಲ. ಕಂಟಕರಹಿತವಾಗಿ ಒಂದೇ ತೆರನಾದ–ಸುಗಮ–ಸುಖಮಯ–ಸಂತೋಷ ಭರಿತ ವಿಧಾನದಲ್ಲೇ ನನ್ನ ಉಳಿದ ಬಾಳೆಲ್ಲ ಕೊನೆಯವರೆಗೂ ಕಳೆದೀತೆಂದು ನಾನು ಹೊಂಗನಸುಗಳನ್ನು ಕಾಣುತ್ತ ಹರ್ಷಚಿತ್ತನಾಗಿದ್ದೆ. ಆದರೆ ನಾನು ಅರಮನೆಯ ಏಕಾಂತ ಜೀವನವನ್ನು ತೊರೆದು ಬಹಿರಂಗ ಪ್ರಪಂಚದೊಡನೆ ಬೆರೆಯತೊಡಗಿ ಒಂದೆರಡು ವರ್ಷಗಳು ಮಾತ್ರ ಆಗಿರಬಹುದು, ಆಗ ನಾನು ಎಳೆತನವನ್ನು ದಾಟಿ ಯೌವನದ ಎಲ್ಲೆಯನ್ನು ಮುಟ್ಟುವುದಕ್ಕೆ ಇನ್ನೂ ಆರೇಳು ವರ್ಷಗಳು ಉಳಿದಿದ್ದುವು. ಇಂತಹ ತಿಳಿದೂ ತಿಳಿಯದ ಅಜ್ಞಾನ ಬಾಲ ದೆಸೆ ಯಲ್ಲಿರುವಾಗಲೇ ರಾಜನಾದ ನನ್ನ ತಂದೆಯು ಕಾಲಗತಿಯನ್ನು ಹೊಂದಿದನು. ನಾನು ಅನಾಥನಂತಾದೆ. ರಾಜಕಾರ್ಯದ ಹಿರಿಯ ಭಾರವನ್ನು ಹೊತ್ತು ಸಮರ್ಪಕವಾಗಿ ನಿರ್ವಹಿಸಲು ಸಾಮರ್ಥ್ಯ ಸಾಲದವನಾಗಿದ್ದೆ, ಆದರೂ ರಾಜ್ಯದ

ಅರಸುತನಕ್ಕೆ ನಾನೇ ನ್ಯಾಯಬದ್ಧ ವಾರಸುದಾರನಾಗಿದ್ದೆ. ನನ್ನ ತಂದೆಯು ಮರಣ ಶಯ್ಯೆಯಲ್ಲಿದ್ದಾಗ ಆತನು ತನ್ನ ಸಹೋದರನಾದ, ನನ್ನ ಚಿಕ್ಕಪ್ಪ ನನ್ನು ತನ್ನ ತಲೆದಿಂಬಿನಬಳಿ ಕರೆಸಿಕೊಂಡು ಹೇಳಿದನು :

"ತಮ್ಮ! ನಾನೀಗ ಈ ರಾಜ್ಯವನ್ನು ಸಕಲ ಭೋಗಭಾಗ್ಯಗಳನ್ನೂ ತೊರೆದು ಹೊರಟು ಹೋಗುತ್ತಿದ್ದೇನೆ. ನನ್ನ ಬಾಲಕನೇ ಈ ರಾಜ್ಯದ ಉತ್ತ ರಾಧಿಕಾರಿಯೆಂದು ನೀನು ಬಲ್ಲೆ, ಆದರೆ ಅವನಿಗಿನ್ನೂ ಅನುಭವ ಸಾಲದು. ಅವನು ರಾಜಕಾರ್ಯ ನಿರ್ವಹಣೆಯಲ್ಲಿ ನಿಪುಣನಾಗುವ ವರೆಗೂ ನೀನು ಈ ರಾಜ್ಯದ ಭಂಡಾರವನ್ನೂ, ಸೈನ್ಯವನ್ನೂ ವಶಪಡಿಸಿಕೊಂಡು ಅವನ ಪ್ರತಿನಿಧಿ ಯಾಗಿ ಈ ರಾಜ್ಯವನ್ನು ನ್ಯಾಯ ನಿಷ್ಠೆಗಳಿಂದ ಆಳುತ್ತಿರು. ಆದರೆ ರಾಜ ಕುಮಾರನು ವಯಸ್ಸಿಗೆ ಬಂದು ಆಳುವಿಕೆಯ ಸೂತ್ರಗಳನ್ನು ನಿಪುಣತೆಯಿಂದ ವಹಿಸಿಕೊಳ್ಳಲು ಸಮರ್ಥನಾದೊಡನೆಯೆ ಎಲ್ಲ ಅಧಿಕಾರಗಳನ್ನೂ ಅವನಿಗೆ ಒಪ್ಪಿಸಿ ಬಿಡಲು ಮಾತ್ರ ಮರೆಯದಿರು. ಅಲ್ಲದೆ ನಿನ್ನ ಕುವರಿಯಾದ ರೋಷನ್ ಅಃಕ್ತಾರಳನ್ನು ಅವನಿಗೆ ಕೊಟ್ಟು ಮದುವೆ ಮಾಡಲೂ ಮರೆಯಬೇಡ. ನಾನು ಪ್ರಾಣವನ್ನು ತೊರೆಯುವ ಮುನ್ನ ನಿನಗೆ ಹೇಳಬೇಕಾದುದು ಇಷ್ಟೆ. ನನ್ನ ಈ ಮರಣ ಸಂದೇಶವನ್ನು ಎಳ್ಳಷ್ಟೂ ಚ್ಯುತಿಯಿಲ್ಲದಂತೆ ಪರಿಪಾಲಿಸುವಿಯೆಂದು ವಚನವನ್ನು ಕೊಟ್ಟರೆ ನಾನು ನಿಶ್ಚಿಂತೆಯಿಂದ ಪ್ರಾಣ ಬಿಡುತ್ತೇನೆ. ನನ್ನ ಈ ಸಂದೇಶವನ್ನು ಇಲ್ಲಿ ನೆರೆದಿರುವ ಮಂತ್ರಿ–ಸಭಾಸದರು, ಉನ್ನತ ಅಧಿಕಾರಿ ಗಳು–ಇವರೆಲ್ಲ ನೆರವೇರಿಸಿ ಕೊಡಲು ನಿನಗೆ ನೆರವಾಗಲೆಂದು ನಾನು ಆಗ್ರಹ ಪೂರ್ವಕವಾಗಿ ಹೇಳುತ್ತೇನೆ."

ನನ್ನ ತಂದೆಯ ಮರಣಾನಂತರ ನನ್ನ ಚಿಕ್ಕಪ್ಪನು ರಾಜ ಪ್ರತಿನಿಧಿಯಾಗಿ ರಾಜ್ಯವನ್ನು ಆಳತೊಡಗಿದುದು, ಮಾತ್ರವಲ್ಲದೆ ನನಗೆ ರಕ್ಷಕನಾಗಿಯೂ ಇದ್ದನು. ಅವನು ನನ್ನನ್ನು ತನ್ನ ಬಳಿ ಕರೆಸಿಕೊಂಡು "ನಿನಗೆ ವಯಸ್ಸು ಬರುವವರೆಗೂ ನೀನು ಅರಮನೆಯಲ್ಲಿಯೇ ಇರು. ಹೊರಗೆ ಬರಬೇಡ" ಎಂದು ಆಜ್ಞಾಪಿಸಿ ಕಳುಹಿಸಿದನು. ನನಗೆ ಹದಿನಾಲ್ಕು ವಯಸ್ಸು ತುಂಬುವವರೆಗೂ ನಾನು ಅಂತಃ ಪುರದಲ್ಲಿ ಹೆಣ್ಣು ಹುಡುಗಿಯರ ಸಹವಾಸದಲ್ಲೇ ಬೆಳೆದೆ. ನನಗೆ ತಮ್ಮಂದಿರಿರ ಲಿಲ್ಲ; ನನ್ನೊಡನೆ ಆಟ ವಾಡುದಕ್ಕೆ ಯಾವ ಹುಡುಗರೂ ನಿಯಮಿತರಾಗಿರಲಿಲ್ಲ. ಇದರಿಂದ ಸ್ತ್ರೀ ಸಹಜವಾದ ಲಜ್ಜಾ ಭಯಗಳೇ ನನ್ನಲ್ಲಿ ಹೆಚ್ಚಾಗಿ ಬೇರೂರಿ

ಬೆಳೆಯ ತೊಡಗಿದುವು. ಈ ತೆರನಾದ ಬಾಳನ್ನು ತಳ್ಳುವುದು ನನಗೆ ಬೇಸರದ ಹೊರೆಯಾಗಿ ಕಂಡಿತು. ಆದುದರಿಂದಲೇ ನನಗೆ ಯೌವನವು ಪ್ರಾಪ್ತವಾದೊಡನೆ ನನ್ನ ಬೇಸರದ ಬಾಳೂ ಕೊನೆಗೊಂಡಿತೆಂದು, ನಾನು ಆನಂದಗೊಂಡೆ. ನಾನು ಸಿಂಹಾಸನಾರೋಹಣ ಮಾಡುವೆನೆಂದೂ, ರೀಜೆಂಟನ ಮಗಳಾದ ಆ ಮನೋಹರ ರಾಜಪುತ್ರಿಯ ಕೈಹಿಡಿದು ಸುಖಿಸುವೆನೆಂದೂ ನನ್ನ ಮನಸ್ಸಿನಲ್ಲಿ ಸಂತಸವು ಮೂಡತೊಡಗಿತು. ಹೀಗೆಯೇ ಅಲ್ಲವೆ ಪ್ರಪಂಚದ ಮಾನವರೆಲ್ಲ ಬಯಕೆಯನ್ನು ನೆಚ್ಚಿ ಬಾಳುವುದು! ಆಶೆಯನ್ನು ತೊರೆದರೆ ಬಾಳಲ್ಲಿ ಉಳಿಯುವುದಾದರೂ ಏನು ?

ಮುಬಾರಕ್ ಎಂಬುವವನೊಬ್ಬ ನಂಬಕಸ್ಥ ಗುಲಾಮ. ಅವನು ನನ್ನ ತಂದೆಯ ಕಾಲದಲ್ಲಿ ಸದಾ ಅವನೊಂದಿಗೇ ಇರುತ್ತಿದ್ದವನು. ಮುಬಾರಕನೊಡನೆ ಚಿಕ್ಕಂದಿನಿಂದಲೂ ನಾನು ಬಹುವಾಗಿ ಪಳಗಿಕೊಂಡಿದ್ದೆ. ಅವನಿಗೂ ನನ್ನನ್ನು ಕಂಡರೆ ವಿಶೇಷ ಪ್ರೀತಿ ವಾತ್ಸಲ್ಯಗಳಿದ್ದುವು. ಮುಬಾರಕನು ನಂಬಿಕೆಗೆ ಪಾತ್ರನಾಗಿದ್ದಂತೆಯೇ ಬಹಳ ಬುದ್ಧಿ ಚತುರನಾಗಿಯೂ ಇದ್ದನು. ಎಷ್ಟೋ ವೇಳೆ ಅವನು ನನ್ನ ತಂದೆಗೆ ಸಲಹೆಗಳನ್ನೂ ಹೇಳಿದ್ದುಂಟು. ಅಂತೆಯೇ ನನ್ನ ರಹಸ್ಯಗಳನ್ನೂ ಅವನಲ್ಲಿ ಹೇಳುತ್ತಿದ್ದನು. ಆದುದರಿಂದ ರಹಸ್ಯಗಳನ್ನೂ ಕಾಪಾಡುವುದರಲ್ಲಿ ಅವನು ಎತ್ತಿದ ಕೈ. ಇಂತಹ ಮುಬಾರಕನು ನಾನು ಯೌವನದ ಗಡಿಯನ್ನು ಮುಟ್ಟಿದುದನ್ನು ಕಂಡು, ಇನ್ನೇನು ನನಗೆ ರಾಜ್ಯವು ಕರಗತವಾಗುತ್ತದೆ ಎಂದು ಹರ್ಷದಿಂದ ತುಂಬಿ ಹೋದನು. ಅವನು ನನ್ನನ್ನು ಇದರದಿಂದ ತನ್ನ ಬಳಿ ಕುಳ್ಳಿರಿಸಿಕೊಂಡು ಅಡಿಗಡಿಗೆ ಹೇಳುತ್ತಿದ್ದನು :

"ರಾಜಕುಮಾರಾ! ದೇವರು ದೊಡ್ಡವನು. ಅವನ ಇಚ್ಛೆ ಇದ್ದರೆ ಯೌವ್ವನಕ್ಕೆ ಬಂದ ನೀನು ನಿನ್ನ ಚಿಕ್ಕಪ್ಪನಿಂದ ರಾಜ್ಯವನ್ನು ವಹಿಸಿಕೊಂಡು ಸುಖವಾಗಿರಬಹುದು. ಗತಿಸಿದ ಅರಸ–ನಿನ್ನ ತಂದೆ–ತನ್ನ ಮರಣ ಕಾಲದಲ್ಲಿ ತನಗಿತ್ತ ಸಂದೇಶವನ್ನೂ ಅದನ್ನು ನೆರವೇರಿಸುವುದಾಗಿ ತಾನು ಮಾಡಿದ ಪ್ರಮಾಣವನ್ನೂ ನಿನ್ನ ಚಿಕ್ಕಪ್ಪನು–ಮರೆತಿರಲಾರೆನೆಂದು ನಂಬುತ್ತೇನೆ. ನೀನು ಸಿಂಹಾಸನವನ್ನು ಹತ್ತುವ ವಿಚಾರ ಮಾತ್ರವಲ್ಲದೆ ರೀಜೆಂಟನ ಕುಮಾರಿಯನ್ನು ಮದುವೆಯಾಗಿ ಸುಖದಿಂದಿರಬಹುದು."

ಮುಬಾರಕನ ಈ ಇಂಪಾದ ಮಾತುಗಳಿಂದ ನನ್ನ ಮನಸ್ಸಿನಲ್ಲಿ ಆ ವೇಳೆಗೆ

ಮೂಡಿದ್ದ ಆಶಾಕಿರಣಗಳು ಪ್ರಕಾಶಮಾನವಾಗಿ ಬೆಳಗತೊಡಗಿದುವು. ಆದರೆ ವಿಧಿಶಾಸನವು ಬೇರೆ ತೆರನಾಗಿದ್ದಿತು. ಸಿಂಹಾಸನವಲ್ಲಿ ಕುಳಿತು ರಾಜನಾಗ ಬೇಕಾಗಿದ್ದ ನಾನು ಒಂದಾನೊಂದು ದಿವಸ ಅಂತಃಪುರದ ಬಾಲಿಕೆಯರೊಂದಿಗೆ ಆಟವಾಡುತ್ತಿದ್ದೆ. ಇದ್ದಕ್ಕಿದ್ದಂತೆ ಒಬ್ಬ ಹೆಣ್ಣು ಗುಲಾಮಳು ನನ್ನ ಬಳಿ ಬಂದು ಏನೊಂದು ಕಾರಣವೂ ಇಲ್ಲದೆ ನನ್ನ ಕೆನ್ನೆಗೆ ಬಲವಾದ ಒಂದು ಏಟನ್ನು ಕೊಟ್ಟಳು. ಅದರಿಂದಾಗಿ ನನ್ನ ಕೆನ್ನೆಯಲ್ಲಿ ಅವಳ ಐದು ಬೆರಳೂಗಳ ಹಾಗೆಯೇ ಊರಿ ಎದ್ದು ಕಾಣುತ್ತಿದ್ದವು. ನಾನು ಅಳುತ್ತ ಮುಬಾರಕನ ಬಳಿ ಓಡಿಹೋದೆ ಈಗ ಅದನ್ನೆಲ್ಲ ನೆನೆಸಿಕೊಂಡರೆ ನನಗೇ ನಾಚಿಕೆಯಾಗುತ್ತದೆ. ಆಗಲಾರದೆ ಮತ್ತೆ ? ರಾಜ್ಯದ ಗದ್ದುಗೆಯನ್ನೇರಲು ಅರ್ಹನಾದ ನಾನು, ಇನ್ನೇನು ಏರಿ ಬಿಟ್ಟೆನೆಂದು ಸಂತಸಗೊಳುತ್ತಿದ್ದ ನಾನು, ಒಬ್ಬ ಸಾಧಾರಣ ಗುಲಾಮಗಿತ್ತಿಯ ಕೈಯಲ್ಲಿ ಬಲವಾಗಿ ಪೆಟ್ಟು ತಿಂದು ಅಳುತ್ತಳುತ್ತ ಮತ್ತೊಬ್ಬ ಗುಲಾಮ–ಮುಬಾರಕನ ಬಳಿ ಓಡಿಹೋಗಿ ದುಃಖ ತೋಡಿಕೊಂಡೆನೆಂದರೆ ಅದುವರೆಗಿನ ನನ್ನ ಅಂತಃಪುರವಾಸದಿಂದ ನನ್ನಲ್ಲೆಷ್ಟರಮಟ್ಟಿಗೆ ಪೌರುಷನಾಶವಾಗಿದ್ದಿರಬೇಕು ? ಹೀಗಾಗಬೇಕು ; ನಾನು ನಿರ್ವೀರ್ಯನಾಗಿ ನನ್ನ ಚಿಕ್ಕಪ್ಪನನ್ನುಎದುರಿಸಬಾರದು, ಮಂತ್ರಿಗಳಾದಿಯಾಗಿ ಎಲ್ಲರೂ ನನ್ನನ್ನು ಕಂಡು ನಕ್ಕು ತಾತ್ಸಾರ ಮಾಡಬೇಕು–ಎಲ್ಲ ಹಂಚಿಕೆಗಳನ್ನೂ ನನ್ನ ಚಿಕ್ಕಪ್ಪ ಕೃತ್ರಿಮದಿಂದ ಹೂಡಿದ್ದನೆಂದು ಸ್ವಲ್ಪ ಕಾಲಾನಂತರ ನನಗೆ ತಿಳಿಯಿತು. ಇರಲಿ ; ನಾನು ಹಾಗೆ ಬಿಕ್ಕಿ ಬಿಕ್ಕಿ ಅಳುವಂತಾದುದು ನನಗೆ ಅದುವರೆಗೆ ದೊರೆತ ಶಿಕ್ಷಣದ ಪ್ರತಿಫಲ. ಮುಬಾರಕನು ನನ್ನನ್ನು ಕಂಡೊಡನೆ ಬರಸೆಳೆದು ನನ್ನನ್ನು ತನ್ನೆದೆಗೆ ಬಿಗಿದಪ್ಪಿಕೊಂಡು, ನನ್ನ ಕಣ್ಣೊರೊರಸಿ ಸಂತೈಸಿ ಹೇಳಿದನು :

"ಹೆದರದಿರು ; ನಾನು ನಿನ್ನನ್ನು ಈ ದಿನ ರೀಜೆಂಟನ ಬಳಿ ಕರೆದೊಯ್ದು ನಿನ್ನ ರಾಜ್ಯವನ್ನು ನಿನಗೇ ಬಿಟ್ಟುಕೊಡಬೇಕೆಂದು ಹೇಳುತ್ತೇನೆ."

ತನ್ನ ಮಾತಿನಂತೆ ಮುಬಾರಕನು ಅಂದು ಸಂಧ್ಯಾಸಮಯದಲ್ಲಿ–ದರ್ಬಾರು ಯುತ್ತಿದ್ದ ವೇಳೆಯಲ್ಲಿ–ನನ್ನನ್ನು ನಮ್ಮ ಚಿಕ್ಕಪ್ಪನೆದುರಿನಲ್ಲಿ ಕರೆದುಕೊಂಡು ಹೋಗಿ ನಿಲ್ಲಿಸಿದ. ನನ್ನಲ್ಲಿ ಅತ್ಯಂತ ಕನಿಕರವನ್ನೂ ಅಭಿಮಾನವನ್ನೂ ತೋರುವಂತೆ ಸಭಾಸದರೆದುರಿನಲ್ಲಿ ನಟಿಸುತ್ತ ರೀಜೆಂಟನು.

"ವತ್ಸ! ಏನುಕಾರಣ ಇಲ್ಲಿಗೆ ಬಂದೆ? ನೀನೇಕೆ ಹೀಗೆ ವ್ಯಸನಾಕ್ರಾಂತ ನಾಗಿರುವೆ? ನಿನ್ನ ಮನಸ್ಸಿನ ದುಗುಡವನ್ನು ಬಿಚ್ಚಿ ಹೇಳು"

ಎಂದು ಕೇಳಿದ. ಮುಬಾರಕನು ನನ್ನಪರವಾಗಿ ಮಾತನಾಡುತ್ತ ಹೇಳಿದ:

"ಪ್ರಭುಗಳಲ್ಲಿ ಏನನ್ನೋ ರಾಜಕುಮಾರನು ಬಿನ್ನವಿಸಿಕೊಳ್ಳಬೇಕೆಂದು ಹಂಬಲಿಸುತ್ತಿರುವಂತಿದೆ."

"ಓಹೋ, ತಿಳಿಯಿತು. ಇಷ್ಟರಲ್ಲೆ ನನ್ನ ಕುಮಾರಿಯನ್ನು ಈತನಿಗೆ ಕೊಟ್ಟು ಲಗ್ನ ಮಾಡಬೇಕೆಂದಿದ್ದೇನೆ." ಎಂದ ರೀಜೆಂಟ್.

"ಹಾಗೇನು? ಬಹಳ ಸಂತೋಷದ ಸಂಗತಿಯದು" ಎಂದ ಮುಬಾರಕ್.

"ಕೃತ್ರಿಮಿಗಳ ಒಳಸಂಚಿನ ಬಲೆಗಳಲ್ಲಿರುವ ದಾರಗಳನ್ನು ಎಣಿಸಬಲ್ಲವ ರಾರು?" ರೀಜೆಂಟನು ನಸುನಗುತ್ತ ಹೇಳಿದ:

"ಮಂತ್ರಿ! ಆಸ್ಥಾನದ ಜ್ಯೋತಿಷಿಗಳನ್ನು ಬರಮಾಡು."

ಜ್ಯೋತಿಷಿಗಳು ಬಂದರು. ಅವರೆಲ್ಲ ಮೊದಲಿಂದಲೇ ಹೊಟ್ಟೆ ತುಂಬ ಲಂಚ ತಿಂದು ರೀಜೆಂಟನು ಹೇಳಿದಂತೆ ಕುಣಿಯತಕ್ಕವರು. ಸಮಯ ಸಾಧಿಸಿ ಆದಷ್ಟು ಬೊಜ್ಜು ಬೆಳಸಿ ಸಭ್ಯರಂತೆ ತೋರಿಸಿಕೊಳ್ಳುವವರು. ಆ ನಿಸ್ಸೀಮರನ್ನು ಕುರಿತು ರೀಜೆಂಟನು ಕೇಳಿದ ;

"ಜ್ಯೋತಿಷಿಗಳೇ! ಈ ರಾಜ್ಯಕ್ಕೆ ಉತ್ತರಾಧಿಕಾರಿಯಾದ ಈ ಅರಸು ಕುಮಾರನಿಗೂ, ನಮ್ಮ ಕುವರಿಗೂ ಲಗ್ನವಾಗಬೇಕಾಗಿದೆ. ಅವರು ಹುಟ್ಟಿದ ಹೊತ್ತು ಘಳಿಗೆಗಳನ್ನು ಗುಣಿಸಿಕೋಡಿ ವಿವಾಹಕ್ಕೆ ಪ್ರಶಸ್ತವಾದ ಮೂಹೂರ್ತ ವನ್ನು ನಿರ್ಧರಿಸಿ ಹೇಳಿ. ಹೆಚ್ಚು-ಕಡಿಮೆ ಹೇಳಿಗೀರಿ ; ಅಸತ್ಯವನ್ನು ನುಡಿ ದೀರಿ ; ಆಮೇಲೆ ನಿಮ್ಮ ತಲೆಗಳು ಉರುಳಿ ಹೋದಾವು-ಎಚ್ಚರಿಕೆ!"

ರೀಜೆಂಟ್ ಮೇಲ್ಕಂಡ ಮಾತುಗಳನ್ನಾಡುವಾಗ ಕಣ್ಣು ಸನ್ನೆಮಾಡಿದ. ಜ್ಯೋತಿಷಿಗಳು ಅವನ ಸಂಕೇತವನ್ನು ಸೂಕ್ಷ್ಮವಾಗಿ ಗ್ರಹಿಸಿದರು. ಎಷ್ಟೋ ಹೊತ್ತು ಒಬ್ಬೊಬ್ಬರೂ ಜಾತಕವನ್ನು ನೋಡಿ, ಲೆಕ್ಕ ಹಾಕಿ, ಕೊನೆಗೆ ತಂತಮ್ಮಲ್ಲೆ ಮಾತನಾಡಿಕೊಂಡು ಹೇಳಿದರು :

"ಮಹಾ ಪ್ರಭು! ತಮ್ಮ ಘನಚಿತ್ತಕ್ಕೆ ವೇದ್ಯವಾಗಲಿ, ಯಾವ ತಿಂಗಳು, ಯಾವ ವಾರ, ಯಾವ ದಿನ, ಯಾವ ಘಳಿಗೆ ವಿವಾಹ ಮೂಹೂರ್ತಕ್ಕೆ ಪ್ರಶಸ್ತ ವಾಗಿದೆ ಎಂದು ಕೇಳಿದ್ದಿರಿ. ನಮಗೆ ತಿಳಿದ ಎಲ್ಲಾ ಶಾಸ್ತ್ರ ಪ್ರಮಾಣಗಳನ್ನೂ

ಪರಿಗಣಿಸಿದೆವು. ಗ್ರಹಗಳ ಬಲಾಬಲಗಳನ್ನು ಪರಿಕ್ಷಿಸಿ ನೋಡಿದೆವು, ಹಾಗೆ ನೋಡಿದ್ದರಲ್ಲಿ ಈ ವರ್ಷವೆಲ್ಲ ಒಳ್ಳೆಯ ದಿನಗಳಿಲ್ಲ. ಹಾಗೂ ಈ ವರ್ಷವೆಲ್ಲ ಯಾವುದೊಂದು ಅಡ್ಡಿ ಅಡಚಣೆಗಳೂ, ತೊಂದರೆ ತಾಪತ್ರಯಗಳೂ ಇಲ್ಲದೆ ಕಳೆದ ಪಕ್ಷದಲ್ಲಿ ಬರುವ ವರ್ಷ ಪ್ರಶಸ್ತವಾಗಿರುತ್ತದೆ."

ರೀಜೆಂಟನು ಬಯಸಿದ್ದುದನ್ನೇ ಜ್ಯೋತಿಷಿಗಳು ಸಭಾಸದರ ಸಮ್ಮುಖದಲ್ಲಿ ಹೇಳಿ, ತಮಗೆ ಮೀಸಲಾದ ಸನ್ಮಾನವನ್ನು ಪಡೆದು ತೆರಳಿದರು. ನನ್ನ ಮನಸ್ಸು ಖೇದಕ್ಕೊಳಗಾಯಿತು. ರೀಜೆಂಟನು ಬಳಿಕ ನನ್ನನ್ನೂ ಕಂಡು "ಕೇಳಿದೆಯಾ ವತ್ಸ! ಈ ವರ್ಷವೆಲ್ಲ ನಿನ್ನ ವಿವಾಹಕ್ಕೆ ಪ್ರಶಸ್ತವಿಲ್ಲವಂತೆ! ಆಗಲಿ, ಕೊಳ್ಳೆ ಹೋದದ್ದೇನು? ಬರುವ ವರ್ಷವೇ ಆಗಲಂತೆ! ಹೋಗು; ಅಂತಃಪುರದಲ್ಲಿ ಸುಖವಾಗಿ ಆಟವಾಡಿಕೋ ಹೋಗಪ್ಪ!" ಎಂದು ಹೇಳಿದನು. ರೀಜೆಂಟನ ಸೂಚನೆಯಂತೆ ಮುಬಾರಕನು ನನ್ನನ್ನು ಅಂತಃಪುರಕ್ಕೆ ಕರೆದೊಯ್ದನು ಹಾಗೆ ಕಳುಹಿಸಿಕೊಡುವಾಗ ಮುಬಾರಕನನ್ನು ಕಂಡು ರೀಜೆಂಟನು ಹೇಳಿದ:

"ದೇವರ ದಯವಿದ್ದರೆ ಬರುವ ವರ್ಷ ನಾನು ಅವನ ಹೆಸರಲ್ಲಿ ಹೊತ್ತ ಎಲ್ಲ ಅಧಿಕಾರ ಸೂತ್ರಗಳನ್ನೂ ಅವನಿಗೇ ವಹಿಸಿ ಬಿಡುತ್ತೇನೆ. ಆದರೆ ಅದುವರೆಗೆ ಅವನು ತನ್ನ ಮನಸ್ಸಿನ ನೆಮ್ಮದಿಯನ್ನು ಕೆಡಿಸಿಕೊಳ್ಳದಿರಲಿ, ಆದಷ್ಟು ವಿದ್ಯೆ ಕಲಿಯುವುದರಲ್ಲಿ ನಿರತನಾಗಿರುವಂತೆ ಅವನನ್ನು ಪ್ರೇರೇಪಿಸು."

ಮುಬಾರಕನಿಗೆ ರೀಜೆಂಟನ ಮಾತಿನಿಂದ ನಿರಾಶೆಯಾಯಿತೆಂದೇ ನಾನು ಅರ್ಥಮಾಡಿಕೊಂಡೆ. ಅಂತೂ ನಾನು ನನ್ನ ಅಸಹ್ಯ ಜೀವನವನ್ನು ಆ ಬಾಲಕಿಯರ ನಡುವಿನಲ್ಲಿ, ಅಂತಃಪುರವೆಂಬ ತಪ್ಪುಹೆಸರು ಹೊತ್ತ ಆ ಬಂದೀಖಾನೆಯಲ್ಲಿ ನನ್ನ ಕಾಲವನ್ನು ಅತಿ ಕಷ್ಟದಿಂದ ನೂಕಬೇಕಾಗಿ ಬಂತು.

ನಾನು ರೀಜೆಂಟನ್ನು ನೋಡಿ ಮರಳಿಬಂದ ಮೇಲೆ ಕೇವಲ ಎರಡು ಮೂರು ದಿನಗಳು ಮಾತ್ರ ಕಳೆದಿರಬಹುದು. ಮುಬಾರಕರು ನನ್ನಬಳಿ ಅವಸರವಸರವಾಗಿ ಓಡಿಬಂದು ನನ್ನನ್ನುಬಾಚಿ ತಬ್ಬಿಕೊಂಡು ಘಳಘಳನೆಕಣ್ಣೀರು ಸುರಿದ.

"ಏನದು ಮುಬಾರಕ್? ಏಕೆ ಹೀಗೆ ಅಳುತ್ತಿರುವೆ?" ಎಂದು ನಾನವನನ್ನು ಸಮಾಧಾನಪಡಿಸುತ್ತ ಕೇಳಿದೆ!

"ಅತ್ಯಂತ ವ್ಯಸನಕರವಾದ ಸಮಾಚಾರವಿದೆ ಹುಷಾರ್! ಅದನ್ನು ಹೇಳಲು ನನ್ನ ನಾಲಿಗೆಗೆ ತ್ರಾಣವಿಲ್ಲದೆ ಹೋಗಿದೆ."

‘‘ಏನಾದರೂ ಸರಿ, ಹೇಳಿಬಿಡು ಮುಬಾರಕ್ !” ‘‘ಹೇಳಲೇ, ಬಾಯಿ ಬರುವುದಿಲ್ಲ. ಹೇಳದಿರಲೇ ಮನಸ್ಸು ಕೇಳುವುದಿಲ್ಲ.”

‘‘ಬೇಗ ಹೇಳು ಮುಬಾರಕ್ !”

‘‘ಹೇಳುತ್ತೇನೆ” ಎನ್ನುತ್ತ ಮುಬಾರಕನು ಕಣ್ಣೊರಸಿಕೊಂಡು “ಎಷ್ಟೊಂದು ಕೃತ್ರಿಮವು ತುಂಬಿಹೋಗಿದೆ ಈ ಪ್ರಪಂಚದಲ್ಲಿ” ಎನ್ನುತ್ತ ನಿಟ್ಟುಸುರುಬಿಟ್ಟನು. ಕೊನೆಗೆ ಮುಬಾರಕನು ನನ್ನಲ್ಲಿ ಹೇಳಿದ ಮಾತುಗಳಿವು.

“ರಾಜಕುಮಾರಾ! ನನ್ನರಸೇ! ಕೇಳು. ಆದಿನ ನಿನ್ನನ್ನು ಆ ಧೂರ್ತ ರೀಜೆಂಟನ ಬಳಿ—ಚಿಕ್ಕಪ್ಪನೆಂದು—ನಿನ್ನತಂದೆಯ ತಮ್ಮನೆಂದು ನಿನ್ನ ರಕ್ಷಕನೆಂದು—ಹೇಳಿಕೊಳ್ಳುವ ಆ ಮಾನವ ರೂಪದ ಮಾಯಾವಿ ರಾಕ್ಷಸನ ಬಳಿ ಕರೆದುಕೊಂಡು ಹೋದೆನಲ್ಲ ಆಗ ಪ್ರಧಾನಿ, ಪ್ರಮುಖ ಸಭಾಸದರು, ಉನ್ನತ ಅಧಿಕಾರಿಗಳೆಲ್ಲರೂ ನಿನ್ನನ್ನು ನೋಡಿ ಪರಮಾನಂದ ಭರಿತರಾದರು ಇನ್ನು ಚಿಂತೆಯಿಲ್ಲ ರಾಜಕುಮಾರನು ಈಗ ಯೌವನದ ಹೊಸ್ತಿಲನ್ನು ಮೆಟ್ಟಿ ತುಷ್ಟ ಪುಷ್ಟನಾಗಿ ಬೆಳೆದಿದ್ದಾನೆ. ಈತನು ಗದ್ದುಗೆಯನ್ನೇರುವ ಕಾಲವು ಸಮೀಪಿಸಿತು. ಸ್ವಾಮಿ ಭಕ್ತಿಯಿಂದ ನಾವು ಎಷ್ಟೋಕಾಲ ಈತನ ತಂದೆಯಾದ ಗತಿಸಿದ ಅರಸನಿಗೆ ಸೇವೆಸಲ್ಲಿಸಿದ್ದೇವೆ. ತರುಣನು ರಾಜನಾಗಿ ಬಂದರೆ ನಮ್ಮ ಕೋರಿಕೆಗಳನ್ನು ಈಡೇರಿಸ ಬಲ್ಲನು —ನಾವೂ ನಮ್ಮ ಸೇವೆಗೆ ತಕ್ಕ ಅತಿಶಯ ಪ್ರಮಾಣದ ಸನ್ಮಾನಗಳನ್ನು ಪಡೆಯಬಹುದು ಎಂದೆಲ್ಲ ಸಂತೋಷದಿಂದ ತುಂಬಿ ಹೋಗಿದ್ದರು. ಆದರೆ ಅದನ್ನು ಕೇಳಿದ ಆ ಕಪಟಿ—ರಾಜದ್ರೋಹಿ, ಭ್ರಾತೃದ್ರೋಹಿ, ತನ್ನಲ್ಲೇ ಯೋಚಿಸ ತೊಡಗಿದ, ಏನೆಂದು ಬಲ್ಲೆಯಾ? ನಿನ್ನನ್ನು ಹೇಗೆ ತೀರಿಸಿಬಿಡುವುದೆಂದು! ಸಭಿಕರೆಲ್ಲರೂ ಹೊರಟುಹೋದಮೇಲೆ ಆ ದೇಶದ್ರೋಹಿ ನನ್ನನ್ನು ಪ್ರತ್ಯೇಕವಾಗಿ ಕರೆಸಿ ಅಂತರಂಗವಾಗಿ ಆ ಪಾಪಿ ಏನು ಹೇಳಿದನು ಬಲ್ಲೆಯಾ? ಮುಬಾರಕ್! ನಿನ್ನನ್ನು ಗುಲಾಮಗಿರಿಯಿಂದ ನಿವೃತ್ತಿ ಗೊಳಿಸುತ್ತೇನೆ. ನೀನು ಸ್ವತಂತ್ರನಾಗುತ್ತೀಯೋ....ನೀನು ಹೊತ್ತುಕೊಂಡು ಹೋಗುವಷ್ಟು ಧನವನ್ನೂ ನಿನಗೆ ಪಾರಿತೋಷಕವಾಗಿ ಕೊಡುತ್ತೇನೆ. ನೀನು ನನಗೊಂದು ಉಪಕಾರ ಮಾಡಬಲ್ಲೆಯಾ? ಎಂದು ಆ ನೀಚನು ನನ್ನನ್ನು ಕೇಳಿದನು. ಅವನೇನನ್ನು ಹೇಳುತ್ತಾನೆ ಎಂಬುದನ್ನು ನಾನು ಬಲ್ಲವನಾಗಿದ್ದೆ. ಆದರೂ

ನಾನು ಅವನ ಇಂಗಿತವನ್ನರಿತು ಎಚ್ಚರಿಕೆಯ ಕ್ರಮವನ್ನು ಕೈಗೊಳ್ಳಬೇಕೆಂದು ನಿರ್ಧರಿಸಿ ಏನೂ ತಿಳಿಯದವನಂತೆ ನಟಿಸುತ್ತ ಮಹಾ ಪ್ರಭುಗಳವರ ಕಾಲು ತೊಳೆಯಲು ಯೋಗ್ಯತೆಸಾಲದ ಅಲ್ಪ ಗುಲಾಮ ನಾನು! ತಮ್ಮ ಅಪ್ಪಣೆಯು ಎಂತಹುದೇ ಇರಲಿ ಅದನ್ನು ಅತ್ಯಂತ ಗೌರವದಿಂದ ತಲೆಯ ಮೇಲೆ ಹೊತ್ತು ತಮ್ಮ ಆಣತಿಯನ್ನು ಈಡೇರಿಸುವುದಕ್ಕಿಂತಲೂ ಹಿರಿಯ ಕರ್ತವ್ಯ ಯಾವುದುಂಟು ನನಗೆ? ಅಪ್ಪಣೆಯಾಗಲಿ, ತಾವು ಏನೂ ಕೊಡದೆಯೇ ತಮ್ಮ ಆಜ್ಞೆಯನ್ನು ನೆರವೇರಿಸಬೇಕಲ್ಲವೇ ಪ್ರಭು.? ಎಂದೆ ನಾನು ಹಾಗಲ್ಲ ಮುಬಾರಕ್! ನೀನು ನನ್ನ ರಹಸ್ಯವನ್ನು ಕಾಪಾಡುವುದಿದೆ ಅದರಿಂದ ನಿನಗೆ ನಾನು ಸ್ವಾತಂತ್ರ್ಯದೊಂದಿಗೆ ಸಂಪತ್ತನ್ನೂ ಕೊಟ್ಟು ನಿನ್ನನ್ನು ಸುಖ ಸಂತೋಷಗಳಿಂದಿರಿಸಬೇಕೆಂದೆಣಿಸಿದ್ದೇನೆ ಎಂದ ನಿಮ್ಮ ಚಿಕ್ಕಪ್ಪ. ಪ್ರಭೂ ಚಿತ್ತ! ಎಂದವನೇ ನಾನು ಮಾಡಬೇಕಾದ ಕೆಲಸ ಏನೆಂದು ಕೇಳಿದೆ ಮತ್ತೇನಿಲ್ಲ ಮುಬಾರಕ್! ರಾಜಕುಮಾರನಿಗೆ ವಯಸ್ಸಾಯಿತು. ನನ್ನ ವಚನದಂತೆ ನಾನವನನ್ನು ಗದ್ದುಗೆಗೇರಿಸದಿದ್ದರೆ ಪುರಪ್ರಮುಖರಾದಿಯಾಗಿ ಪ್ರಜಾಸ್ತೋಮವು ಸುಮ್ಮನಿರಲಾರದು, ಈ ರಾಜ್ಯವನ್ನು ನಾನೇ ಆಳಬೇಕೆಂದು ಸಂಕಲ್ಪ ಗೊಂಡಿದ್ದೇನೆ! ಅದಕ್ಕೆ ಅಡಚಣೆಯೆಂದರೆ ಆ ರಾಜಕುಮಾರನೊಬ್ಬನೇ! ಅವನನ್ನು ಹೇಗಾದರೂ ನೀನು ತೀರಿಸಿಬಿಡಲಾರೆಯಾ?— ಎಂದು ಕೇಳಿದ ಅರಸನೆಂದು ಕರೆಸಿಕೊಳ್ಳ ಬಯಸುವ ಆ ಅಧರ್ಮಿ! ಅಲ್ಪ ಮಾನವ! ಆಗಲಿ, ಅದೆಷ್ಟರಮಾತು? ಎಂದು ನಾನು ಅವನ ಇಚ್ಛಾನುವರ್ತಿಯಂತೆ ನಟಿಸುತ್ತ ಹೇಳಿದೆ ರಾಜಕುಮಾರಾ! ಕಳೆದ ಎರಡು ದಿವಸಗಳಿಂದಲೂ ಈ ಕೃತ್ರಿಮ ಸಂದಾನವನ್ನೂ ಕುರಿತ ಯೋಚಿಸಿ ಯೋಚಿಸಿ ನನ್ನ ತಲೆಕೆಟ್ಟುಹೋಯಿತು, ವ್ಯಸನಮಯವೂ, ಪ್ರಾಣಾಂತಕ ಪ್ರಯತ್ನದಿಂದ ಕೂಡಿದುದು ಆದ ಈ ವಿಚಾರವನ್ನು ನಿನ್ನಲ್ಲಿ ಹೇಳಲು ಬಂದೆ.

ಮುಬಾರಕನ ಮಾತುಗಳನ್ನು ಕೇಳಿ ನಾನು ಗಡಗಡನೆ ನಡುಗಿದೆ 'ನನ್ನ ಚಿಕ್ಕಪ್ಪ! ಇವನೆಲ್ಲಿ ನನ್ನ ಆ ತಂದೆಯೆಲ್ಲಿ? ಇವನು ನೀಚ ನನಗೆ ಆ ವಯಸ್ಸಿನಲ್ಲಿ ಎಳ್ಳಷ್ಟೂ ಲೋಕಾನುಭವ ವಿರಲಿಲ್ಲವೆಂದು ಹೇಳಿದ್ದೆನಷ್ಟೆ. ನಾನು ಮುಬಾರಕನನ್ನು ಕುರಿತು ಪೆಚ್ಚನಂತೆ ಹೇಳಿದೆ. ಮುಬಾರಕ್! ಹಾಗೂ ಸಿಂಹಾಸನದಾಸೆಗಾಗಿ ನನ್ನನ್ನು ಕೊಲೆ ಮಾಡಿಬಿಡುವುದಾಗಿ ಆ

ನೀಚನು ಪ್ರಯತ್ನಿಸಿದರೆ ಅವನೇ ಬೇಕಾದರೆ ಸಿಂಹಾಸನವನ್ನಿಟ್ಟುಕೊಳ್ಳಲಿ ನನ್ನನ್ನು ಪ್ರಾಣದೊಂದಿಗೆ ಬಿಟ್ಟುಬಿಡಲಿ ನನಗೆ ರಾಜ್ಯವೂ ಬೇಡ. ಸಿಂಹಾಸನವೂ ಬೇಡ. ಪ್ರಾಣವೊಂದಿದ್ದರೆ ಸಾಕು' ಎಂದೆ ನನ್ನ ಮಾತನ್ನು ಕೇಳಿ ಮುಬಾರಕನಿಗೆ ಸಹಿಸಲಾರದಾಯಿತು. ಅವನು ಹೇಳಿದ

"ಏನಿದು ರಾಜಕುಮಾರಾ ? ನೀನೇ ರಾಜ್ಯಕ್ಕೆ ನಿಜವಾದ ನ್ಯಾಯವಾದ ಒಡೆಯ ನೀನು ಜೀವದೊಂದಿಗಿದ್ದರೆ ನಿಮ್ಮ ಚಿಕ್ಕಪ್ಪನು ಸಿಂಹಾಸನದಲ್ಲಿ ಕುಳಿತುಕೊಳ್ಳಲು ಪ್ರಜೆಗಳು ಹೇಗೆ ಸಮ್ಮತಿಸಿಯಾರು ? ನಿನಗೀಗ ಯೌವನವೂ ಬಂದಿದೆ. ನಿನ್ನನ್ನು ಸಿಂಹಾಸನದಲ್ಲಿ ಕೂಡಿಸದಿರಲು ಸರಿಯಾದ ಕಾರಣವೇನಿದೆ? ಆದುದರಿಂದಲೇ ನಿನ್ನನ್ನು ರಹಸ್ಯವಾಗಿ ತೀರಿಸಿಬಿಡಬೇಕೆಂದು ಆ ರೀಜೆಂಟ್ ನಾಯಿಯು ಒಳಸಂಚು ಮಾಡುತ್ತಿದೆ."

"ಈಗೇನು ಮಾಡುವುದು ಮುಬಾರಕ್? " ನಾನು ಕೇಳಿದೆ.

"ಭಯಗೊಳ್ಳದಿರು, ನನ್ನರಸೇ ?" ಎನ್ನುತ್ತ ನನ್ನನ್ನು ಆದರದಿಂದ ತನ್ನ ಎದೆಗೆ ಬಿಗಿದಪ್ಪಿಕೊಂಡು ಮುದ್ದಿಸುತ್ತ ಮುಬಾರಕನು ಮುದವಾದ ಮಾತುಗಳನ್ನು ಮೃದುವಾಗಿಯೂ ಮಧುರವಾಗಿಯೂ, ಮನಸೊಪ್ಪುವಂತೆಯೂ ಹೇಳಿದನು: ಕಂದ! ನೀನು ಈ ರಾಜ್ಯಕ್ಕೆ ನಿಜವಾದ ಉತ್ತರಾಧಿಕಾರಿ! ಈ ಕೃತ್ರಿಮಿಯ ಕುಟಿಲೋಪಾಯಗಳನ್ನು ಮುರಿಯುವುದಕ್ಕೆ ನಾನೊಂದು ಆಲೋಚನೆಯನ್ನು ಮಾಡಿದ್ದೇನೆ, ದೇವರ ದಯೆಯಿಂದ ಅದು ಸಿದ್ಧಿಸಿದರೆ— ಏಕೆ? ಸಿದ್ಧಿಸುವುದೆಂದೇ ನನ್ನ ನಂಬಿಕೆ!—ನಾವು ಅಪಾಯದಿಂದ ದೂರವಾಗುತ್ತೇವೆ, ಅಷ್ಟುಮಾತ್ರವಲ್ಲ; ಈ ಕುಟಿಲ ಕೊಲೆಗಾರನು ಕತ್ತಿಗೆ ಕೊರಳನ್ನೊಡ್ಡಿ ಕಷ್ಟದಿಂದ, ಕೊರದಾಟದಿಂದ, ಕೆಳಗುರುಳಿ ಮಣ್ಣು ಪಾಲಾಗಬೇಕಾಗುತ್ತದೆ ನೋಡುತ್ತಿರು. ಮನುಷ್ಯರು ನಂಬಿಕೆಯನ್ನು ಕಳೆದುಕೊಳ್ಳಕೂಡದು. ದೈವದಲ್ಲಿ ಎಲ್ಲಿಯವರೆಗೆ ನಂಬಿಕೆಯು ಅಳಿಯದೆ ಉಳಿಯುತ್ತದೆಯೋ ಅಲ್ಲಿಯವರೆಗೂ ನಮ್ಮ ಬಯಕೆಯು ಈಡೇರುವ ಸಂಭವವೂ ಇರುತ್ತದೆ, ನಾನು ನಿನ್ನ ಚಿಕ್ಕಪ್ಪನ ಕೃತ್ರಿಮವನ್ನು ಮುರಿದು — ನಿನ್ನ ಇಷ್ಟಾರ್ಥಗಳು ಈಡೇರುವಂತೆ ನಿನಗೆ ನೆರವಾಗಿ ನಿಲ್ಲುತ್ತೇನೆ."

ಮುಬಾರಕನ ಮಾತುಗಳು ನನ್ನಲ್ಲಿ ಶೌರ್ಯವನ್ನೂ ಸಾಹಸವನ್ನೂ ತುಂಬುತ್ತ ಬಂದುವು, ನಾನು ಅವನನ್ನು ನಂಬಿದೆ.

## ೩೦

ಮುಬಾರಕನು ಹೇಳಿದಂತೆ ನಡೆಯಲು ಒಪ್ಪಿದ ನನಗೆ ಕ್ಷಣಕ್ಷಣಕ್ಕೂ ಆತ್ಮವಿಶ್ವಾಸವೂ, ಆತ್ಮಗೌರವವೂ, ಹೆಚ್ಚತೊಡಗಿದವು. ನನ್ನ ತಂದೆ ತನ್ನ ಜೀವಮಾನಕಾಲದಲ್ಲಿ ತನ್ನ ಮನಸ್ಸಿಗೆ ಬೇಸರವಾದಾಗ—ಏಕಾಂಗಿಯಾಗಿರಬೇಕೆಂದು ಬಯಸಿದಾಗ—ವಿಶ್ರಾಂತಿ ವಿನೋದಗಳನ್ನು ಪಡೆಯಲೋಸುಗ ಒಂದು ಪ್ರತ್ಯೇಕವಾದ ಭವನವನ್ನು ನಿರ್ಮಿಸಿಕೊಂಡಿದ್ದನು. ಮುಬಾರಕನು ನನ್ನನ್ನು ಆ ಭವನಕ್ಕೆ ಕರೆದೊಯ್ದನು, ಆ ಭವನದ ಏಕಾಂತ ಕೊಠಡಿಯನ್ನು ತೆರೆದು ನಾವು ಅದರೊಳಗೆ ಹೋದೆವು. ಅಲ್ಲೊಂದು ಭಾರವಾದ ಆಸನವಿತ್ತು. ಅದನ್ನು ಒಬ್ಬರಿಂದ ಎತ್ತಲು ಸಾಧ್ಯವಿರಲಿಲ್ಲ. ಭಾರವಾದ ಆ ಆಸನವನ್ನು ನಾನೂ ಮುಬಾರಕನೂ ಕೂಡಿ ದೂರವಾಗಿ ತಳ್ಳಿದೆವು. ಆಸನದ ಕೆಳಗೆ ರತ್ನಗಂಬಳಿಯನ್ನು ಹಾಸಿತ್ತು. ಮುಬಾರಕನು ಅದನ್ನು ಸುತ್ತಿ ಎತ್ತಿಟ್ಟು ಆಸನವಿದ್ದ ಕಡೆ ನೆಲದಮೇಲೆ ಹರಡಿದ್ದ ಹಾಸುಗಲ್ಲನ್ನು ಹೊರಗೆತೆಗೆದನು. ಅಲ್ಲೊಂದು ದಿಡ್ಡಿ ಬಾಗಿಲಿತ್ತು, ಅದಕ್ಕೆ ಬೀಗ ಹಾಕಿತ್ತು. ಮುಬಾರಕನು ಬಾಗಿಲನ್ನು ನನಗೆ ತೋರಿಸುತ್ತ "ಇಲ್ಲಿ ನೋಡು; ನಾನು ಕಂಡು ಹಿಡಿದಿರುವುದೇನು ಬಲ್ಲೆಯಾ ?" ಎಂದು ಕೇಳಿದನು. "ನಾನೇನು ಬಲ್ಲೆ? " ಎಂದೆ ನಾನು.

ಆ ದಿಡ್ಡಿ ಬಾಗಿಲನ್ನು ನೋಡಿದಮೇಲಂತೂ ಕ್ಷಣಕಾಲ ನನ್ನ ಮನಸ್ಸಿನ ನೆಮ್ಮದಿಯೇ ಅಳಿದುಹೋಯಿತು, ಏನಿದು ? ಮುಬಾರಕನು ಶತ್ರು ಪಕ್ಷಕ್ಕೆ ಸೇರಿಬಿಟ್ಟಿರಬಹುದೇ ? ಈ ಬಾಗಿಲನ್ನು ತೆರೆದು ನನ್ನನ್ನು ಉಸಿರಾಡದ ಕತ್ತಲು ಗವಿಯಲ್ಲಿ ತಳ್ಳಿ ಕೊಂದುಹಾಕಲು ಪ್ರಯತ್ನಿಸುತ್ತಿರಬಹುದೇ ? ಆಗಿನ ನನ್ನ ಭೀತಿಯನ್ನು ಬಣ್ಣಿಸಲಾಗದು, ಎಷ್ಟು ಹೊತ್ತೂ ಇಲ್ಲ; ಕ್ಷಣಕಾಲಮಾತ್ರ, ಭಯಭ್ರಾಂತಿಗಳಿಗೊಳಗಾದ ನನ್ನಮನಸ್ಸು ಮುಬಾರಕನು ಕೊಲೆಯ ಪ್ರಯತ್ನದಲ್ಲಿರಬಹುದೆಂದು ಸೂಚಿಸಿತು, ಹಾಯ್ ! ಹಾಯ್ ! ಎಷ್ಟು ಅವಲಕ್ಷಣದ ಪ್ರಕೃತಿಯಿದು ! ಭಯಕ್ಕೆ ಸೋತ ನನ್ನ ಮನಸ್ಸು ಪಾಪಮಯ ಯೋಚನೆಗಳಿ

ಗೆಡೆಕೊಟ್ಟಿತಲ್ಲವೇ? ಭಯದಿಂದ ಸಂಶಯ ಹುಟ್ಟುತ್ತದೆ; ಸಂಶಯವು ಪಿಶಾಚಿಯಾಗುತ್ತದೆ. ಆ ಸಂಶಯ ಪಿಶಾಚಿಯು ಮಾನವನನ್ನು ಪಾಪಮಯವಾದ ಯೋಚನೆಗಳಿಗೆ ಗುರಿಮಾಡಿ ಕೊನೆಗವನನ್ನು ಕೊಲ್ಲುತ್ತದೆ. ಇಂತಹ ನೂತನವೂ, ಲೋಕಾನುಭವಯುಕ್ತವೂ ಆದ ಯೋಚನೆಗಳು ನನ್ನಲ್ಲಿ ಅದೇತಾನೇ ಒಂದೊಂದಾಗಿ ಉದಯಿಸತೊಡಗಿ ಹೇಡಿಹುಡುಗಿಯಂತಾಗಿ ಹೋಗಿದ್ದ ನಾನು ಕ್ರಮಕ್ರಮೇಣ ಧೀರಮಾನವನಾಗುತ್ತಬಂದೆ, ಇರಲಿ; ನಾನು ಧೈರ್ಯದಿಂದ ಮುಬಾರಕನ ಮಾತನ್ನು ಕೇಳತೊಡಗಿದೆ.

ಡಿಡ್ಡಿ ಬಾಗಿಲ ಒಂದು ಬದಿಗೆ ಒಂದು ಕಿಟಕಿ ಇದ್ದಿತು, ಮುಬಾರಕನು ಆ ಕಿಟಕಿ ಬಾಗಿಲನ್ನ ತೆರೆದು ನನ್ನನ್ನು ಒಳಗೆ ಇಣಿಕಿ ನೋಡಹೇಳಿದನು, ನಾನು ಇಣಿಕಿ ನೋಡಿದೆ, ಕೆಳಗಡೆ ಇಳಿದು ಹೋಗಲು ಅಮೃತಶಿಲೆಯಿಂದ ಕೆತ್ತಿದ ಸುಂದರವಾದ ಹಂತಗಳು ಕಂಡುಬಂದುವು—ಅಲ್ಲೊಂದು ರಮ್ಯವಾದ ಭವನ ಆ ಭವನದಲ್ಲಿ ನಾಲ್ಕು ಮನೋಹರವಾದ ಕೋಣೆಗಳು, ಎಲ್ಲವನ್ನೂ ಮೇಲಿನಿಂದ ನೋಡಬಹುದಾಗಿತ್ತು, ಮುಬಾರಕನು ಬಾಗಿಲನ್ನು ತೆಗೆದು ನನ್ನನ್ನ ನೆಲಮಾಳಿಗೆ ಭವನಕ್ಕೆ ಕರೆದೊಯ್ದನು. ನಾವು ಆ ನಾಲ್ಕು ಕೊಠಡಿಗಳನ್ನೂ ಹೊಕ್ಕು ನೋಡಿದೆವು. ಒಂದೊಂದು ಕೊಠಡಿಯಲ್ಲಿಯೂ ಭಂಗಾರದಿಂದಲೇ ಮಾಡಲ್ಪಟ್ಟ ದೊಡ್ಡದಾದ ಹತ್ತು ಕೊಡಗಳನ್ನೂ ತಾರಸಿಯಿಂದ ಸರಪಣಿ ಕಟ್ಟಿ ಇಳಿಯಬಿಟ್ಟಿತ್ತು, ಒಂದೊಂದು ಕೊಡದ ಮೇಲೂ ಒಂದೊಂದು ಮಣ ಭಾರವುಳ್ಳ ಚಿನ್ನದಇಟ್ಟಿಗೆ ಮುಚ್ಚಿತ್ತು. ಆ ಚಿನ್ನದ ಇಟ್ಟಿಗೆಯಮೇಲೆ ಬೆಳ್ಳಿಯಿಂದ ಮಾಡಿದ ಒಂದು ಕೋತಿ; ಆ ವಿಗ್ರಹವುನವರತ್ನಖಚಿತವಾಗಿತ್ತು. ಕೊಡದೊಳಗೆ ಚಿನ್ನದ ಮೊಹರುಗಳು—ಕಂಠದವರೆಗೆ! ನಾಲ್ಕು ಕೊಠಡಿಗಳಲ್ಲಿಯೂ ಕೂಡಿ ಒಟ್ಟು ಮೂವತ್ತೊಂಬತ್ತು ಕೊಡಗಳಿದ್ದುದನ್ನು ನಾನು ಎಣಿಸಿದೆ. ಇವಲ್ಲದೆ ಒಂದು ಕೊಠಡಿಯಲ್ಲಿ ಇನ್ನೊಂದು ನೆಲಮಾಳಿಗೆಯಿತ್ತು. ಮುಬಾರಕನು ಅದರ ಬಾಗಿಲನ್ನು ತೆರೆದು ತೋರಿಸಿದನು. ನಾನು ನನ್ನ ಕಣ್ಣುಗಳನ್ನೇ ನಂಬಲಾರದೆ ಹೋದೆ! ಆ ನೆಲಮಾಳಿಗೆಯ ತುಂಬ ನೆಲದಿಂದ ಕಂಠದವರೆಗೆ ನವರತ್ನ ರಾಶಿ! ಕಣ್ಣು ಕುಕ್ಕುವಂತೆ ಥಳಥಳಿಸುವ ರತ್ನ ರಾಶಿ! "ಹಾ ನನ್ನ ತಂದೆ! ಇಷ್ಟೊಂದು ಧನವನ್ನು ಗಳಿಸಿ, ಉಳಿಸಿ, ಬಿಟ್ಟುಹೋದೆಯಾ? ಎಂದು ನಾನು ಕೌತುಕದಿಂದ ನಿಟ್ಟುಸಿರುಬಿಟ್ಟೆ. ಆಗ ಮುಬಾರಕನು ಹೇಳಿದನು :

"ಕುಮಾರಾ! ಇದನ್ನೆಲ್ಲಾ ನೋಡಿದೆಯಷ್ಟೆ! ಇದೆಲ್ಲ ನಿನ್ನ ತಂದೆ ಯದು............ಸ್ವಯಾರ್ಜಿತ ಸಂಪತ್ತು! ಈ ಸಂಪತ್ತಿನ ಆರ್ಜನೆಗೆ ನಾನು ಸಹಾಯ ಮಾಡಿದ್ದೇನೆ ಎಂದು ಹೇಳಲು ಸಂತೋಷಪಡುತ್ತೇನೆ. ಈ ರತ್ನ ರಾಶಿ! ಈ ರತ್ನ ಖಚಿತ ಕೋತಿಗಳು, ಭಂಗಾರದ ಕೊಡಗಳು—ಮೊಹರು ಗಳಿಂದ ತುಂಬಿದ ಕೊಡಗಳು, ಈ ಭಂಗಾರದ ಇಟ್ಟಿಗೆಗಳು, ಇವೆಲ್ಲ ಇಲ್ಲಿರು ವುದನ್ನು ಬಲ್ಲವನೆಂದರೆ ನಾನೊಬ್ಬನೇ! ನನ್ನನ್ನು ಹೊರತು ನಿನ್ನ ತಂದೆ ಬೇರೆ ಯಾರಲ್ಲಿಯೂ ವಿಶ್ವಾಸವಿಟ್ಟು ತನ್ನ ರಹಸ್ಯ ಸುಖದುಃಖಗಳನ್ನು ಹೇಳಿಕೊಳ್ಳು ತ್ತಿರಲಿಲ್ಲ. ಈ ರಹಸ್ಯ ಭವನಕ್ಕೆ ರತ್ನಗಂಬಳಿಯಡಿಯಲ್ಲಿ ಬಾಗಿಲಿರುವುದನ್ನು ಬಲ್ಲವನು ಈ ಪೃಥ್ವಿಯಲ್ಲಿ ನಾನೊಬ್ಬನೇ! ನಿನ್ನ ತಂದೆ ತನ್ನ ಮರಣಕ್ಕೆ ಮೂರು ದಿನಗಳ ಮುನ್ನ ನನ್ನನ್ನು ತನ್ನೆಡೆಗೆ ಕರೆದು 'ಮುಬಾರಕ್! ನನ್ನ ನಿಧಿಯ ರಹಸ್ಯವನ್ನು ನೀನೊಬ್ಬ ಬಲ್ಲೆ. ಅದರಲ್ಲಿ ನಿನಗೆ ಬೇಕಾದಷ್ಟು ರತ್ನ ಗಳನ್ನು ತೆಗೆದುಕೊಂಡು ಸುಖವಾಗಿರು. ಅವನಿಗೆ ಬುದ್ಧಿ ಬಂದನಂತರ ನನ್ನ ಕುಮಾರನಿಗೆ ಈ ರಹಸ್ಯ ಸ್ಥಾನವನ್ನೂ, ಅದರಲ್ಲಿರುವ ನಿಧಿಸಮೂಹವನ್ನೂ ತೋರಿಸು. ಕೋತಿಗಳ ವಿಚಾರವಾಗಿ ನಿನಗೆ ತಿಳಿದಿರುವ ರಹಸ್ಯ ಸಂಕೇತ ವನ್ನೂ ಅವನಿಗೆ ತಿಳುಹಿಸು' ಎಂದಿದ್ದ. ಕುಮಾರಾ! ಕೇಳು, ಕಿವಿಗೊಟ್ಟು ಕೇಳು. ನೀನು ಆ ಕೆಳ ಮಾಳಿಗೆಯಲ್ಲಿ ಕಂಡ ರತ್ನ ರಾಶಿಯಲ್ಲಿ ಒಂದೆರಡು ಹಿಡಿ ಮಾತ್ರ ನಾನು ತೆಗೆದುಕೊಂಡರೆ ನನ್ನನ್ನು ಬೇಡವೆನ್ನುವರು ಯಾರಿದ್ದಾರೆ. ಅದನ್ನು ಮಾರಿದರೆ ಒಂದು ಲಕ್ಷಕ್ಕೆ ಮೇಲ್ಪಟ್ಟು ಮೊಹರುಗಳು ಸಿಕ್ಕುತ್ತವೆ? ಆಗಲೂ ನಾನು ಗುಲಾಮನಾಗಿರಬೇಕೇ? ಇಷ್ಟು ಅವಕಾಶಗಳು ಧರ್ಮ ಸಮ್ಮತವಾಗಿ ನನ್ನ ಕರಗತವಾಗಿದ್ದರೂ ಈ ರತ್ನರಾಶಿಯಲ್ಲಿ ಒಂದೇ ಒಂದು ರತ್ನವನ್ನು ಮುಟ್ಟಲೂ ನನಗೆ ಬೇಡವಾಗಿದೆ. ಸ್ವಾಮಿನಿಷ್ಠೆ ಎಂಬ ರತ್ನವೊಂದು ನನ್ನೆದೆಯಲ್ಲಿ ಸದಾ ಬೆಳಗುತ್ತಿದ್ದರೆ ಸಾಕು; ಅದಕ್ಕೆ ಮಿಗಿಲಾದ ಸಂತೋಷ ವಿಲ್ಲ ನನಗೆ. ನನ್ನ ಅವಕಾಶಗಳೂ, ನಿಷ್ಠೆಯೂ ಈ ತೆರನೆ ಇರುವಾಗ ಆ ನೀಚ ಕಪಟಿ ನಿಮ್ಮ ಚಿಕ್ಕಪ್ಪನೇನೆಂದ? "ನಿನಗೆ ಸ್ವಾತಂತ್ರ್ಯವುಂಟು; ಹೊತ್ತು ಕೊಂಡು ಹೋಗುವಷ್ಟು ಸಂಪತ್ತುಂಟು; ನೀನು ರಾಜಕುಮಾರನನ್ನು ತೀರಿಸಿ ಬಿಡು" ಎಂದು. ಹೌದು; ಸಂಪತ್ತು! ಯಾರ ಸಂಪತ್ತದು? ನಿನ್ನ ತಂದೆ

ಯದು ! ಆತನ ಕಾಲಾನಂತರ ನಿನ್ನದು ! ಹೌದು ; ನಿನ್ನ ಸಂಪತ್ತಿನ ಒಂದು ಭಾಗವನ್ನು ಅವನು ದುರುಪಯೋಗಪಡಿಸುವುದು—ಏತಕ್ಕೆ ? ನಿನ್ನನ್ನೇ ಕೊಲೆ ಮಾಡುವುದಕ್ಕೇ? ಹಾಯ್ ! ಹಾಯ್ ! ಎಂತಹ ನೀಚ ಜಗತ್ತು ಇದು ! ಸಕಲೇಶ್ವರನು ಸಂಪತ್ತನ್ನು ಕರುಣಿಸಿರುವುದೇತಕ್ಕೆ ? ಒಬ್ಬರ ಸಂಕಟವನ್ನು ಮತ್ತೊಬ್ಬರು ಪರಿಹರಿಸಿ, ಸಂತೋಷಗೊಳಿಸುವುದಕ್ಕೆ. ಅದು ಬಿಟ್ಟು ಈ ನೀಚ ಮಾನವನ ಯೋಚನೆ ನೋಡು—ಸಂಪತ್ತು ಸಂಪಾದಿಸಿದವನ ಸಂಹಾರಕ್ಕಾಗಿಯೇ ವಿನಿಯೋಗ ! ಧಿಕ್ಕಾರ ! ಧಿಕ್ಕಾರ ! ಈ ಧೂರ್ತ ಮಾನವನ ದುರಾಲೋಚನೆ—ದುರ್ನಡತೆಗಳಿಗೆ ಶತ ಸಹಸ್ರಸಲ ಧಿಕ್ಕಾರ ! ಕುಮಾರಾ ! ಇನ್ನೂ ಕೇಳು. ಈ ನೀಚ ಜಂತುವನ್ನು ಒಂದು ಹುಳುವಿನಂತೆ ಕಾಲಲ್ಲಿ ತುಳಿದು ಒಂದೇ ಕ್ಷಣಕ್ಕೆ ನಾನೊಬ್ಬ ನಾಶಮಾಡಬಲ್ಲೆ. ನಿನ್ನ ತಂದೆಯೇ ನನ್ನಲ್ಲಿ ಅಷ್ಟೊಂದು ವಿಶ್ವಾಸ ನಂಬಿಕೆಗಳನ್ನಿಟ್ಟದ್ದಮೇಲೆ ಇನ್ನವನ ಕೈಕೆಳಗಿನ ಮಂತ್ರಿ—ಸಭಾಸದರಗಿಲ್ಲವೇ—ಆ ವಿಶ್ವಾಸ ನಂಬಿಕೆಗಳು ! ನಾನೊಂದು ಪಿಸು ಮಾತನ್ನು ಅವರ ಕಿವಿಯಲ್ಲಿ ಸುರಿದರೆ ಸಾಕು. ಅವರು ಈ ದ್ರೋಹಿಯನ್ನು ಪ್ರಜಾಕಂಟಕ ಸೈತಾನನನ್ನು—ಕಡಿದು ಗುಳಿಗೆ ತಳ್ಳಿ ಮಣ್ಣು ಮುಚ್ಚಿ ಮುಳ್ಳಿನ ಸಮಾಧಿಯನ್ನು ಕಟ್ಟಿಯಾರು ! ಅಂತಹ ಶೂರರೂ, ನಿಸ್ಪೃಹರೂ, ಪ್ರಬಲ ದೇಶಭಕ್ತರೂ, ಸ್ವಾಮಿಭಕ್ತರೂ ಇದ್ದಾರೆ—ಈ ರಾಜ್ಯದ ಅಧಿಕಾರ ಸೂತ್ರವನ್ನು ಹೊತ್ತವರಲ್ಲಿ ! ಬೇಡ ; ಕುಮಾರಾ ! ಅದೂ ಬೇಡ. ನೀನು ಕಂಡಹಾಗೆ ಈ ರತ್ನ ರಾಶಿ ಈಗ ನನ್ನ ಕೈಯಲ್ಲಿದೆ. ಅದನ್ನು ನನ್ನಿಚ್ಛೆಬಂದಂತೆ ವಿನಿಯೋಗಿಸಬಹುದು. ಅದು ಗತಿಸಿದ ನನ್ನ ಸ್ವಾಮಿಯ ಧನ ! ಅದನ್ನು ಆತನ ಕುಮಾರನ ಹಿತರಕ್ಷಣೆಗಾಗಿ ಪಳಗಿಸಲು ನನಗೆ ಅಧಿಕಾರವಿದೆ. ಪಳಗಿಸಿ ನಿನ್ನನ್ನು ಅಪಮೃತ್ಯುವಿನಿಂದ ಪಾರಾಗಿಸಿ, ನಿನ್ನದೇ ಆದ ನಿನ್ನ ಸಿಂಹಾಸನದಮೇಲೆ ನಿನ್ನನ್ನು ಕುಳ್ಳಿರಿಸಬಹುದು ; ಆಗ ಪ್ರಧಾನಿಯಿಂದ ಹಿಡಿದ ಅತ್ಯಂತ ಬಡವನಾದ ಪ್ರಜೆಯವರೆಗೂ ಎಲ್ಲರೂ ನನ್ನ ಸ್ವಾಮಿ ಭಕ್ತಿಯನ್ನು ಮುಕ್ತ ಕಂಠದಿಂದ ಕೊಂಡಾಡುತ್ತಾರೆ. ಮಾತ್ರವಲ್ಲ ; ಸ್ವರ್ಗದಲ್ಲಿರುವ ನನ್ನ ಸ್ವಾಮಿಯ ಆತ್ಮಕ್ಕೆ ಶಾಂತಿಯುಂಟಾದೀತು. ಅದು ನನ್ನನ್ನು ಅಖಂಡವಾಗಿ ಹರಸೀತು. ಹೇಳು ; ಹತ್ತಾರು ಭಂಡಿಗಳಲ್ಲಿ ತುಂಬಬಹುದಾದ ಈ ರತ್ನರಾಶಿಯಲ್ಲಿ ನಾಲ್ಕೇ ಹಿಡಿ

ಸಾಕು. ಅದನ್ನು ನಿನ್ನ ಚಿಕ್ಕಪ್ಪನವರ ಬೆಂಗಾಲಿನವರ ಮುಂದೆ ಚೆಲ್ಲಿದರೆ ಸಾಕು. ಅವರು ಆ ವಿಷಭರಿತ ಸರ್ಪವನ್ನು ನಿಮಿಷ ಮಾತ್ರದಲ್ಲಿ ಸಹಸ್ರ ತುಂಡುಗಳಾಗಿ ಕತ್ತರಿಸಿ ಮೂಲೆ ಮೂಲೆಗಳಲ್ಲಿರುವ ಹದ್ದು ಕಾಗೆಗಳಿಗೆ ಔತಣ ಮಾಡಿಸಿಬಿಡುತ್ತಾರೆ. ಆಡರೆ ಬೇಡ ; ಕುಮಾರಾ ! ಅದು ಬೇಡ. ಅವನು ಕೃತ್ರಿಮಿ ; ನಾವೂ ಕೃತ್ರಿಮದಿಂದ ಅವನನ್ನು ಕೊಲ್ಲಿಸುವುದು ಬೇಡ. ಇದಕ್ಕೂ ಅತಿಶಯವೂ, ಅತಿ ಭಯಂಕರವಾದರೂ ಅತ್ಯಾನಂದಕರವೂ ಆದ ಬೇರೊಂದು ಮಾರ್ಗವಿದೆ. ಆ ಮಾರ್ಗವಲ್ಲಿ ಕೃತ್ರಿಮಿಯು ತಾನೇ ಬಂದು ಎಲ್ಲರೆದುರಿಗೆ ನಿನ್ನ ಪಾದಗಳಮೇಲೆ ಬಿದ್ದು ಹೊರಳಾಡುವಂತೆ ಆಗುತ್ತದೆ. ಆಗ ಅವನಿಗೆ ಪಶ್ಚಾತ್ತಾಪದಿಂದ ಪಾಪವು ಪರಿಹಾರವಾಗುತ್ತದೆ. ಆಗಲೇ ನಿನ್ನ ಬೆಂಬಲನಾದ ನನಗೆ, ನನ್ನನ್ನು ನಂಬಿದ ನಿನಗೆ, ನಮ್ಮಿಬ್ಬರಮೇಲೆ ಭರವಸೆ ಹೊಂದಿರುವ ನಿನ್ನ ತಂದೆಯ ಆತ್ಮಕ್ಕೆ ನಿರ್ವಿಕಲ್ಪವಾದ ಸುಖಶಾಂತಿಗಳು ಲಭಿಸಬೇಕಾದರೆ ಆ ನೂತನವಾದ ಪರಿಹಾರದ ದಾರಿಯನ್ನು ನಾನು ನಿನಗೆ ಹೇಳುತ್ತೇನೆ.

× × × × × × × ×

ಮುಬಾರಕನು ಆಡಿದ ಮಾತುಗಳು ಮಾಲೆಯಲ್ಲಿ ಪೋಣಿಸಿದ ಅಮೂಲ್ಯ ಮುತ್ತುಗಳಿಂತಿದ್ದುವು. ಗುಲಾಮನಾದರೂ ಅವನಲ್ಲಿ ಎದ್ದು ಕಾಣುತ್ತಿದ್ದ ಆ ದೃಢ ನಿಶ್ಚಯ, ಆ ಸ್ವಾಮಿ ಭಕ್ತಿ, ಆ ಸತ್ಯನಿಷ್ಠೆ, ಇವುಗಳನ್ನು ಕಂಡು ನಾನು ಮುಗ್ಧನಾದೆ. "ತುಂಬಿ ಬಂದ ನನ್ನ ಎದೆಯಿಂದ ನನಗೂ ತಿಳಿಯದೆ" ಮುಬಾರಕ್ ಮಹಾನುಭಾವ ! ತಂದೆಯಿಲ್ಲದ ಅನಾಥನಾದ ನನಗೆ ನೀನೇ ತಂದೆ ! ನೀನು ತೋರಿದ ದಾರಿಯಲ್ಲಿ ನಾನು ನಡೆಯಲು ಸಿದ್ಧನಿದ್ದೇನೆ. ಮುಭಾರಕ್ ! ನಿನ್ನ ಮಾತಿಗೆ ನಾನು ಮರುಮಾತನಾಡಲಾರೆ. ಮರಣಕ್ಕೂ ಹೆದರದೆ ನಾನು ನಿನ್ನನ್ನು ಹಿಂಬಾಲಿಸುತ್ತೇನೆ. ನಿನ್ನನ್ನುಳಿದು ನನಗೆ ಬೇರೆ ದಿಕ್ಕಿಲ್ಲ" ಎಂಬ ಮಾತುಗಳು ನನಗೂ ತಿಳಿಯದೆ ಹೊರಬಿದ್ದುವು. ಅವುಗಳನ್ನು ಕೇಳಿ "ಕಂದ ! ನನ್ನನ್ನು ನಂಬಿದ ನೀನು ಸುಖದ ಹಾದಿಯನ್ನು ಹಿಡಿದಿರುವಿಯೆಂದು ತಿಳಿ" ಎಂದ.

"ಮುಬಾರಕ್ ! ಈ ನೆಲಮಾಳಿಗೆ ಭವನದಲ್ಲಿರುವ ಕೋತಿಗಳ ಸಂಕೇತವೇನು ? ಕೇಳಲು ಕುತೂಹಲಗೊಂಡಿದ್ದೇನು" ಎಂದುದಕ್ಕೆ ಅವನು ಹೇಳತೊಡಗಿದ :

"ತನ್ನ ಯೌವ್ವನದಿಂದಲೂ ನಿನ್ನ ತಂದೆ ಜಿನ್ನರ (ನಮ್ಮಲ್ಲಿ, ಯಕ್ಷರು, ಗಂಧರ್ವರು, ಕಿನ್ನರು, ಕಿಂಪುರುಷರು ಎನ್ನುನಂತೆ)ರಾಜನಾದ/ಮಾಲಿಕ್ ಸಾದಿಕನೊಡನೆ ಸ್ನೇಹ ಬೆಳೆಸಿದ್ದನು. ಪ್ರತಿ ವರ್ಷವೂ ಜಿನ್ನರ ರಾಜ್ಯಕ್ಕೆ ಹೋಗಿ ಮಾಲಿಕ್ ಸಾದಿಕನೊಂದಿಗೆ ನಿನ್ನ ತಂದೆ ಒಂದು ತಿಂಗಳ ಕಾಲವನ್ನು ಸಂತೋಷವಾಗಿ ಕಳೆಯುತ್ತಿದ್ದನು. ಜಿನ್ನರಿಗೆ ಈ ಪ್ರಪಂಚದ ಸುಗಂಧದ್ರವ್ಯಗಳೆಂದರೆ-ವಿಚಿತ್ರವಸ್ತುಗಳೆಂದರೆ ಬಹಳ ಪ್ರೇಮವಿತ್ತು. ನಿನ್ನ ತಂದೆ ತಪ್ಪದೆ ಅವುಗಳನ್ನು ತನ್ನೊಡನೆ ತೆಗೆದುಕೊಂಡು ಹೋಗಿ ಮಾಲಿಕ್‌ಸಾದಿಕನಿಗೆ ಕಾಣಿಕೆಯಾಗಿ ಒಪ್ಪಿಸುತ್ತಿದ್ದನು. ಅಲ್ಲಿಂದ ಹೊರಟು ಬರುವಾಗ ಸಾದಿಕನು ಪ್ರತಿಪಾರಿತೋಷಿಕವಾಗಿ ಈ ಕೋತಿಯೊಂದನ್ನು ನಿನ್ನ ತಂದೆಗೆ ಕೊಟ್ಟು ಕಳುಹಿಸುತ್ತಿದ್ದನು. ಅದನ್ನು ತಂದು ನಿನ್ನ ತಂದೆ ಈ ತಾರಸಿಗೆ ತಗುಲಿ ಹಾಕಿರುವ ಆ ಚಿನ್ನದ ಕೊಡಗಳಮೇಲೆ ಇರಿಸುತ್ತಿದ್ದನು. ನಾನೊಬ್ಬನೇ ಈ ಭವನದಲ್ಲಿ ನಿನ್ನ ತಂದೆಯ ಬಳಿ ಇರುತ್ತಿದ್ದವನು. ನನ್ನನ್ನುಳಿದು ಬೇರಾರಿಗೂ ಈ ರಹಸ್ಯವು ತಿಳಿಯದು. ಒಂದು ದಿವಸ ನಾನು ಆತನನ್ನು ಕುರಿತು ಕೇಳಿದೆ :

'ಮಹಾ ಪ್ರಭುಗಳೇ ! ತಾವು ಇಲ್ಲಿಂದ ಅತ್ಯಮೂಲ್ಯ ಪದಾರ್ಥಗಳನ್ನು ತೆಗೆದುಕೊಂಡು ಹೋಗಿ ಜಿನ್ನರ ರಾಜನಿಗೆ ಕಾಣಿಕೆಯಾಗಿ ಕೊಡುತ್ತೀರಿ. ಆದರೆ ಅಲ್ಲಿಂದ ಬರುತ್ತ ಈ ನಿರ್ಜೀವ ಬೆಳ್ಳಿಯ ಕೋತಿಯನ್ನು ತರುತ್ತೀರಿ. ಇದರಿಂದ ತಮಗಾಗುವ ಪ್ರತಿ ಫಲವೇನು ?'

ಅದಕ್ಕೆ ಧೊರೆಯು ಹೇಳಿದ ಪ್ರತ್ಯುರವೇನು ಗೊತ್ತೆ ?

'ಮುಬಾರಕ್ ! ನಾನು ಇದರ ಗೂಡಾರ್ಥವನ್ನು ನಿನಗೆ ಹೇಳಬಲ್ಲೆ. ಆದರೆ ನೀನದನ್ನು ರಹಸ್ಯವಾಗಿಟ್ಟಿರಬೇಕು-ಕಂಡೆಯಾ ? ಈ ಕೋತಿ ಒಂದೊಂದಕ್ಕೂ ಒಂದುಸಾವಿರ ರಾಕ್ಷಸರು ಸೇವಕರಾಗಿದ್ದಾರೆ. ಕರೆದಾಗ ಬಂದು ಹೇಳಿದ್ದನ್ನು ಮಾಡಬೇಕಾದ ಸೇವಕರು ! ಆದರೆ ಇಂತಹ ನಲವತ್ತು ಕೋತಿಗಳನ್ನು ಸಂಗ್ರಹಿಸಬೇಕು. ಈಗ ನನ್ನಲ್ಲಿ ಮೂವ್ವತ್ತೊಂಭತ್ತು ಕೋತಿಗಳಿವೆ. ಇನ್ನೊಂದನ್ನು ಸೇರಿಸಬೇಕು. ಅದು ಸೇರಿ ನಲವತ್ತಾಗುವವರೆಗೂ ಇವುಗಳಿಂದ ಏನೇನೂ ಪ್ರಯೋಜನವಿಲ್ಲ.'

"ಕುಮಾರಾ! ನಿನ್ನ ತಂದೆಯು ತೀರಿಕೊಂಡ ವರ್ಷದಲ್ಲಿ ಒಂದು ಕೋತಿ ಕಡಿಮೆಯಾಗಿದ್ದುದು. ಅದಿರಲಿ ಈಗ ನಾನು ಆಲೋಚಿಸಿರುವ ಪರಿಹಾರ ಕ್ರಮವನ್ನು ಕೇಳು :

"ನಾವು ಈಗ ಮಾಲಿಕ್‌ಸಾದಕನ ಬಳಿ ಹೋಗೋಣ. ನಿನ್ನ ಚಿಕ್ಕಪ್ಪನು ನಿನ್ನ ಪ್ರಾಣಕ್ಕೆ ಕಂಟಕನಾಗಿ ನಿಂತಿರುವ ವಿಚಾರವನ್ನು ಆತನಲ್ಲಿ ಹೇಳೋಣ. ನಿನ್ನ ತಂದೆಯಲ್ಲಿ ಆತನಿಗಿದ್ದ ಸ್ನೇಹದ ಸಲುವಾಗಿ ಆತನು ನಿನಗೆ ಒಂದು ಕೋತಿಯನ್ನು ಕೊಡಬಹುದು. ಕೊಟ್ಟರೆ ನಲವತ್ತು ಸಂಖ್ಯೆ ಸಂಪೂರ್ಣ ವಾಗುತ್ತದೆ. ಆಗ ನೀನು ನಲವತ್ತು ಸಾವಿರ ಪ್ರಬಲ ಪರಾಕ್ರಮವುಳ್ಳ ಪ್ರಳ ಯಾಂತಕ ರಾಕ್ಷಸರು ಬೆಂಬಲವನ್ನು ಪಡೆದಂತಾಗುತ್ತದೆ. ಅವರ ಸಹಾಯ ದಿಂದ ನೀನು ಈ ನೀಚ ರಾಕ್ಷಸನಾದ ನಿನ್ನ ಚಿಕ್ಕಪ್ಪನನ್ನು ಉಂಗುಷ್ಟದಿಂದ ಒದೆದು ಸಿಂಹಾಸನದಿಂದ ಕೆಳಗುರುಳಿಸಬಹುದು ; ನಿನ್ನ ರಾಜ್ಯವನ್ನು ನೀನು ಪಡೆದು ಸುಖವಾಗಿರಬಹುದು. ಅಷ್ಟೇ ಅಲ್ಲ ; ಅದರನಂತರವು. ಈ ನಲವತ್ತು ಸಾವಿರ ರಾಕ್ಷಸರ ಬಲದಿಂದ ಶತ್ರುಭಯಂಕರನಾಗಿರಬಹುದು. ಚೀಣಾ ಸಾಮ್ರಾಜ್ಯವನ್ನು ಸ್ಥಾಪಿಸಿ, ಬಲಗೊಳಿಸಿ, ಅದರ ಏಕೈಕ ಚಕ್ರವರ್ತಿಯಾಗಿ, ಅಧಿರಾಜ, ಸಾಮಂತರಾಜ—ನಾಯಕ ಶ್ರೇಷ್ಠರಿಂದ ಸೇವಿಸಲ್ಪಟ್ಟು ಅಪರಿಮಿತ ವೈಭವದಿಂದ ಜಗದ್ವಿಖ್ಯಾತನಾಗಿ ಬಾಳಬಹುದು. ಇದೇ ನನ್ನ ಹಂಚಿಕೆ ; ಇದೇ ನನ್ನ ಹಂಬಲ ; ಇದೇ ನನ್ನ ಹಾರೈಕೆ ! "

ನಾನು ಮುಬಾರಕನ ಹಂಚಿಕೆಯನ್ನು ಒಪ್ಪಿದೆ ; ಅವನ ಹಂಬಲವನ್ನು ಮನಗಂಡೆ ; ಅವನ ಹಾರೈಕೆಯನ್ನು ಕೊಂಡಾಡಿದೆ, ತಕ್ಷಣವೇ

"ಮುಬಾರಕ್ ! ನಿನ್ನಿಷ್ಟದಂತೆ ಆಗಲಪ್ಪ. ಸಾದಿಕನ ಬಳಿ ಹೋಗಿ ನಮಗೆ ಬೇಕಾಗಿರುವ ಆ ಕಡೆಯ ಕೋತಿಯನ್ನು ಕೇಳಿ ತರೋಣ, ಆದರೆ ಅದಕ್ಕೆ ಮುನ್ನ ನೀನು ಪೇಟೆಗೆ ಹೋಗಿ ಸಾದಿಕನಿಗೆ ಕಾಣಿಕೆಯಾಗಿ ಕೊಡ ಬೇಕಾದ ಸಕಲ ಸಾಮುಗ್ರಿಗಳನ್ನೂ ಕೊಂಡುತಾ." ಎಂದೆ ನಾನು.

ನಮ್ಮ ಪ್ರಮಾಣಕ್ಕೆ ಬೇಕಾದ ಎಲ್ಲ ಸಲಕರಣೆಗಳೂ ಸಿದ್ಧವಾದುವು, ಮರುದಿನ ಮುಬಾರಕನು ನನ್ನ ಚಿಕ್ಕಪ್ಪನ ಮುಂದೆ ಹೋಗಿ ನಿಂತು, ಅವನ ಕೃತ್ರಿಮದ ಬಲೆಯಲ್ಲಿ ಅವನನ್ನು ಸಿಕ್ಕಿಸಿದನು. ಅವನನ್ನು ಕಂಡು ಮುಬಾರಕ್ ಹೇಳಿದ :

"ಷಹೆ-ಜಹಾನ್ ! (ಪ್ರಪಂಚಕ್ಕೆ ಒಡೆಯ !) ಗುಲಾಮನಾದರೂ ನನಗೊಂದು ಯೋಚನೆಯು ಹೊಳೆಯುತ್ತದೆ. ನಿನಗೆ ಆತಂಕವಾಗಿ ನಿಂತಿರುವ ರಾಜಕುಮಾರನನ್ನು ಈ ರಾಜಧಾನಿಯಲ್ಲಿ ಕೊಲೆ ಮಾಡಿದರೆ ಪ್ರಜಾಸಮು ದಾಯವು ಅಸಮಾಧಾನಗೊಂಡು ಆಕ್ರೋಶದಿಂದ ನಿನ್ನಮೇಲೆ ತಿರುಗಿಬೀಳ ಬಹುದು. ಆಗ ಸಿಂಹಾಸನವೇ ನಿನ್ನ ಕೈಬಿಟ್ಟು ಹೋದೀತು. ಆದುದರಿಂದ ನಾನು ಅವನನ್ನು ಈ ದೇಶದಿಂದಾಚೆ ಕರೆದುಕೊಂಡು ಹೋಗಿ, ಯಾವುದಾದ ರೊಂದು ಕಾಡಿನಲ್ಲಿ ಕೊಂದು, ಭೂಮಿಯಲ್ಲಿ ಹೂತು ಹಿಂತಿರುಗುತ್ತೇನೆ. ಆಗ ಅವನ ಕೊಲೆಯನ್ನು ಯಾರೂ ಕಂಡುಹಿಡಿಯುವಂತಿಲ್ಲ. ಹಾಗೂ ಯಾರಾ ದರೂ "ರಾಜಕುಮಾರನೆಲ್ಲಿ?" ಎಂದು ಕೇಳಿದರೆ "ಸಿಂಹಾಸನಾರೋಹಣಕ್ಕೆ ಮುನ್ನ ನಾನಾ ದೇಶಗಳಲ್ಲಿ ಸಂಚರಿಸಿ ಲೋಕಾನುಭವವನ್ನು ಪಡೆದು ಹಿಂದಿರು ಗಲಿ ಎಂದು ಕಳುಹಿಸಿದ್ದೇನೆ" ಎಂದರೆ ತೀರಿತು. ಹಾಗೂ ಜನರು ಕಂಗೆಟ್ಟು "ಇನ್ನೂ ಹಿಂತಿರುಗಲಿಲ್ಲವೆ ರಾಜಕುಮಾರ? ಎಂದು ಬೊಬ್ಬರಿಸಿದರೆ ಪ್ರಯಾಣ ಕಾಲದಲ್ಲಿ ಯಾವ ದೂರ ದೇಶದಲ್ಲಿ—ಯಾವ ಕಾಡಿನಲ್ಲಿ ದುಷ್ಟಮೃಗಗಳಿಂದ ಅಪಘಾತಕ್ಕೆ ಒಳಗಾದನೋ ಏನೋ-ನಾಲ್ಕೂ ಕಡೆ ದೂತರನ್ನಟ್ಟಿ ಹುಡುಕಿಸು ತ್ತೇನೆ" ಎಂದು ಹುಡುಕಿಸುವ ಒಂದು ಕೃತ್ರಿಮ ನಾಟಕವನ್ನು ಹೂಡಿ, ಕೃತ್ರಿಮ ವ್ಯಸನವನ್ನೂ ಪ್ರದರ್ಶಿಸಿಬಿಟ್ಟರಾಯಿತು. ಪ್ರಭು ಚಿತ್ತಕ್ಕೆ ಎದುರಾಡುವ ಎದೆಗಾರಿಕೆ ಈ ಹೇಡಿಗಳಿಗೆಲ್ಲಿರುತ್ತದೆ?"

ಮುಭಾರಕನ ಈ ಸೋಜಿಗದ ಸಲಹೆಗೆ ನನ್ನ ಚಿಕ್ಕಪ್ಪನು ಸಂತೋಷ ದಿಂದ ಸಮ್ಮತಿಸಿದನು. ನಾವಿಬ್ಬರೂ ನಮ್ಮ ಹಂಚಿಕೆಯಂತೆ ಮಾಲಿಕ್ ಸಾದಿಕನನ್ನು ನೋಡಲು ಹೋದವರು ಬಹಳಕಾಲ ಹಿಂತಿರುಗಲೇ ಇಲ್ಲ. ನನ್ನ ಸುಳಿವೇ ಇಲ್ಲವಾದಮೇಲೆ ನಾನು ಕೊಲ್ಲಲ್ಪಟ್ಟೆನೆಂದೇ ಆ ಕೊಲೆಪಾತಕನು ಎಣಿಸಿಬಿಟ್ಟನು.

ಇತ್ತ ಜಿನ್ನರ ರಾಜಧಾನಿಯನ್ನು ಸೇರಿದ ನಾವು ಮಾಲಿಕ್‌ಸಾದಿಕನನ್ನು ಸಂಧಿಸಿದೆವು. ವಿನಯಪೂರ್ವಕವಾಗಿ ಆತನನ್ನು ವಂದಿಸಿ ನಾವು ತೆಗೆದು ಕೊಂಡುಹೋಗಿದ್ದ ಕಾಣಿಕೆಗಳನ್ನು ಅವನಿಗೆ ಒಪ್ಪಿಸಿದೆವು. ಮುಬಾರಕನು

ನನ್ನ ವೃತ್ತಾಂತವನ್ನೆಲ್ಲ ಸವಿಸ್ತಾರವಾಗಿ ಸಾದಿಕನಿಗೆ ಬಣ್ಣಿಸಿ ಹೇಳಿದನು. ಆ ನಲವತ್ತನೆಯ ಕೋತಿಯನ್ನು ಕೊಟ್ಟು ಉದ್ಧಾರಮಾಡಬೇಕೆಂದು ಸಾದಿಕನನ್ನು ಬೇಡಿದನು.

ಸಾದಿಕನು ನನ್ನನ್ನೂ ಮುಬಾರಕನನ್ನೂ ಅತ್ಯಂತ ಆದರದಿಂದಲೂ, ಗೌರವದಿಂದಲೂ ಕಂಡನು. ನಾವು ಹಿಂತಿರುಗಿ ಹೊರಡಬೇಕಾದ ವಿಚಾರವನ್ನು ಆತನಿಗೆ ತಿಳುಹಿಸಿ ಕೋತಿಯನ್ನು ಕೊಡಬೇಕೆಂದು ಬೇಡಿದೆವು. ಸಾದಿಕನು ಹೇಳಿದನು :

"ರಾಜಕುಮಾರಾ! ನೀನು ನನ್ನ ಆಪ್ತಮಿತ್ರನ ಮಗ. ನಿನಗೆ ಇಂತಹ ದುಸ್ಥಿತಿಯೊದಗಿದುದನ್ನು ಕೇಳಿ ನಾನು ಬಹುವಾಗಿ ವ್ಯಥೆ ಗೊಂಡಿದ್ದೇನೆ. ಅನ್ಯಾಯವಾಗಿ ನಿನ್ನ ಚಿಕ್ಕಪ್ಪನಿಂದ ಆಕ್ರಮಿಸಲ್ಪಟ್ಟ ಸಿಂಹಾಸನವನ್ನು ನೀನು ಮರಳಿ ಪಡೆಯುವಂತಾದರೆ ಅದನ್ನು ಕುರಿತು ನನಗಿಂತಲೂ ಹೆಚ್ಚಾಗಿ ಆನಂದ ಪಡುವವರಿರಲಾರರು. ಆದರೆ ಕೋತಿಯನ್ನು ಕೊಡುವುದಕ್ಕೆ ಮುನ್ನ ನೀನು ನನಗೊಂದು ಪ್ರತ್ಯುಪಕಾರವನ್ನು ಮಾಡಬೇಕು. ಅದನ್ನು ಮಾಡುವುದರಲ್ಲಿ ನೀನು ಎಳ್ಳಷ್ಟೂ ನನ್ನನ್ನು ವಂಚಿಸಬಾರದು, ನಿಸ್ಪೃಹತೆಯಿಂದ ನೀನು ಆ ಕೆಲಸವನ್ನು ಸಾಧಿಸಿಕೊಡುವುದಾದರೆ, ಕೋತಿಯನ್ನು ಕೊಡುವುದು ಮಾತ್ರವಲ್ಲ; ನಿನ್ನ ತಂದೆಯಲ್ಲಿ ನಾನು ತೋರುತ್ತಿದ್ದ ಅಭಿಮಾನಕ್ಕಿಂತಲೂ ಹೆಚ್ಚಿನ ಅಭಿಮಾನವನ್ನು ನಿನ್ನಲ್ಲಿ ತೋರುತ್ತೇನೆ."

ಮಾಲಿಕ್ ಸಾದಿಕನ ಮಾತನ್ನು ಕೇಳಿ ಸಂತಸಗೊಂಡ ನಾನು ಹೇಳಿದೆ :

"ಜಿನ್ನರ ಮಹಾರಾಜನೇ! ನಾನು ನಿನ್ನ ಸೇವಕನಾಗಿ ನಡುಕಟ್ಟಿನಿಂತು ನೀನು ನನಗೊಪ್ಪಿಸುವ ಕೆಲಸವನ್ನು ಅತ್ಯಂತ ದಕ್ಷತೆಯಿಂದಲೂ, ವಿತರಣೆಯಿಂದಲೂ, ನಯದಿಂದಲೂ, ನ್ಯಾಯದಿಂದಲೂ, ನೀತಿಯಿಂದಲೂ, ನಡೆಸಿ ಕೊಡುತ್ತೇನೆ. ನಾನು ಎಳೆ ವಯಸ್ಸಿನ ತರುಣನೆಂದು ನನ್ನಲ್ಲಿ ಸಂಶಯ ತಾಳ ಬೇಡ, ಹಿಡಿದ ಕೆಲಸವನ್ನು ಹೇಗಾದರೂ ಮುಗಿಸಿಕೊಡುವ ಭಾರವನ್ನು ನಾನು ನನ್ನ ಹೆಗಲಮೇಲೆ ಹೊತ್ತಿದ್ದೇನೆ. ಗತಿಸಿದ ನಿನ್ನ ಆಪ್ತಮಿತ್ರರ ಮಗನಾದ ನಾನು ನಿನಗೆಂದಿಗೂ ದ್ರೋಹವನ್ನು ಮಾಡಲಾರೆನೆಂದು ನೀನು ನಿರ್ಧರವಾಗಿ ನಂಬಬಹುದು."

ನನ್ನ ಮಾತುಗಳನ್ನು ಕೇಳಿ ಮಂದಹಾಸದಿಂದ ಸಾದಿಕನು ಹೇಳಿದ :

"ನೀನಿನ್ನೂ ತರುಣ ! ಮೋಹಪರವಶನಾಗತಕ್ಕವನು. ನಯವಾದ ನಿನ್ನ ಮಾತುಗಳನ್ನೂ ನಾನು ಈಗ ನಂಬಬಹುದಾದರೂ ಮುಂದೆ ನಿನ್ನ ಕೃತ್ಯ ದಿಂದಲ್ಲವೇ ನಿನ್ನ ನಿಸ್ಪೃಹತೆಯನ್ನು ಕಂಡುಹಿಡಿಯ ಬೇಕಾದರೆ, ಎಚ್ಚರಿಕೆ ಇರಲಿ, ರಾಜಕುಮಾರಾ ! ಎಚ್ಚರಕೆ ಇರಲಿ, ಇದು ಒಬ್ಬ ನವಮೋಹನಾಂಗಿ ಯನ್ನು ಕುರಿತ ವಿಚಾರ ! ನೀನವಳಲ್ಲಿ ಅನುರಕ್ತನಾಗಿ ನನ್ನನ್ನು ಮೋಸಗೊಳಿಸ ಲೆತ್ನಿಸೀಯೆ....ಎಚ್ಚರಿಕೆ, ನಿಸ್ಪೃಹವಾಗಿ ನಡೆದುಕೊಂಡರೆ ನಿನಗೆ ನನ್ನಿಂದ ಅತ್ಯದ್ಭುತ ಸಹಾಯವುಂಟು. ನಂಬಿಸಿ ಮೋಸ ಮಾಡಿದರೆ ಅತ್ಯಂತ ಭೀಕರ ವಾದ ಶಿಕ್ಷೆಯೂ ಉಂಟು ; ನೆನಪಿರಲಿ : ಎಚ್ಚರಿಕೆಯಿರಲಿ !"

"ನಿಸ್ಪೃಹವಾಗಿಯೇ ನಡೆದುಕೊಳ್ಳುತ್ತೇನೆ ; ನಂಬಬಹುದು " ಎಂದೆನು.

"ಹಾಗಾದರೆ ಹಿಡಿ ಈ ಚಿತ್ರವನ್ನು'' ಎನ್ನುತ್ತ ಸಾದಿಕನು ನನ್ನ ಕೈಯಲ್ಲಿ ಒಬ್ಬ ನವಮೋಹನಾಂಗಿಯ ತೈಲಚಿತ್ರವನ್ನು ಕೊಟ್ಟು ಹೇಳಿದನು : ಈ ಚಿತ್ರವು ಯಾವದೇಶವಲ್ಲಿ ಯಾವ ಮಾನಿನೀ ಮಣಿಯನ್ನು ಹೋಲುತ್ತದೆ ಎಂದು ಎಲ್ಲೆ ಲ್ಲಿಯೂ ಹುಡುಕಿ ನೋಡು, ಈ ನಿರ್ಜೀವ ಚಿತ್ರಕ್ಕೆ ಮೂಲಾಧಾರಳಾದ ಮೋಹನಾಂಗಿಯನ್ನು ನೀನು ಕಂಡುಹಿಡಿದ ಒಡನೆಯೇ ಮತ್ತೆ ಆಕೆಯನ್ನು ಕಣ್ಣೆತ್ತಿನೋಡದೆ, ಕೈಯೆತ್ತಿ ಮುಟ್ಟದೆ, ಪರನಾರೀ ಸಹೋದರನಂತೆ ವರ್ತಿಸಿ, ಆಕೆಯನ್ನು ಇಲ್ಲಿಗೆ ಕರೆತಂದು ನನ್ನ ವಶಕ್ಕೆ ಒಪ್ಪಿಸಬೇಕು. ನೀನು ಹಾಗೆ ಮಾಡಿ ನನ್ನ ಒಪ್ಪಿಕೆಯನ್ನು ಪಡೆದರೆ ನೀನಪೇಕ್ಷಿಸುವ ಸಹಾಯಕ್ಕಿಂತಲೂ, ನಾನೆಸಗುವ ಸಹಾಯವು ಎಷ್ಟೋ ಇತೋಪ್ಯತಿಶಯವಾಗಿದ್ದೀತೆಂದು ನೀನು ನಂಬಬಹುದು, ಆಗಲಿ ; ಹೋಗಿ ಬಾ.''

"ದೇವರ ದಯೆಯಿಂದ ನಾನು ಜಯಶೀಲನಾಗಿ ಬರುತ್ತೇನೆ'' ಎನ್ನುತ್ತ ಸಾದಿಕನಿಂದ ಬೀಳ್ಕೊಂಡು ಮುಬಾರಕನೊಡನೆ ಕಲೆತು ನಾನು ಆ ನವಮೋ ಹನ ಕನ್ಯಾನ್ವೇಷಣಕ್ಕಾಗಿ ಹೊರಟೆ.

× × × × × × ×

ಮಾಲಿಕ ಸಾದಿಕನು ನನ್ನಬಳಿ ಕೊಟ್ಟ ಆ ತೈಲಚಿತ್ರದ ಮೂಲವಾದ ಮಾನಿನೀಮಣಿಯನ್ನು ಅರಸುತ್ತ ಹೊರಟೆವು—ನಾನೂ ಮುಬಾರಕನೂ, ಛಳಿ ಗಾಳಿ, ಮಳೆ, ಬಿಸಿಲೆನ್ನದೆ' ದಿನ, ವಾರ, ತಿಂಗಳು, ವರ್ಷವೆನ್ನದೆ, ಊರೂರು ಗಳಲ್ಲಿ; ಹಳ್ಳಿ ಹಳ್ಳಿಗಲ್ಲಿ, ಸುತ್ತಿ ಸುತ್ತಿ ನೋಡಿದೆವು, ಆದರೆ ಎಲ್ಲಿಯೂ ನವ ಮೋಹನಾಂಗಿಯನ್ನು ಕಣ್ಣಿಗೆ ಬೀಳಲಿಲ್ಲ. ಆ ತೈಲಚಿತ್ರವನ್ನು ನೋಡಿದವ ರೆಲ್ಲರೂ ಇದು "ಸ್ವರ್ಗಲೋಕದ ಸುಂದರಿಯನ್ನು ಕಲ್ಪನೆಮಾಡಿ ಬರೆದಿರುವ ಚಿತ್ರ. ಇದನ್ನು ಹೋಲತಕ್ಕ ಭುವನೈಕ ಮೋಹಿನಿಯನ್ನು ನಾವೆಲ್ಲಿ ನೋಡ ಬಲ್ಲೆವು ?" ಎಂದು ಬಿಟ್ಟರು. ಈ ವ್ಯಕ್ತಿಯನ್ನೇ ಕಂಡರಿಯೆವು ಎಂದು ಹೇಳಿದ ಮೇಲೆ ಇನ್ನು ಆಕೆಯ ಹೆಸರು ಊರುಗಳನ್ನು ಹೇಳುವವರು ಬೇರೆ ಸಿಕ್ಕಬಲ್ಲರೆ? ನಮ್ಮ ವರ್ಷಾಂತರದ ಸುತ್ತಾಟವೂ, ಅಲಸಿಕೆಯೂ, ಕಟ್ಟಕಡೆಗೆ ವ್ಯರ್ಥವಾಯಿ ತೆಂದೇ ಬೋಧೆಯಾಗ ತೊಡಗಿತು, ಹೀಗೆ ಏಳು ವರ್ಷ ಎಡೆಬಿಡದೆ ಸಂಚಾರ ಮಾಡಿ ನಾವು ಫಲಹೀನರಾದೆವು.

ಆದರೆ ದೈವಕಟಾಕ್ಷ ! ನಾವು ನಮ್ಮ ಪ್ರಯತ್ನದಿಂದ ವಿಮುಖರಾಗಲಿಲ್ಲ. ಕೊನೆಗೆ ನಾವು ಒಂದು ಜನಭರಿತವಾದ ನಗರವನ್ನು ಸೇರಿದೆವು. ಅಲ್ಲಿಯ ಸುಂದರವೂ, ವಿಶಾಲವೂ ಆದ ನಯನಾನಂದಕರ ಭವನಗಳು ಅತ್ಯಂತ ಮನೋಹರವಾಗಿದ್ದುವು. ಅಲ್ಲಿಯ ಕೆರೆಕಟ್ಟೆ ಕೊಳ—ಸರೋವರಗಳು, ಕಣ್ಣು ಕಣ್ಣು ಕುಕ್ಕುವಂತಿದ್ದ ಅಖಂಡವಾದ ಪೈರುಪಚ್ಚೆಗಳು, ಬಾಗಿ ಬಳುಕುತ್ತಿದ್ದ ಫಲಭರಿತವಾದ ತೆಂಗಿನ ವೃಕ್ಷಗಳು, ಲತಾಪುಷ್ಪ ನಿಬಿಡವಾದ ಉದ್ಯಾನವನ ಗಳು, ಬಹು ಭದ್ರವಾದ ನಗರ ಸಂರಕ್ಷಕ ಕೋಟೆಕೊತ್ತಲು, ಕಂದಕಗಳು, ಸುಪ್ರಸಿದ್ಧ ವ್ಯಾಪಾರಿಗಳಿಂದ ಕೂಡಿದ ಪೇಟೆ ಸ್ಥಳಗಳು, ಸ್ನಾನ ಘಟ್ಟಗಳು, ಸೋಪಾನಗಳು........ಇವು ಇತ್ಯಾದಿ ಎಷ್ಟೋ ಮನೋಹರ ದೃಶ್ಯಗಳನ್ನು ಕಣ್ಣು ತುಂಬ ನೋಡಿ ನಲಿಯುತ್ತ ಕೊನೆಗೊಂದು ವಿಶ್ರಾಂತಿ ಸ್ಥಲವನ್ನುಸೇರಿ ಅಲ್ಲಿ ಹಣ್ಣು ಹಂಪಲುಗಳನ್ನು ತಿನ್ನುತ್ತ ಕುಳಿತಿದ್ದೆವು. ನಾನು. ಮುಬಾರಕ ನನ್ನೂ. ಮುಬಾರಕನು ನನ್ನನ್ನೂ 'ಮುಂದೇನು ಮಾಡುವುದು ?' ಎಂದು ಕೇಳುತ್ತಿದ್ದ ಸಮಯಕ್ಕೆ ಸರಿಯಾಗಿ ಅಲ್ಲೊಬ್ಬ ಅಂಧವೃದ್ಧನು ನಮ್ಮಬಳಿಸಾರಿ 'ಧರ್ಮ;' ಎಂದು ಕೈ ನೀಡಿದ.

ಆ ಕರುಣಾಜನಕ ದೃಶ್ಯವನ್ನು ನನ್ನಿಂದ ನೋಡಲಾಗಲಿಲ್ಲ. ಅವನು ಮನುಷ್ಯನೇ? ಅಲ್ಲ; ಮನುಷ್ಯನನ್ನು ಹೋಲುವ ಹೊರನೋಟಕ್ಕೆ ಒಂದು ಚರ್ಮವನ್ನುಮಾತ್ರ ಹೊದಿಸಿದ–ಎಲುಬಿನ ಪಂಜರವದು. ಆ ನಿರ್ಭಾಗ್ಯವೃದ್ಧನು ಅಂಧನೆಂದು ಮೊದಲೇ ಹೇಳಿಯಾಯಿತಲ್ಲವೆ? ಅವನು ಕೋಲೂರಿಕೊಂಡು ನಮ್ಮ ಧ್ವನಿಯನ್ನು ಹಿಡಿದು ನಮ್ಮಬಳಿ ಬಂದವನೇ 'ಧರ್ಮ' ಎಂದಿದ್ದ. ಹಾಗೆಂದವನೇ ಅದೇಕೋ ಮರು ಮಾತನಾಡಲಾರದೆ—ತೊರಾಡುತ್ತ ಅವನು ಕೆಳಗೆ ಬಿದ್ದುಬಿಟ್ಟ. ತಾನು ತೀರ ನಿಶ್ಯಕ್ತನಾಗಿದ್ದನೆಂತಲೂ, ಎಷ್ಟೋದಿವಸ ಗಳಿಂದ ಅನ್ನಾಹಾರಗಳನ್ನು ಕಂಡಿರಲಾರನೆಂದು, ಯಾರೊಬ್ಬರೂ ತನಗೊಂದು ಕುರುಡು ಕವಡೆಯನ್ನೂ ಸಹ ನೀಡಲಿಲ್ಲವೆಂದೂ, ಏನೂ ದೊರೆಯದಿದ್ದರೆ ತಾನು ಅಂದು ಕ್ಷುತ್ಪಿಪಾಸೆಗಳನ್ನು ತಾಳಲಾರದೆ ಪ್ರಾಣಬಿಡುವ ಸ್ಥಿತಿಯಲ್ಲಿದ್ದೆನೆಂದು ಅವನೇ, ಹೇಳಿದ್ದ ಮಾತುಗಳಿಂದ ಆಗ ನಮಗರ್ಥವಾಯಿತು. ವೃದ್ಧನಿಗೆ ಉಪಕಾರಮಾಡಿ ಅವನು ಚೇತರಿಸಿ ಕೊಳ್ಳುತ್ತಿದ್ದಂತೆ ಮುಬಾರಕ್! ಎಂದೆ ನಾನು.

"ಹುಜೂರ್! ಒಂದುಮೊಹರನ್ನಾದರೂ ಕೊಟ್ಟರೆ ಕೆಲಕಾಲವಾದರೂ ಈ ಈ ವೃದ್ಧನು ಬೇಡದಿರಬಹುದು." ಎಂದ ಮುಬಾರಕ್!

ನಾನು ಎದೆಕರಗಿದವನಾಗಿ ನನ್ನ ಕಿಸೆಯಿಂದ ಒಂದು ಚಿನ್ನದ ಮೊಹರನ್ನು ತೆಗೆದು ಆ ವೃದ್ಧನಿಗೆ ಕೊಟ್ಟೆ. ಮುಬಾರಕನೊಂದಿಗೆ ನನ್ನ ರಾಜ್ಯವನ್ನು ಬಿಟ್ಟು ಹೊರಡುವಾಗ ನಾನು ಹತ್ತುಹಿಡಿ ನವರತ್ನಗಳನ್ನು ನಾಲ್ಕು ಥೈಲಿ ಮೊಹರು ಗಳನ್ನೂ ಹೊತ್ತು ತಂದಿದ್ದೆ. ಅಡಿಗಡಿಗೆ ರತ್ನಗಳನ್ನು ಸ್ವಲ್ಪಸ್ವಲ್ಪವಾಗಿ ಮಾರಿ ಮೊಹರುಗಳಾಗಿ ಮಾರ್ಪಡಿಸಿಕೊಳ್ಳುತಿದ್ದೆ. ಆದುದರಿಂದ ನನಗೆ ಹಣದ ದಾರಿದ್ರ್ಯವಿರಲಿಲ್ಲ.

ಚಿನ್ನದ ಮೊಹರನ್ನು ಪಡೆದು ನನ್ನನ್ನು ಬಹುನಾಗಿ ವಂದಿಸುತ್ತ ಆ ವೃದ್ಧನು ಪೇಟೆಯ ಕಡೇ ತೆರಳಿ ಬೇಕಾದುದನ್ನು ಕೊಂಡು ತನ್ನ ಮನೆಯನ್ನು ಕುರಿತು ಹೊರಟಿದ್ದನು. ಮುಬಾರಕನನು ನನಗೆ ಸನ್ನೆ ಮಾಡಿದನು. ನಾನೂ ಅವನೂ ಮುದುಕನನ್ನು ಎವೆಯಿಕ್ಕದೆ ನೋಡುತ್ತ ದೂರದಿಂದಲೇ ಅವನನ್ನು ಹಿಂಬಾಲಿಸುತ್ತಿದ್ದೆವು. ಕೊನೆಗೆ ಊರ ಹೊರಗೆ ಇದ್ದ ಒಂದು ಭವ್ಯವಾದ ಹಳೆಯ ಮನೆಯನ್ನು ತಲುಪಿದೊಡನೆಯೇ ಮುದುಕನು. ಬಾಗಿ ಲನ್ನೂ ತಟ್ಟಿದನು. ಹಳೆಯದಾದರೂ ಆ ಭವನವು ಸುಂದರವೂ, ವಿಶಾಲವೂ,

ರಾಜ ಮಹಾರಾಜರ ವಾಸಕ್ಕೆ ಯೋಗ್ಯವೂ ಅಹುದೆಂಬಂತಿತ್ತು. ನಮಗೆ ಆಶ್ಚರ್ಯವಾಯಿತು. ಇಂತಹ ದಿವ್ಯ ಭವನವು ಇವನದಿರಬಹುದೇ? ಇದ್ದರೆ ಇವನೇಕೆ ಹೀಗೆ ಬೇಡಿ ಬಳಲಬೇಕು? ಎಷ್ಟೋದಿವಸಗಳಿಂದ ಹೊಟ್ಟೆಗಿಲ್ಲದೆ ಇವನ ದೇಹವು ತಪಿಸಿ, ತಲ್ಲಣಿಸಿ, ಪಂಜರದ ಗೂಡಾಗಿ ಪರಿಣಮಿಸಬೇಕಾಗಿತ್ತು? ಹೀಗೆಲ್ಲ ನಾನು ಯೋಚಿಸುತ್ತಿರುವ ವೇಳೆಗೆ ಒಳಗಿದ್ದವರು ಯಾರೋ ಭವನದ ಬಾಗಿಲನ್ನು ತೆರೆದರು: ವೃದ್ಧನು ಒಳಗೆ ಹೊಕ್ಕನು. ಅವನ ಹಿಂದೆಯೇ ನಾನೂ ಮುಬಾರಕನೂ ಒಳಹೊಕ್ಕೆವು. ವೃದ್ಧನು ತನ್ನ ಊರುಗೋಲಿನಿಂದ ತಡವರಿಸುತ್ತ ಕೋಣೆಯಬಳಿ ಬಂದನು, ಆಗ ಯಾವುದೋ ಒಂದು ವನಿತೆಯ ಕೋಮಲ ವಾಣಿಯು ಕೇಳಿಸಿತು:

"ತಂದೆಯೇ! ಹೋದ ಕೆಲಸವೇನಾಯಿತು? ಏನಾದರೂ ಸಿಕ್ಕಿತೇ? ಏನು ಈ ದಿವಸ ಎಂದಿಗಿಂತ ಬೇಗನೆ ಬಂದು ಬಿಟ್ಟಿದ್ದೀಯೇ?"

ನಾನು ತನ್ನನ್ನು ಹಿಂಬಾಲಿಸಿದುದೂ, ತನ್ನೊಡನೆ ಭವನದೊಳಗೆ ಬಂದುದು, ಎಲ್ಲವನ್ನೂ ವೃದ್ಧನು ಸೂಕ್ಷ್ಮದಿಂದ ಅರಿತಿದ್ದ, ಹೌದು; ಕುರುಡರ ಕಿವಿ ಅತಿ ಸೂಕ್ಷ್ಮ; ಕಣ್ಣು ಕಳೆದುಕೊಂಡ ಶಕ್ತಿಯೂ ಕಿವಿಯಲ್ಲಿ ತೂರಿ ಅದರ ಶಕ್ತಿ ಇಮ್ಮಡಿಯಾಗುತ್ತದೆ.

"ತಾಯಿ ಕುಮಾರಿ!" ವೃದ್ಧನು ಹೇಳಿದನು. "ಈ ತರುಣ ಪ್ರಯಾಣಿಕನ ಎದೆಯಲ್ಲಿ ಕರುಣಾಳು ದೇವೇಶನು ಕನಿಕರದ ಬುಗ್ಗೆಯನ್ನು ತುಂಬಿದನು. ದಿನವೆಲ್ಲ ಬೇಡಿ ಬಳಲಿದರೂ ಒಂದು ಕುರುಡ ಕವಡೆಯಾದರೂ ದೊರೆಯದ ಈ ಕನಿಕರ ರಹಿತ ಊರಿಗೆ ಯಾವಕಾರ್ಯಾರ್ಥವಾಗಿಯೋ ಆಗಮಿಸಿದ ಈ ತರುಣ ಕರುಣಾಳುವು ನನ್ನದೀನ ಪರಿಸ್ಥಿತಿಯನ್ನು ಕಂಡು ಮರುಕಗೊಂಡು ಚಿನ್ನದ ಮೊಹರನ್ನು ನೀಡಿರುವನು. ಅದನ್ನು ಚಿಲ್ಲರೆ ಮಾಡಿಸಿ ನಾನು, ರೊಟ್ಟಿ, ಮಾಂಸ, ಸಂಬಾರ ಪದಾರ್ಥಗಳನ್ನೂ—ಉಪ್ಪು, ಹುಳಿ, ತುಪ್ಪ ಮುಂತಾದ ಪರಿಕಾರಗಳನ್ನೂ ಕೊಂಡು ತಂದಿದ್ದೇನೆ. ಹೋಗು; ಇವುಗಳೆನ್ನೆಲ್ಲ ತೆಗೆದುಕೊಂಡು ಹೋಗಿ ಮೊದಲು ಊಟಕ್ಕೆ ಸಿದ್ಧಮಾಡು. ಊಟವಾದ ಬಳಿಕ ಸ್ವಲ್ಪ ಚೇತರಿಸಿಕೊಂಡು ಹೇಳುತ್ತೇನೆ" ಎಂದು ನುಡಿದು ತ್ರಾಣವಿಲ್ಲದೆ ವೃದ್ಧನು ಅಲ್ಲೇ ಕೆಳಗೆ ಕುಳಿತು ಬಿಟ್ಟನು.

"ಅದೇನು ನಿನ್ನ ಆ ಕೈಯಲ್ಲಿರುವುದು ?" ತರುಣಿ ಕೇಳಿದಳು.

"ಅದೇಮ್ಮ! ಎಷ್ಟೋ ದಿವಸಗಳಾಯಿತು....ನಿನ್ನ ರೂಪಕ್ಕೆ ತಕ್ಕ ಬಟ್ಟೆಯನ್ನು ಕೊಂಡುಕೊಡಲಾಗದೆ ಒದ್ದಾಡುತ್ತಿದ್ದೆ ನಾನು. ತೆಗೆದುಕೋ; ಇದು ರೇಷ್ಮೆ ಬಟ್ಟೆ; ನಿನಗಾಗಿ ಕೊಂಡು ತಂದಿರುವೆ. ಪಾಪ! ನಿನ್ನ ಮೈ ಮೇಲಿನ ಬಟ್ಟೆಯೆಲ್ಲ ಹರಿದು ಚಿಂದಿಚಿಂದಿಯಾಗಿದೆ. ಊಟವಾದಮೇಲೆ ಈ ಬಟ್ಟೆಯನ್ನು ಸಪ್ರಮಾಣವಾಗಿ ಕತ್ತರಿಸಿ. ಅಂದವಾಗಿ ಹೊಲಿದುಕೋ. ಮೈಮೇಲೆ ಹಾಕಿಕೊಳ್ಳುವಿಯಂತೆ!" ಎಂದ ವೃದ್ಧ ನೊಂದ ಮನದಿಂದ.

ನನಗೆ ಇವನ್ನೆಲ್ಲ ಕಂಡು ತಡಿಯಲಿಲ್ಲ. ನಾನು ಮುಬಾರಕನನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಿದೆ. ಅವನು ನನ್ನ ಇಂಗಿತವನ್ನು ಅರ್ಥಮಾಡಿಕೊಂಡ. ಆದರೆ ಇನ್ನೂ ಸ್ವಲ್ಪ ಹೊತ್ತು ಕಾದು ನೋಡುವಂತೆ ನನಗೆ ಪ್ರತಿ ಸನ್ನೆಮಾಡಿದ.

"ಮಗು! ಈಗ ನಾವು ಮೊದಲು ಊಟಕ್ಕೆ ಕುಳಿತುಕೊಳ್ಳಬೇಕು. ಹಸಿವು ಬಾಯಾರಿಕೆಗಳಿಂದ ಪ್ರಾಣವಾಯುವು ಹಾರಿಹೋಗುವಂತಿದೆ" ಎಂದ ವೃದ್ಧ.

"ಅಪ್ಪ! ಮೊದಲು ಶರಬತ್ತನ್ನು ಕುಡಿ, ಶೀಘ್ರದಲ್ಲೆ ಊಟ ಬಡಿಸುತ್ತೇನೆ; ಉಣ್ಣುವಿಯಂತೆ" ಎಂದಳು ತರುಣಿ.

"ಹೌದು ತಾಯೆ! ನಾವು ಹೊಟ್ಟೆತುಂಬ ರುಚಿಕರವಾದ ಆಹಾರವನ್ನುಂಡು ಎಷ್ಟೋ ದಿವಸಗಳು ಆಗಿಹೋದುವು. ಇಂದು ದೇವರ ದಯ........ತರುಣನ ದರ್ಶನವಾಯಿತು."

ಎನ್ನುತ್ತ ವೃದ್ಧನು ಶರಬತ್ತನ್ನು ಕುಡಿಯುತ್ತಿದ್ದನು.

"ಬಡವರಾದ ನಮ್ಮಮೇಲೆ ಇಷ್ಟೊಂದು ಅಪಾರ ದಯೆತೋರಿದ ಆ ಕರುಣಾಳು ತರುಣನನ್ನು ಸರ್ವಾಂತರ್ಯಾಮಿಯಾದ ಪರಮಾತ್ಮನು ಹರಸಿ ಕಾಪಾಡಲಿ!"

ವೃದ್ಧನು ತನ್ನ ಕೃತಜ್ಞತೆಯನ್ನು ಮತ್ತೆ ವ್ಯಕ್ತಗೊಳಿಸಿದನು. ಇದರಿಂದಲೂ, ನಾವು ಕಣ್ಣಲ್ಲಿ ನೋಡಿದ ಆ ಕರುಣಾಜನಕ ದೃಶ್ಯದಿಂದಲೂ ಈ ತಂದೆ ಮಕ್ಕಳು ಎಂತಹ ಘೋರ ಬಡತನದ ಕಟ್ಟಿನಲ್ಲಿ ಸಿಲುಕಿ ನರುಳುತ್ತಿರುವರೆಂಬುದು ನಮಗೆ ಸ್ಪಷ್ಟವಾಗಿ ಭಾಸವಾಯಿತು. ಆದರೂ ಅವರು ಆ ದಿವ್ಯ

ಭವನದಲ್ಲಿ ಬೇರೆ ನೆರೆಯವರಿಲ್ಲದೆ ಏಕಾಂತ ವಾಸಮಾಡುವುದರ ಉದ್ದೇಶವು ನಮಗರಿವಾಗಲಿಲ್ಲ. ಅತೀವ ಬಡತನಕ್ಕೂ ಅವರು ವಾಸಿಸುವ ಅತ್ಯಂತ ಮನೋಹರವಾದ ಭವನಕ್ಕೂ ಒಂದಕ್ಕೊಂದು ಸಂಬಂಧವಿಲ್ಲದಂತಿತ್ತು. ಆ ರಸಾಭಾಸ ಪರಿಸ್ಥಿತಿಯಿಂದ ನಮ್ಮ ಕುತೂಹಲವು ಒಂದಕ್ಕೆ ನೂರ್ಮಡಿಯಾಗಿ ಕೆರಳಿತು.

ಅಷ್ಟರಲ್ಲಿ "ಅಡುಗೆ ಸಿದ್ಧವಾಗಿದೆಯಪ್ಪ! ಊಟಕ್ಕೇಳು" ಎಂದಳು ಆ ತರುಣಿ ದೂರದಿಂದ, ಮುದುಕನು ಎದ್ದು ಅವಳ ಬಳಿ ಹೋಗಿ ಕುಳಿತು ಆತುರದಿಂದ ಊಟಮಾಡತೊಡಗಿದನು. ಅವಳೂ ಜೊತೆಯಲ್ಲಿಯೇ ಊಟಮಾಡಿದಳು, ಧ್ವನಿ ಕೇಳಿಬರುತ್ತಿದ್ದ ಕಡೆಗೆ ನಾನು ಕಣ್ಣು ಹೊರಳಿಸಿ ನೋಡಿದೆ. ಈಗ ತರುಣಿಯ ಮುಖಕಮಲವನ್ನು ನಾನು ಸ್ಪಷ್ಟವಾಗಿ ನೋಡಬಲ್ಲವನಾಗಿದ್ದೆ. ನಾನು ಚೆನ್ನಾಗಿ ನೋಡಿದೆ. ಮತ್ತೆಮತ್ತೆ ದೃಷ್ಟಿಸಿ ನೋಡಿದೆ. ಹೌದು; ಚಿಂದಿಯ ಬಟ್ಟೆಯನ್ನು ಹೊದ್ದ ಆ ತರುಣಿ, ಲೋಕೋತ್ತರವಾದ ಸುಂದರಿ! ಆ ತೈಲ ಚಿತ್ರದಲ್ಲಿ ಕಂಡು ಬಂದ ಅದೇ ಸುಂದರಿ! ಅದೇ ಮುಖಭಾವ! ಅದೇ ಗುಲಾಬಿ ವರ್ಣ! ಅದೇ ಅರಳಿದ ನಯನಗಳು! ಅದೇ ವಿಶಾಲವಾದ ಹಣೆ! ಅದೇ ಅಂದಚೆಂದದ ಕಣ್ಣುಗಳು! ಮುತ್ತಿನಂತಹ ಹಲ್ಲಿನ ಸಾಲು! ಎಲ್ಲಾ ಅದೇ! ಒಟ್ಟಿನಲ್ಲಿ ಅವಳ ಅಚ್ಚಳಿಯದ ಪ್ರತಿ ಬಿಂಬವೇ ಚಿತ್ರದಲ್ಲಿದ್ದುದು! 'ಮುಬಾರಕ್!' ಎಂದು ಪಿಸುಮಾತಿನಲ್ಲಿ ಕೂಗಿದೆ. 'ಹೌದು ಅವಳೇ!' ಎಂದ ಅವನು, ನಮ್ಮ ಆನಂದವು ಅತೀವವಾಯಿತು. ನಮ್ಮ ಏಳು ವರ್ಷಗಳ ಆ ಪ್ರಬಲ ಪ್ರಯಾಸಗಳಿಂದ ಕೂಡಿದ ಪ್ರವಾಸದ ಫಲವು ಇದೇ....ಇಲ್ಲೇ.... ಕಣ್ಣೆದುರಿಗೆ! ನಾವು ಅಮಿತಾನಂದದಿಂದ ತುಂಬಿ ಹೋದೆವು, ಸ್ವರ್ಗಲೋಕದ ಸುಂದರಿಯಂತಿದ್ದ ಆ ನವಮೋಹನಾಂಗಿಯ ಮುಖಕಮಲವನ್ನು ನಾನು ಮತ್ತೊಮ್ಮೆ ನೋಡಿದೆ. ನನಗೆ ರೋಮಾಂಚನವಾಯಿತು. ನನ್ನ ಎದೆ ತೀವ್ರವಾಗಿ ಹೊಡೆದು ಕೊಳ್ಳುತ್ತಿತ್ತು. ನಾನು ಕ್ಷಣಾರ್ಧದಲ್ಲಿ ಮೋಹದ ಮಾಯೆಯಲ್ಲಿ ಸಿಲುಕಿ ಬಿದ್ದೆ. ಅವಳನ್ನು ಹೋಗಿ ತಬ್ಬಿಕೊಂಡು ಬಿಡಬೇಕೆನ್ನುವಂತೆ ಮೋಹಪರವಶನಾಗಿ ನನಗೂ ತಿಳಿಯದೆ ಮೇಲೇಳಲು ಹೋದೆ. ಮುಬಾರಕನು ನನ್ನ ಇಂಗಿತವನ್ನು ತಕ್ಷಣವೇ ಅರಿತುಕೊಂಡವನಂತೆ ನನ್ನನ್ನು ಹಿಡಿದು ಕುಳ್ಳಿರಿಸಿ "ಏನು ಕುಮಾರಾ! ಮಲ್ಲಿಕ್‌ಸಾದಿಕನು ಹೇಳಿದ್ದನ್ನು ಆಗಲೇ ಮರೆತೆ

ಯೆಂದು ತೋರುತ್ತೆ! ನೋಡಿದಾಕ್ಷಣವೇ ಇಷ್ಟು ಮೋಹಪರವಾಶನಾದೆ! ಇನ್ನು ನೀನು ಅವಳನ್ನು ಕೊಂಡುಹೋಗಿ ಅವನಿಗೊಪ್ಪಿಸುವುದು ನಿಜವೆ? ನಮ್ಮ ಹುಡುಗಿಯ ಗತಿಯೇನಾಗಬೇಕು?" ಮುಬಾರಕನ ಮಾತಿನಲ್ಲಿ ಸೂಕ್ತವಾದ ಎಚ್ಚರಿಕೆಗಳು ಅಡಗಿದ್ದುವು. ಕ್ಷಣಿಕಾಭಿಲಾಷೆಗೂ-ನಿರಂತರ ಸುಖಕ್ಕೂ ನಡುವೆ ನಿಂತಿಪ್ಪ ಅಂತರದ ಸ್ವರೂಪವನ್ನು ಅವನು ನನಗೆ ಚಿತ್ರಿಸಿ ತೋರಿಸಿದಂತಾಯಿತು. ನಾನು ನನ್ನ ಮೋಹವನ್ನು ಕ್ರಮದಿಂದ ಅಡಗಿಸಿಕೊಂಡೆ. "ಆದರೆ ಅವಳನ್ನು ಕರೆದೊಯ್ಯುವುದಕ್ಕೆ ನೀನು ನಾಟಕವನ್ನು ಹೂಡಬಹುದು; ಏಕೆ? ಹೂಡಲೇ ಬೇಕು; ಗತ್ಯಂತರ ವಿಲ್ಲ. ಮಲ್ಲಿಕ್‌ಸಾದಿಕನ ಮಾತನ್ನು ಇಲ್ಲಿ ಎತ್ತಲೇ ಬಾರದು. ನೀನವಳನ್ನು ಮೋಹಿಸುವೆಯೆಂದು ಮುದುಕನಲ್ಲಿ ಹೇಳಿ ಒಪ್ಪಿಸಿ, ಅವಳನ್ನು ಇಲ್ಲಿಂದ ಹೊರಡಿಸಬಹುದು. ಅದಕ್ಕೆ ನನ್ನ ಅಭ್ಯಂತರವಿಲ್ಲ" ಎಂದು ಮುಬಾರಕನು ಸಲಹೆ ಹೇಳಿದ.

ನಾನು ತರುಣಿಯನ್ನೇ ದೃಷ್ಟಿಸಿ ನೋಡುತ್ತಿದ್ದೆನಲ್ಲವೆ? ಆಗ ಅವಳು ನನ್ನನ್ನು ಕುರಿತು ಆಗ್ರಹದಿಂದ ಹೇಳಿದಳು:

"ಪುರುಷರಿಗೂ ಲಜ್ಜಾ ಭಯಗಳು ಇರಬೇಕು. ಪರಸ್ತ್ರೀಯನ್ನು ಆ ತೆರನೆ ದೃಷ್ಟಿಸಿ ನೋಡುವುದು ಎಂತಹ ನಾಚಿಕೆಯ ಮಾತು!"

ನಾನು ಈಗ ನಿಜವಾಗಿಯೂ ನಾಚಿ ತಲೆತಗ್ಗಿಸಿದೆ.

"ಹಾಗೆ ಬೇಡ; ಮೊದಮೊದಲು ಹೀಗೆಯೇ; ಹೋಗ ಹೋಗುತ್ತ ಎಲ್ಲವೂ ಸರಿಹೋಗಲೇಬೇಕು. ಪ್ರೇಮದ ಬೇಟೆ ಸರೋವರದ ಜಾರುವ ಮೆಟ್ಟಲುಗಳಿದ್ದಂತೆ, ನಡುಸರಸ್ಸಿನಲ್ಲಿರುವ ಕಮಲಪುಷ್ಪವನ್ನು ಕಿತ್ತು ತರಲು ಮೆಟ್ಟಲುಗಳನ್ನು ಮೆಲ್ಲಮೆಲ್ಲನೆ ಇಳಿಯಬೇಕು. ಕಮಲವೆಡೆಗೆ ಈಜಿಹೋಗಲು ನೀನಿನ್ನೂ ಅಷ್ಟೊಂದು ಅರಿತು ನುರಿತ ಈಜುಗಾರನಲ್ಲ. ಎಚ್ಚರಿಕೆ ಜಾರಿ ಮಡುವಿನಲ್ಲಿ ಬಿದ್ದು ಮುಳುಗಿ ಹೋದೀಯೆ!"

ಮುಬಾರಕನ ಎಚ್ಚರಿಕೆ ಸ್ಪಷ್ಟವಾಗಿತ್ತು ಈ ಸಲವೂ.

ತರುಣಿಯ ಧ್ವನಿಯು ಇಂಪಾಗಿತ್ತು. ಸೊಂಪಾದ ಆ ವದನಾರವಿಂದದಿಂದ ಹೊರಹೊಮ್ಮಿದ ಆ ಇಂಪಾದ ಮಾತು ಸುಂದರ ಸ್ವರ್ಣಮಯ ಪುಷ್ಪಕ್ಕೆ ಪರಿಮಳವನ್ನು ಯಥೇಚ್ಛವಾಗಿ ಚೆಲ್ಲಿದಂತೆ ಮನೋಹರವಾಗಿತ್ತು: ಮೋಹ

ಪರವಶನಾಗಿದ್ದ ನಾನು ಜಿನ್ನರನಾಯಕನ ಎಚ್ಚರಿಕೆಯ ಮಾತನ್ನು ನೆನಸಿ—ಅಲ್ಲಿಂದೆದ್ದು ಓಡಿಹೋಗಬೇಕಾಗಿತ್ತು. ಅಲ್ಲಿದ್ದರೆ ನನ್ನ ಮನಸ್ಸು ಅವಳನ್ನು ಒಲಿಸಿ ಅನುಭವಿಸುವದರಲ್ಲಿ ಲೀನವಾಗಿ ಹೋಗಿತ್ತು, ಹಾಗಾಗಿದ್ದರೆ ಮಲ್ಲಿಕ್ ಸಾದಿಕನು ನನಗೆ ಯಾವ ಘೋರ ಶಿಕ್ಷೆಯನ್ನು ವಿಧಿಸುತ್ತಿದ್ದನೋ ಹೇಳಲು ಸಾಧ್ಯವಿಲ್ಲ. ಆದರೆ ದೈವಾಧೀನ! ಮುಃಬಾರಕನ ಸಲಹೆಯಂತೆ ನಾನುಅತಿಕ್ರಮ ಪ್ರವೇಶಕ್ಕೆ ಸಿದ್ಧವಾಗಿ ಹೋಗಿದ್ದ ನನ್ನ ಮನಸ್ಸನ್ನು ಅತಿಕಷ್ಟದಿಂದ ತಡೆದೆ. ತರುವಾಯ ನನ್ನ ಕಾರ್ಯಸಾಧನೆ—ಅದಾಗಿ, ಆ ನವಮೋಹನಾಂಗಿಯನ್ನು ವಶಪಡಿಸಿಕೊಂಡು ಮಲ್ಲಿಕ್ ಸಾದಿಕನ ಬಳಿಗೊಯ್ಯುವುದು—ಅದರ ವಿಚಾರವಾಗಿ ಯೋಚಿಸಿ–ಅದೊಂದು ಬಗೆಯ ತೀರ್ಮಾನಕ್ಕೆ ಬಂದು ಆ ತರುಣಿಯನ್ನೂ ಅವಳ ತಂದೆಯನ್ನೂ ಕುರಿತು ಹೇಳಿದೆ :

"ಸೃಷ್ಟಿ ನಾಯಕನ ಕಲಾಕೌಶಲ್ಯಕ್ಕೆ ಅತ್ಯುತ್ತಮ ನಿದರ್ಶನದಂತಿರುವ ಎಲ್ಯೆ ಮನೋಹರ ಮೋಹಿನೀಮಣಿ ! ಕೋಪಗೊಳ್ಳದಿರು. ಸೌಂದರ್ಯಾತಿಶಯವನ್ನು ನೋಡಿ ಕಣ್ಣುಮುಚ್ಚಿಕೊಂಡಿರಲು ಸಾಧ್ಯವೇ ? ಯಾರೂ ನೋಡುವುದು ಬೇಡ ಎಂದೆಣಿಸಿ ಸೌಂದರ್ಯ ನಿರ್ಮಾಣದಲ್ಲಿ ಸೃಷ್ಟೀಶನು ನಿರತನಾಗಿರುವುದು ನಿಜವೇ ? ಸೌಂದರ್ಯವಿರುವುದು ನೋಡಿ ಆನಂದಿಸುವುದಕ್ಕೆ ! ಹಾಗೆ ನೋಡಿ ಆನಂದಿಸುವುದರಿಂದ ನಾವು ಸೃಷ್ಟೀಶನ ಆ ಅಪಾರ ಕೌಶಲ್ಯವನ್ನು ಮೆಚ್ಚಿದಂತಾಗುತ್ತದೆ. ಹಾಗೆ ಮೆಚ್ಚದ ಮಾನವರು ತಮ್ಮ ಮಾನವೀಯತೆಯನ್ನು ಕಳೆದುಕೊಂಡು ಮೃಗಸಮಾನರಾಗುತ್ತಾರೆ. ಸುಂದರವಾಗಿ ಮಂದಗಮನದಿಂದ ಸರಿಯುವ ನದಿಯ ಸ್ವಚ್ಛವಾದ ಜಲರಾಶಿಯನ್ನು ಕಂಡು ನಾವು ಆನಂದಿತರಾಗುವುದಿಲ್ಲವೆ ? ಲತಾವೃಕ್ಷಗಳನ್ನು—ಫಲಪುಷ್ಪ ಭರಿತ ಉದ್ಯಾನವನಗಳನ್ನು ಕಲಕಲ ಧ್ವನಿಗೈಯ್ಯುವ ಪಕ್ಷಿ ಸಮೂಹವನ್ನು ನೋಡಿ ವಸಂತಕಾಲದ ಕರ್ಣಾನಂದಕರ ಕೋಕಿಲಗಾನವನ್ನು ಕೇಳಿ ನಾವು ಸಂತಸಗೊಳ್ಳುವುದಿಲ್ಲವೆ ? ಬೆಟ್ಟದ ಶಿಖರಗಳಿಂದ ಭೋರ್ಗರೆಯುವಂತೆ ಕೆಳಗುರುಳುವ ಸ್ಫಟಿಕಸಮಾನವಾದ ತರಂಗ ತರಂಗಮಯ ಜಲರಾಶಿಯನ್ನು ಕಂಡು ನಮ್ಮೆದೆಯು ಮಹದಾನಂದದಿಂದುಬ್ಬುವುದಿಲ್ಲವೆ ? ಅಂತೆಯೇ........ಎಲ್ಯೆ ಕೋಮಲಾಂಗಿ ! ನಿನ್ನ ಮುಖದಾವರೆಯಲ್ಲಿ ಸೃಷ್ಟೀಶನು ಅಡಗಿಸಿ ಇಟ್ಟಿರುವ

ಆ ಲಾವಣ್ಯದ ರಾಶಿಯನ್ನು ಕಂಡು ಆನಂದಿಸದೆ ಕಣ್ಣುಮುಚ್ಚಿಕೊಳ್ಳಲು ಆದೀತೇ ? ಭಯಗೊಳ್ಳದಿರು ನಾರೀರತ್ನವೆ! ನಾವು ಯಾತ್ರಿಕರು ! ಪ್ರಯಾಣ ದಿಂದ ಬಹುವಾಗಿ ಬಳಲಿದ್ದೇವೆ, ಕೆಲದಿನಗಳು ಸುಧಾರಿಸಿಕೊಳ್ಳಲು ನಮಗೆ ಸ್ವಲ್ಪ ಸ್ಥಳವನ್ನು ಈ ಭವನದಲ್ಲಿ ಬಿಟ್ಟುಕೊಡುವಂತೆ ನಿನ್ನ ತಂದೆಯನ್ನು ಒಡಂಬಡಿಸಲಾರೆಯಾ ?"

ನಾನು ಅಂಗಲಾಚಿ ಬೇಡಿದೆ, ನನ್ನ ಧ್ವನಿಯನ್ನ ಕಂಡು ಹಿಡಿದು, ನಾನಾಡಿದ ಮಾತಿನ ಮಾಧುರ್ಯವನ್ನು ಸವಿದು, ನನ್ನ ಬೇಡಿಕೆಯ ನಿಜತ್ವ ವನ್ನರಿದು ವೃದ್ಧನು ನನ್ನಬಳಿ ಬಂದು ನನ್ನನ್ನು ಆ ತರುಣಿಯಿದ್ದೆಡೆಗೆ ಕರೆ ದೊಯ್ದು ಕುಳಿತುಕೊಳ್ಳುವಂತೆ ಹೇಳಿದನು. ನನ್ನನ್ನು ಕಂಡೊಡನೆ ಸೌಂದರ್ಯವೆ ಮೂರ್ತಿವೆತ್ತು ಬಂದ ಸ್ವರ್ಗಲೋಕದ ದೇವತೆಯಂತಿದ್ದ ಆ ಮೋಹನ ತರು ಣಿಯು ಮೇಲೊದ್ದು, ಒಂದು ಪಕ್ಕಕ್ಕೆ ಸರಿದು ನನಗೆ ಕಾಣದಂತೆ ತನ್ನ ಮುಖ ವನ್ನು ಮುಚ್ಚಿಕೊಂಡು ನಿಂತಳು. ಕುಳಿತುಕೊಳ್ಳುವಂತೆ ನಾನೆಷ್ಟು ಒತ್ತಾಯ ಪಡಿಸಿದರೂ ಆ ತರುಣಿಯು ಅದಕ್ಕೆ ಸಮ್ಮತಿಸಲೇ ಇಲ್ಲ. ಬದಲಾಗಿ ಅವಳು ನಿಂತೇ ಇದ್ದಳು. ವೃದ್ಧನು ಮಟ್ಟಿಗೆ ನಾನು ಯಾರು ? ಎಲ್ಲಿಂದ ಬಂದವನು ? ಏನು ಕಾರ್ಯಾರ್ಥವಾಗಿ ಬಂದವನು ? ಎಂದೆಲ್ಲ ವಿಚಾರಿಸಿದ, ನಾನು ಯಾತ್ರಿಕ ನಾಗಿ ಲೋಕ ಸಂಚಾರಕ್ಕೆ ಹೊರಟವನೆಂದೂ, ನಾನು ಹೊರಟು ಹತ್ತು ವರ್ಷ ಗಳಾದುವೆಂದೂ, ನಾನು ಚೀಣಾದೇಶದ ರಾಜಕುಮಾರನೆಂದೂ, ನನ್ನ ಜೊತೆ ಯಲ್ಲಿದ್ದವನು ನನ್ನ ಸೇವಕನೆಂದೂ ಹೇಳಿದೆ. ಆದರೆ ಮಲ್ಲಿಕ್‌ಸಾದಿಕನ ವಿಚಾರ ವಾಗಿ ನಾನು ಒಂದು ಕಿರುಮಾತನ್ನೂ ಎತ್ತಲಿಲ್ಲ.

ಮುದುಕನಿಗೆ ಸಂತೋಷವೇ ಆಯಿತೆನ್ನಬೇಕು. "ಚಕ್ರಾಧಿಪತ್ಯಕ್ಕೆ ಉತ್ತರಾಧಿಕಾರಿಯಾದ ನೀನು ಈ ಬಡವನ ಹೊಸ್ತಿಲನ್ನು ತುಳಿಯುವಂತಾ ಯಿತೆ ?" ಎಂದು ಅವನು ತನ್ನ ಅತಿಥಿಯಾಗಿ ನಿಲ್ಲಬಯಸಿದ ನನ್ನ ಅಂತಸ್ತನ್ನು ಅರಿತು. "ಹಂಸತೂಲಕಾ ತಲ್ಪದಲ್ಲಿ ಪವಡಿಸಿ ನೂರಾರು ಸೇವಕರಿಂದ ಶುಶ್ರೂಷಿ ಸಲ್ಪಡುವ ನಿಮ್ಮಂತಹವರಿಗೆ ಈ ಬಡವನ ಮನೆಯು ಯಾವ ಸುಖಸಂತೋಷ ಗಳನ್ನು ನೀಡಬಲ್ಲುದು ?" ಎಂದು ಕೇಳಿದ. ಇಂತಹ ಮಾತುಗಳು ಅವನ ಬಾಯಿಂದ ಹೊರಬೀಳಬಹುದೇ ಎಂದು ನಾನೂ ಸಮಯವನ್ನು ಸಾಧಿಸುತ್ತಿದ್ದೆ.

"ದೇವರು ನಮಗೆ ಸಂಪತ್ತಿಗೇನೂ ಲೋಪಮಾಡಿಲ್ಲ. ಎಷ್ಟು ಕೊಟ್ಟರೂ ಕರಗದಷ್ಟು ನಿಧಿ ನಮ್ಮ ಬಳಿ ಇದೆ. ಆದರೂ ನಾವು ಹೋದಕಡೆಯೆಲ್ಲ ನಾವು ತಂಗುವುದು ಬಡವರ ಮನೆಯಲ್ಲಿ. ಭಗವಾನನು ಬಡವರ ಬಂಧು. ಎಂದು ನಾವು ಆತ್ಮೈಶ್ವರ್ಯ ಸಂಪನ್ನರಾದ ಎಷ್ಟೋ ಫಕೀರರ ಬಾಯಿಂದ ಕೇಳಿದ್ದೇವೆ. ನೀವು ಬಡವರಾದುದರಿಂದಲೇ—ನಿಮ್ಮ ಈ ಭವನವು ಪಟ್ಟಣದ ಅನವಶ್ಯಕ ಗಲಿಬಿಲಿಯಿಂದ ದೂರವಾಗಿರುವುದರಿಂದಲೇ—ನಾವು ಇಲ್ಲಿ ತಂಗಿ ಪ್ರಯಾಸಪರಿಹಾರ ಮಾಡಿಕೊಳ್ಳಲು ನಿರ್ಧರಿಸಿದ್ದೇವೆ. ಅಷ್ಟಕ್ಕೆ ನೀವು ಸಮ್ಮತಿಸಿ ನಮಗೆ ಇರುವುದಕ್ಕೆ ಸ್ಥಳವನ್ನು ಕೊಟ್ಟರೆ ನಾವು ನಿಮ್ಮ ಬಡತನವನ್ನು ಹರಿಸಿ ದೈವದ ಕೃಪೆಗೆ ಪಾತ್ರರಾಗಿ, ಹತ್ತಾರು ದಿನಗಳನ್ನಾದರೂ ನಿಮ್ಮೊಂದಿಗೆ ಆನಂದದಿಂದ ಕಳೆಯಬೇಕೆಂದು ನಿರ್ಧರಿಸಿದ್ದೇವೆ."

ಎಂದೆಲ್ಲ ನಾನು ಹೇಳಿದೆ. ಏಳುವರ್ಷಗಳ ಅನಂತ ಯಾತ್ರಾಕಾಲದಲ್ಲಿ-ಸಹಸ್ರ ಸಹಸ್ರ ಜನರೊಡನೆ ಕಲೆತು ಬೆರೆಯುವುದರಲ್ಲಿ—ಮಾನವರ ಕಷ್ಟನಷ್ಟಗಳನ್ನು ಕಣ್ಣಾರೆ ಕಂಡು ಅನುಭವಿಸಿದುದರ ಪ್ರತಿ ಫಲವಾಗಿ—ಮೇಲಾಗಿ ಮುಬಾರಕನ ಸಮಯೋಚಿತ, ಚತುರತೆಯಿಂದ ಕೂಡಿದ ಉತ್ತಮ ಸಲಹೆಗಳ ಪರಿಣಾಮವಾಗಿ—ನಾನೀಗ ಅತೀವ ಅನುಭವವನ್ನು ಸೂರೆಗೊಂಡಿದ್ದೆ. ನನ್ನ ಮಾತಿನ ಚಾತುರ್ಯಕ್ಕಾಗಲಿ ನಿರಾತಂಕವಾದ ಓಟಕ್ಕಾಗಲಿ ತೊಡಕು ತೊಂದರೆಗಳಿರಲಿಲ್ಲ. ಪ್ರವಾಹದಂತೆ ನನ್ನ ವಾಣಿಯು ಮುಂದುವರಿಯುತ್ತಿತ್ತು. ಹತ್ತಾರು ವರ್ಷಗಳಿಗೆ ಮುನ್ನ ಅಂತಃಪುರದ ಬಾಲಿಕೆಯರ ಒಡನಾಟದಲ್ಲಿಯೇ ಬೆಳೆದು-ರಾಜಯೋಗ್ಯವಾದ ಪೌರುಷವನ್ನು ಕಳೆದುಕೊಂಡು ; ಗುಲಾಮಗಿತ್ತಿಯಿಂದ ಕೆನ್ನೆಯಮೇಲೆ ಹೊಡೆಸಿಕೊಂಡು, ಬಿಕ್ಕಿ ಬಿಕ್ಕಿ ಅಳುತ್ತ ಮುಬಾರಕನ ಮರೆಹೊಕ್ಕ ಆ ಹೇಡಿ ಬಾಲಕನಾಗಿದ್ದ ನಾನು-ಇಂದು ಉತ್ತಮ ಲೋಕಾನುಭವವನ್ನು ಪಡೆದು, ಪರಿಪೂರ್ಣ ಪೌರುಷದಿಂದ ತುಂಬಿದ ನವಯುವಕನಾಗಿದ್ದೆ. ಆಳರಸರಿಗೆ ಯೋಗ್ಯವಾದ ಘನತೆ, ಗೌರವ, ಶೌರ್ಯ ವೀರ್ಯೌದಾರ್ಯ ಗಾಂಭೀರ್ಯ ಮಾಧುರ್ಯಾದಿ. ಅನೇಕ ಸದ್ಗುಣಗಳಿಂದ ತುಂಬಿದ್ದ ನಾನು ಮುಬಾರಕನನ್ನು ಕರೆದು ಮೆಲುದನಿಯಲ್ಲಿ ಹೇಳಿದೆ :

"ಮುಬಾರಕ್! ನಾವು ಹುಡುಕುತ್ತಿದ್ದ ಪುಣ್ಯಕಾರ್ಯಕ್ಕೆ ಸರಿಯಾದ ಅವಕಾಶ ಈಗ ದೊರಕಿತು. ಈ ಸತ್ಪಾತ್ರರಿಗೆ ನೂರು ಮೊಹರುಗಳನ್ನು ಕೊಡು. ಅವರ ಈ ಬಡತನದ ಬಾಳು ನೀಗಿ ಅವರು ದಯಾಮಯನ ಹೆಸರಿನಲ್ಲಿ ಸುಖದಿಂದಿರಲಿ. ಅಂತೆಯೇ ನಮ್ಮಲ್ಲಿ ಇರುವ ಆ ದಿವ್ಯ ರತ್ನಗಳಲ್ಲಿ ಉತ್ತಮವಾದ ಕೆಲವನ್ನು ಅರಿಸಿತೆಗೆದು ಆ ಸೌಂದರ್ಯ ಮೂರ್ತಿಗೆ ಪ್ರಕಾಶಮಯವಾದ ಆಭರಣಗಳನ್ನು ಮಾಡಿಸಿ ತೆಗೆದುಕೊಂಡು ಬಾ."

ಮುಬಾರಕನು ನೂರು ಹೊನ್ನುಗಳನ್ನು ಆ ವೃದ್ಧನ ಮುಂದೆ ಸುರಿದ, ಒಂದು ಹಿಡಿ ರತ್ನವನ್ನು ತನ್ನ ಕರವಸ್ತ್ರದಮೇಲೆ ಚೆಲ್ಲಿ ಇವರಲ್ಲಿ ಬೇಕಾದುವನ್ನು ಆಕೆಯೇ ಆರಿಸಿಕೊಡಲಿ" ಎಂದು ಮುಬಾರಕನು ಮೋಹನಾಂಗಿಯ ಕಡೆ ಕೈ ತೋರಿಸಿದನು. ವೃದ್ಧನ ಎದೆಯು ಆನಂದದಿಂದ ತುಂಬಿ ಬಿರಿಯಿತು. ತರುಣಿಯು ತನ್ನ ಧೂರ್ತತನಕ್ಕಾಗಿ ತನ್ನನ್ನು ತಾನೇ ಹಳಿದುಕೊಂಡು ಲಜ್ಜೆಯಿಂದ ನಮ್ಮತ್ತ ಒಮ್ಮೆ, ರತ್ನಗಳ ಕಡೆ ಮತ್ತೊಮ್ಮೆ ಕಣ್ಣುಗಳನ್ನು ಹೊರಳಿಸಿ ನೋಡಿದಳು. ಆ ಕಣ್ಣುಗಳಲ್ಲಿ ಈಗ ಕಾಠಿಣ್ಯಕ್ಕೆ ಬದಲು ಕೃತಜ್ಞತೆಯು ತುಂಬಿತ್ತೆಂದು ಹೇಳಬೇಕಾಗಿಲ್ಲ. ಕರವಸ್ತ್ರದಲ್ಲಿದ್ದ ರತ್ನಗಳನ್ನು ನಾನು ಅವಳ ಮುಂದಿಟ್ಟೆ, ಅವಳು ಅವುಗಳಿಂದ ರತ್ನಗಳನ್ನು ಆರಿಸಿಕೊಳ್ಳ ತೊಡಗಿದಳು. "ವೃದ್ಧನು ಅವಳನ್ನು ಕುರಿತು ನೀನು ಪುಣ್ಯವಂತೆ! ದೇವರೇ ಇವರನ್ನು ನಮ್ಮ ಬಳಿ ಕಳುಹಿಸಿದ್ದಾನೆ" ಎಂದ ಸಂತಸದ ಭರದಿಂದ, ನಾನು ವೃದ್ಧನನ್ನು ಕುರಿತು ಹೇಳಿದೆ :

"ನಮ್ಮ ಸೇವಕನೇ ಪೇಟೆಗೆ ಹೋಗಿ ಬೇಕಾದ ಉಡುಗೆತೊಡಿಗೆಗಳನ್ನೂ— ಅಡುಗೆಯ ಸಾಮಗ್ರಿಗಳನ್ನೂ, ಹಣ್ಣುಹಂಪಲುಗಳನ್ನೂ ಕೊಂಡು ತರುತ್ತಾನೆ. ನೀನಿನ್ನು ನೆಮ್ಮದಿಯಾಗಿ ಮನೆಯಲ್ಲಿ ಕುಳಿತಿರಬಹುದು."

"ಆಗಬಹುದು ; ದೇವರಿಚ್ಛೆ ! " ಎಂದ ಆ ಅಂಧವೃದ್ಧ, ಅದರ ಬೆನ್ನ ಹಿಂದೆ ಹರಿದು ಬಂದ ಅವನ ಕೃತಜ್ಞತಾಭರಿತ ಕಣ್ಣೀರನ್ನು ಒಂದು ತಂಬಿಗೆಗೆ ತುಂಬಿಕೊಳ್ಳಬಹುದಾಗಿತ್ತು.

ಮುಬಾರಕನು ಪೇಟೆಗೆ ಹೋಗಿ ಆಹಾರ ಪದಾರ್ಥಗಳನ್ನು ಹಣ್ಣು ಹಂಪಲುಗಳನ್ನೂ ಹೊರಿಸಿಕೊಂಡು ಬಂದನು. ನಾನೂ ಅವನೂ ಕುಳಿತು ಹೊಟ್ಟೆತುಂಬ ಊಟ ಮಾಡಿದೆವು. ಹಣ್ಣುಹಂಪಲುಗಳನ್ನು ಆ ತಂದೆಮಕ್ಕಳಿಗೂ

ಕೊಟ್ಟೆವು. ಆ ಬಳಿಕ ಉಡುಗೆ ತೊಡಿಗೆಗಳನ್ನೂ, ರತ್ನಾಭರಣಗಳನ್ನೂ ಕೊಂಡು ತರಲು ಮುಬಾರಕನು ಮತ್ತೆ ಪೇಟೆಯ ಕಡೆ ಹೊರಟ ನಾನು ಅಲ್ಲ ಒಂದು ಕಡೆ ಹಾಸಿದ್ದ ಒಂದು ಕಂಬಳಿಯಮೇಲೆ ಕುಳಿತೆ. ಅಂಥ ವೃದ್ಧನು ನನ್ನ ಕಥೆಯನ್ನು ಕೇಳಲು ಕುತೂಹಲದಿಂದದ್ದನು. ಅಂತೆಯೇ ಆ ತರುಣಿಯೂ ಸಹ, ನಾನು ಕಥೆಯನ್ನು ಹೇಳ ತೊಡಗಿದೆ :

"ನಾನು ಚೀಣಾದೇಶದ ಚಕ್ರವರ್ತಿಯ ಏಕಮಾತ್ರ ಪುತ್ರ. ಒಮ್ಮೆ ಒಬ್ಬ ವರ್ತಕನು ಈ ತೈಲ ಚಿತ್ರವನ್ನು ಒಂದು ಸಾವಿರ ಮೊಹರುಗಳಿಗೆ ನನ್ನ ತಂದೆಗೆ ಮಾರಿದನು. ಚಿತ್ರವನ್ನು ನೋಡಿದಮೇಲೆ ನನ್ನ ಮನಸ್ಸು ಮೋಹ ಪರವಶವಾಯಿತು. ನನ್ನ ನೆಮ್ಮದಿಯಳಿದು ನಾನು ನಿಂತಲ್ಲಿ ನಿಲ್ಲಲಾರದೆ ಹೋದೆ. ನನ್ನ ತಂದೆಯ ಸ್ವಂತ ಕೋಶಾಗಾರದಲ್ಲಿ ಒಂದು ರತ್ನದ ರಾಶಿಯೇ ಇದೆ. ಹತ್ತು ಬಂಡಿಗಳಿಗೆ ಹೇರಿಸುವಷ್ಟು ಹೊನ್ನಿದೆ. ಅದಕ್ಕೆಲ್ಲ ನಾನೇ ಉತ್ತರಾಧಿಕಾರಿ. ಊಳಿಗಕ್ಕೆ ಸಹಸ್ರಾರು ಜನ ಸೇವಕರಿದ್ದಾರೆ. ಆದರೂ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ. ಈ ಚಿತ್ರದಲ್ಲಿಯ ಸ್ವರ್ಗೀಯ ಸೌಂದರ್ಯವು ನನ್ನ ಚಿತ್ತವನ್ನು ಅಪಹರಿಸಿತು. ಚಿತ್ರವೇ ಇಷ್ಟೊಂದು ಚಿತ್ತಾಪಹಾರಕವಾಗಿದ್ದರೆ, ಜೀವ ಕಳೆಯಿಂದ ತುಂಬಿದ ಇದರ ಮೂಲವು ಮತ್ತೆಷ್ಟು ಮನೋಹರವಾಗಿರಬಹುದು! ಮೂಲ ಬಿಂಬವನ್ನು ಮನದಣಿಯ ನೋಡಿ ಆನಂದಿಸಬೇಕೆಂಬ ಬಯಕೆ ನನ್ನಲ್ಲಿ ಬೇರೂರಿತು. ನಾನು ಫಕೀರನ ವೇಷವನ್ನು ಧರಿಸಿದೆ. ಸಾಕಷ್ಟು ರತ್ನಗಳನ್ನೂ ಮೊಹರುಗಳನ್ನೂ ಹೊರಿಸಿಕೊಂಡು ಈ ಮುಬಾರಕನೊಂದಿಗೆ ದೇಶಸಂಚಾರಕ್ಕೆ ಹೊರಟೆ. ಏಳು ವರ್ಷಗಳ ದೀರ್ಘಕಾಲ ಎಲ್ಲೆಲ್ಲೂ ಈ ಸುಂದರ ಕನ್ಯೆಯನ್ನು ಅನ್ವೇಷಿಸುತ್ತ, ಕಂಡಕಂಡವರನ್ನೆಲ್ಲ ಕೇಳಿ-ವಿಫಲರಾಗಿ, ಮಹತ್ತರ ಕಷ್ಟಗಳನ್ನು ಅನುಭವಿಸುತ್ತ ಕೊನೆಗೆ ಇಲ್ಲಿ ಬಂದು ಸೇರಿದೆವು. ದೈವಕಟಾಕ್ಷವು ಒದಗಿತು. ಈ ಕೋಮಲಾಂಗಿ ಕಣ್ಣಿಗೆ ಬಿದ್ದಳು. ಅವಳ ಸುಂದರ ಸ್ವರೂಪವೇ ಈ ಚಿತ್ರದಲ್ಲಿ ಪ್ರತಿ ಬಿಂಬಿತವಾಗಿರುವುದು! ಮುಂದೆ ಹೇಳಲೇನಿದೆ? ಇಲ್ಲಿಗೆ ನಮ್ಮ ದೀರ್ಘಯಾತ್ರೆಯು ಕೊನೆಗೊಂಡಂತಾಯಿತು. ಪ್ರೇಮಯಾತನೆಯಿಂದ ಕುದಿಯುತ್ತಿರುವ ನನ್ನ ಮನಸ್ಸನ್ನು ದಯಾಭಿಕ್ಷೆಯಿಂದ ಶಮನಗೊಳಿಸುವುದು ನಿನ್ನ ಹಸ್ತದಲ್ಲಿದೆ. ನಾನು ಈಕೆಯಲ್ಲಿ ಅನುರಕ್ತನಾಗಿದ್ದೇನೆ. ಪ್ರಣಯಾ

ಭಿಲಾಷಿಯಾದ ನನ್ನ ಕೋರಿಕೆಯನ್ನು ಸಲ್ಲಿಸುವೆಯಾ ? ನನ್ನೊಡನೆ ಇವಳ ಪಾಣಿಗ್ರಹಣಕ್ಕೆ ಸಮ್ಮತಿಸಿ ಅಪಾರ ಪುಣ್ಯಕ್ಕೆ ಪಾತ್ರನಾಗುವೆಯಾ ? ಸಮ್ಮತಿಸುವುದಾದರೆ ನನ್ನ ಕೋರಿಕೆಯನ್ನು ಮನ್ನಿಸಿ ಈಡೇರಿಸು."

ಆಗ ಅಂಧವೃದ್ಧನು ಹೇಳಿದ್ದನ್ನು ಕೇಳಿ ನನ್ನೆದೆಯು ಸಹಸ್ರ ಛಿದ್ರಗಳಾಗಿ ಒಡೆದು ಹೋದಂತಾಯಿತು.

"ರಾಜಕುಮಾರಾ! ಬತ್ತಿಹೋದ ಹೊಳೆಯಲ್ಲಿ ಮೀನುಹಿಡಿಯಲು ಹೋದ ಬೆಸ್ತರವನ ಪ್ರಯತ್ನದಂತಿದೆ ನಿನ್ನ ಮಾತು ! ಇವಳು ಮದುವೆ ಮಾಡಿಕೊಳ್ಳಬಹುದಾಗಿದ್ದರೆ ನಾವೇಕೆ ಈ ದುರ್ಭರ ದಾರಿದ್ರ್ಯದಲ್ಲಿ ಬಿದ್ದು ನರಳಬೇಕಾಗಿತ್ತು. ಇಲ್ಲ, ಇಲ್ಲ. ಆ ಆಸೆಯನ್ನು ನಿನ್ನ ಮನಸ್ಸಿನಿಂದ ತೊಡೆದು ಹಾಕಿ ನಿಶ್ಚಿಂತನಾಗು, ಮದುವೆಯ ಮಾತನ್ನೇ ಎತ್ತಬೇಡ."

ಹೀಗೆನ್ನುತ್ತ ವೃದ್ಧನು ನಿಟ್ಟುಸಿರುಬಿಟ್ಟನು.

"ತಂದೆ ! ನೀನು ಹೇಳುವ ಮಾತು ನನಗರ್ಥವಾಗಲಿಲ್ಲ. ಈ ತರುಣಿಯೇತಕ್ಕೆ ಮದುವೆ ಮಾಡಿಕೊಳ್ಳಬಾರದು ? "

ಎಂದು ನಾನು ಕೇಳಿದೆ. ಅದಕ್ಕೆ ಆ ವೃದ್ಧನು ಮತ್ತೆ ಹೇಳತೊಡಗಿದ :

"ಈಕೆಯ ವೃತ್ತಾಂತವು ವಿಚಿತ್ರ ಸಮಸ್ಯೆಗಳಿಂದ ಕೂಡಿದೆ. ಆಕೆಯೊಂದಿಗೆ ವಿವಾಹವು ಅಪಾಯದಿಂದ ಕೂಡಿದ ವಿಚಾರ, ಆ ಮಾತನ್ನು ಬಿಡು ; ನೀನವಳನ್ನು ಮದುವೆ ಮಾಡಿಕೊಳ್ಳಲಾಗದು. ನಾನದಕ್ಕೆ ಸಮ್ಮತಿಸಲೂ ಸಾಧ್ಯವಿಲ್ಲ."

ವೃದ್ಧನು ಖಚಿತವಾಗಿ ಹೇಳಿಬಿಟ್ಟ. ಆಗ ನಾನು ಸುಮ್ಮನಿದ್ದುಬಿಡಲು ಬಯಸದೆ. "ಆ ಸಮಸ್ಯೆಗಳೇನು ? ವಿಚಿತ್ರ ವಿಚಾರಗಳೇನು ? ಅವುಗಳನ್ನು ನಾನು ಕೇಳ ಬಯಸುತ್ತೇನೆ" ಎಂದೆ.

ವೃದ್ಧನು ತನ್ನ ಕಥೆಯನ್ನು ಹೇಳ ತೊಡಗಿದ :

# ೩೧

ಅತಿಯಾದ ದಣಿವಿನಿಂದ ನಾನು ಹಾಗೆಯೇ ನೆಲದಮೇಲೆ ಮಲಗಿದೆ. ನನ್ನ ಕಣ್ಣೆಳೆಯಿತು. ನನ್ನನ್ನೂ ಮಿಂಚಿ ನಾನು ನಿದ್ರೆಹೋದೆ. ಹಾಗೆ ಎಷ್ಟು ಹೊತ್ತು ನಿದ್ರೆ ಹೋದೆನೋ ನನಗೆ ಗೊತ್ತಿಲ್ಲ. ನಾನು ಮಲಗಿದಾಗ ಆಗಿನ್ನೂ ಮಧ್ಯಾಹ್ನದ ಹೊತ್ತು ಸಮೀಪಿಸಿರಲಿಲ್ಲ. ಎದ್ದವನೇ ಹೊರಗೆ ಹೋಗಿ ನೋಡಿದೆ. ಆಗಲೇ ಸೂರ್ಯಾಸ್ತಮಾನವಾಗಿತ್ತು. ಮೈಕೊಡವಿಕೊಂಡು ಒಳಗೆ ಬರುವುದರೊಳಗೆ ಮುಬಾರಕನೂ ಇಬ್ಬರು ಗುಲಾಮರ ತಲೆಯಮೇಲೆ ಸಾಮಾನುಗಳನ್ನು ಹೊರಿಸಿಕೊಂಡು ಬಂದ, ಸಾಮಾನುಗಳನ್ನು ಪಡಸಾಲೆಯಲ್ಲಿ ಇಳುಹಿಸಿ ಹೊತ್ತು ತಂದವರಿಗೆ ಕೂಲಿಯನ್ನೂ ಇನಾಮನ್ನೂ ಕೊಟ್ಟು ಕಳುಹಿಸಿದವನೇ ಮುಬಾರಕನು ನನ್ನತ್ತ ತಿರುಗಿ "ಹುಜೂರ್! ಎಲ್ಲವನ್ನೂ ತರಹೇಳಿದೆ. ಆದರೆ ಸಿಂಹಾಸನಾಧೀಶ್ವರನಾದ ನೀನು ನೆಲದಮೇಲೆ ಮಲಗುವುದೇ ?" ಎಂದು ಕೇಳಿದ, "ಮುಬಾರಕ್! ನಿದ್ರಾದೇವಿಗೆ ಬಡಭಾಗ್ಯವಂತರೆಂಬ ಪಕ್ಷಪಾತವಿಲ್ಲ, ನಿದ್ರೆಯ ಪುಣ್ಯವನ್ನು ನಾವು ಕೇಳಿ ಬಂದಿದ್ದರೆ ಸಾಕು. ಎಲ್ಲಿ ಮಲಗಿದ್ದರೂ ನಿದ್ರೆ ನಿರ್ವಂಚನೆಯಿಂದ ಹತ್ತಿ ಬಿಡುತ್ತದೆ. ಇಷ್ಟುಹೊತ್ತು ನಾನು ಮಲಗಿ ನಿದ್ರಿಸುತ್ತಿದ್ದುದು ನೆಲದಮೇಲೆಯೇ. ಅದೆಷ್ಟು ಸುಖಕರವಾದ—ಸುಂದರ ಸ್ವಪ್ನಗಳಿಂದೊಡಗೂಡಿದ ನಿದ್ರೆ ಬಂದಿತು ಬಲ್ಲೆಯಾ ? ನಿದ್ರೆ ಹಿಡಿಸಿದರೆ ನೆಲವೇನು? ಸುಪ್ಪತ್ತಿಗೆಯೇನು ?" ಎಂದೆ ನಾನು.

ಮುಬಾರಕನು ಮತ್ತೆ ಹೇಳಿದ :

"ಹಾಗಲ್ಲ ಹುಜೂರ್! ರಾಜತ್ವಕ್ಕೊಂದು ಘನತೆಯಿದೆ ; ಗೌರವವಿದೆ. ನಾಳೆ ನೀನು ಸಿಂಹಾಸನ ವೇರಿದಾಗ ಪ್ರಜೆಗಳೂ, ದೇಶ ವಿದೇಶಗಳಿಂದ ಬಂದ ಪ್ರತಿನಿಧಿಗಳೂ, ನೀನು ಎತ್ತಿಟ್ಟ ಹೆಜ್ಜೆಗಳನ್ನು ಮುತ್ತಿಡುತ್ತಾರೆ. ನಿನ್ನ ಗೌರವ ಪ್ರತಿಷ್ಠೆಗಳು, ಕೀರ್ತಿ ಕರ್ತವ್ಯಗಳು ಅತ್ಯಂತ ಮಹತ್ತರವಾದುವು. ಚೀಣಾ ದೇಶದ ರಾಜಕುಮಾರನೆಂದು ನಿಜಾಂಶವನ್ನು ವೃದ್ಧನಲ್ಲಿ ಹೇಳಿ ಬಿಟ್ಟಿದ್ದೀಯೆ.

ಹೇಳಬೇಕಾದ ಪ್ರಮೇಯವೂ ಇತ್ತು. ಹೇಳಿದಮೇಲೆ ಪರಸ್ಥಳದಲ್ಲಿ ಆದಷ್ಟು ಗೌರವ—ಅಂತಸ್ತುಗಳನ್ನೂ ಕಾಪಾಡಿಕೊಳ್ಳಬೇಕು. ಯೋಚಿಸಿ ನೋಡು"

"ಮುಬಾರಕ್ ! ಅದಕ್ಕಾಗಿ ಈಗೇನು ಮಾಡಬೇಕೆನ್ನುವೆ ? "

"ಮಾಡುವುದೇನು ? ನೀನೇ ಯೋಚಿಸಿ ಹೇಳು."

"ಮುಬಾರಕನ ಮಾತು ಮುಗಿದಿರಲಿಲ್ಲ. ಇನ್ನೂ ನಾಲ್ಕು ಗುಲಾಮರು ದಿವ್ಯವಾದ ರತ್ನಗಂಬಳಿಗಳನ್ನೂ, ಉಡುಗೆ ತೊಡುಗೆಗಳನ್ನೂ, ತರುಣಿಗೆ ಅಲಂಕಾರದ ವಸ್ತು ವಸ್ತ್ರಗಳನ್ನೂ ಹೊತ್ತು ತಂದರು."

ನನಗೆ ಅತ್ಯಂತ ಸಂತೋಷವೂ ಆಶ್ಚರ್ಯವೂ ಆಯಿತು. ಮುಬಾರಕನು ಕುಶಲಬುದ್ಧಿಯುಳ್ಳವನು. ದೀರ್ಘಕಾಲ ನನ್ನ ತಂದೆಯ ಸೇವೆಯಲ್ಲಿದ್ದು ರಾಜಮರ್ಯಾದೆ, ಸಭಾಮರ್ಯಾದೆ, ಸಮಾಜ ರೀತಿನೀತಿಗಳು—ಎಲ್ಲವನ್ನೂ ಚೆನ್ನಾಗಿ ಅರಿತುಕೊಂಡಿದ್ದ. ಸಮಯೋಚಿತವಾಗಿ ಸಲಹೆ ಹೇಳುವುದರಲ್ಲಿಯೂ, ಸಮಂಜಸ ಕಾರ್ಯಗಳನ್ನು ನೆರವೇರಿಸುವುದರಲ್ಲಿಯೂ, ಅವನು ಅತ್ಯಂತ ಚತುರ, ಅವನು ಹೊರಿಸಿಕೊಂಡು ಬಂದ ಸಾಮಾನುಗಳಲ್ಲಿ ಪ್ರಕಾಶಮಾನವಾದ ದೀಪಗಳೂ ಇದ್ದುವು. ಅವನು ತಾನು ಹೊರಿಸಿಕೊಂಡು ಬಂದುದನ್ನೆಲ್ಲ ಒಳಗಡೆಗೆ ತೆಗೆಸಿಕೊಂಡು ಬಂದ, ನೆಲಕ್ಕೆ ರತ್ನಗಂಬಳಿಗಳನ್ನು ಹಾಸಿದ, ಕತ್ತಲಾಗಿದ್ದುದರಿಂದ ದೀಪಗಳನ್ನು ಹೊತ್ತಿಸಿಟ್ಟ. ತರುಣಿಗೆ ತಾನು ತಂದಿದ್ದ ಉಡುಗೆ ತೊಡಿಗಳನ್ನು ಅಲಂಕಾರದ ಆಭರಣಗಳನ್ನೂ ಅವಳ ಮುಂದಿರಿಸಿದ, ಹಣ್ಣು ಹಂಪಲುಗಳನ್ನೂ ಆಹಾರ ಸಾಮಗ್ರಿಗಳನ್ನೂ ಅವಳ ವಶಕ್ಕೇ ಒಪ್ಪಿಸಿದ. ಬಹುಕಾಲದಿಂದ ಅಂಧಕಾರದಲ್ಲಿ ಮುಳುಗಿಹೋಗಿದ್ದ ಆ ಭವನದಲ್ಲಿಂದು ಜ್ಯೋತಿಯು ಪ್ರಕಾಶಮಾನವಾಗಿ ಬೆಳಗ ತೊಡಗಿತು. ಕಣ್ಣುಕಾಣದ ಆ ಅಂಧನೂ ಅದರ ಸವಿಯನ್ನು ಅನುಭವಿಸುವಂತಿತ್ತು! ಆ ಬಡವರ ಮನೆಯಲ್ಲಿಂದು ಸಮೃದ್ಧಿಯೂ-ತಾಂಡವವಾಡುತ್ತಿತ್ತು. ಅದರೊಂದಿಗೆ ಬತ್ತಿಹೋದ ಅವರ ಎದೆಯಲ್ಲಿ ಆಶಾಂಕುರಗಳು ಮೊಳೆತು ಬೆಳೆಯತೊಡಗಿದುವು, ತರುಣಿಯು ಈಗ ಹಿಂದಿನಂತೆ ಲಜ್ಜಾಭಯಗಳನ್ನು ತಾಳಿರಲಿಲ್ಲ. ಬಡತನದಲ್ಲಿ ಮುಳುಗಿ ಹೋಗಿದ್ದ ತನ್ನ ದುರ್ಭರ ಸ್ಥಿತಿಯಿಂದ ಮೇಲೆದ್ದು ತನ್ನಲ್ಲಿ ಮರುಕಗೊಂಡು ಉದ್ಧಾರಮಾಡಲು ದೇವರು ತಾನೇ ಕಳುಹಿಸಿಕೊಟ್ಟ ದೇವತೆಗಳು ನಾವೆಂದು ಅವಳ ಮನಸ್ಸಿನಲ್ಲಿ

ಭಾವನೆಯುಂಟಾದರೆ ಎಂತಹ ಮಹದಾನಂದವನ್ನು ತಾಳಬಹುದೋ ಅದನ್ನೆಲ್ಲ ಅವಳು ತಾಳತೊಡಗಿದಳೆಂಬುವರ ನಿದರ್ಶನಗಳು ಎದ್ದು ಕಾಣುತ್ತಿದ್ದುವು. ಬಳಿಕ ನಾನು ಆ ವೃದ್ಧನನ್ನು ಕುರಿತು "ಅಯ್ಯಾ! ನೀನು ಅವಳನ್ನು ನನಗೆ ಧಾರೆಯೆರೆದು ಕೊಡುವುದಕ್ಕೆ ಒಪ್ಪಿದರೂ ಸರಿ; ಒಪ್ಪದಿದ್ದರೂ ಸರಿ, ಭುವನ ಮೋಹನ ಸುಂದರಿಯು ಇಂತಹ ಚಿಂದಿ ಬಟ್ಟೆಗಳನ್ನು ಧರಿಸಿ, ಹೊಟ್ಟೆಯ ಕೂಳಿಗೆ ಹಗಲಿರುಳೂ ತಪಿಸಿ, ತಲ್ಲಣಿಸಿ, ಕಣ್ಣೀರು ಕಾಲುವೆ ಹರಿಸುವುದನ್ನು ಕಣ್ಣಾರೆ ನೋಡಿ ಕೈಕಟ್ಟಿ ಕುಳಿತುಕೊಳ್ಳಬಲ್ಲ ಕಠಿಣ ಮನಸ್ಕರು ನಾವಲ್ಲ. ಈ ದಿವ್ಯ ರೂಪಕ್ಕೆ, ಯೋಗ್ಯವೆನಿಸಬಲ್ಲ ವಸ್ತ್ರಾಲಂಕಾರಗಳನ್ನು ತರಿಸಿದ್ದೇನೆ. ಅವುಗಳನ್ನೂ ಧರಿಸುವಂತೆ ಆಕೆಗೆ ಹೇಳು" ಎಂದು ಒತ್ತಾಯ ಪಡಿಸಿದೆ.

ಮೊದಮೊದಲು ಕೋಮಲಾಂಗಿಯು ನನ್ನ ಸಲಹೆಯನ್ನು ಒಪ್ಪಲಿಲ್ಲ. ಆದರೆ ವೃದ್ಧನು ಅವಳನ್ನು ಕುರಿತು ಹೇಳಿದ:

"ಕುಮಾರಿ! ಚಕ್ರವರ್ತಿ ಕುಮಾರರು ಹೇಳಿದುದನ್ನು ಕೇಳಿದೆಯಷ್ಟೆ. ಇಂತಹ ಸರ್ವಸುಂದರವಾದ ಉಡುಗೆ ತೊಡಿಗೆ ಅಲಂಕಾರಗಳನ್ನು ನೀನು ಈ ಮುನ್ನ ನೋಡದೆ ಇಲ್ಲ. ಆದರೆ ಮಧ್ಯಕಾಲದಲ್ಲಿ ವಿಧಿಯ ಪ್ರಬಲ ಉಪಟಲಗಳಿಂದ ನೀನು ಬಡತನದಲ್ಲಿ ಬಿದ್ದು ಹೊರಳಾಡಿದೆ. ಹೌದು; ಕರುಣಾಳು ಪರಮಾತ್ಮನ ಅಂಕಿತದಲ್ಲಿ ಅನಂತ ಕಷ್ಟಗಳನ್ನು ಈಕ್ಷಣದವರೆಗೂ, ಅನುಭವಿಸುತ್ತ ಬಂದೆ. ಕಾಲವು ಒದಗಿತು; ಅವನ ಕಟಾಕ್ಷ ವೀಕ್ಷಣೆಯು ತಲೆದೋರಿತು. ಅವನ ದೂತರಂತೆ ಇವರು ಸರ್ವಮಂಗಳವಾದ ಸಮೃದ್ಧಿಯೊಂದಿಗೆ ಈ ಹೊಸ್ತಿಲನ್ನು ತುಳಿದರು. ಬೇಡಿ ಬೇಡಿ ಬೆಂಡಾದರೂ ಕುರುಡು ಕವಡೆಯೂ ದೊರೆಯದ ಎಷ್ಟೋ ದಿನಗಳನ್ನು ನಮ್ಮ ಬಾಳಲ್ಲಿ ಈ ವೇಳೆಗೆ ನಾವು ಕಂಡಿರುವುದನ್ನು ನೀನು ಬಲ್ಲೆ. ಆದರೆ ಇಂದು ಆ ಭಂಗದ ಬಾಳು—ಆ ಭಂಡತನದ ಬೇಡಿಕೆ—ಆ ಬವಣೆ ಬಡಿವಾರಗಳು ಸಾಕು—ಬಧಿರ ಸಮಾಜದ ಬಡಾಯಿ ಕೋರತನವನ್ನು ನೆಚ್ಚಿ ಕೆಡಬೇಡ—ಎನ್ನುವ ತೆರನೆ ಈ ಪುಣ್ಯ ಪುರುಷರು—ನಮ್ಮನ್ನು ಬೇಡದಂತೆ ಮಾಡಿ—ಬೇಕಾದ ಸಕಲ ಸಂಪತ್ತನ್ನೂ ಕರುಣಿಸುತ್ತಿದ್ದಾರೆ. ದೈವ ಕಟಾಕ್ಷವು ಒದಗಿದರಲ್ಲದೆ ಹೀಗೆಲ್ಲ ಸುಖಮಯ ಚಿನ್ಹೆಗಳು ತಲೆದೋರುವುವು. ಹುಡುಕಿ ಬಂದ ಮಹಾ ಭಾಗ್ಯವಿದು; ಪುಣ್ಯಮಯದಾನ ದೊರೆತಂತಾಯಿತು.

ಬೇಡವೆನ್ನಬೇಡ ತಾಯಿ ! ಸ್ವೀಕರಿಸಿ ಧರಿಸು, ಸಂತಸದಿಂದ ಕೊಟ್ಟವರ ಮನಸ್ಸು ಹುಣ್ಣಾಗದಿರಲಿ. ಅಭ್ಯಾಗತರು ನಾವೊ—ಅಥವಾ ಅವರೋ ? ಅತಿಥಿ ಅಭ್ಯಾಗತರ ಸ್ಥಾನಗಳನ್ನು ತಿರುವು ಮುರುವು ಮಾಡಿ ಭಗವಂತನೇ ಲೀಲಾಜಾಲ ವಿನೋದ ಭರಿತ ನಾಟಕವನ್ನು ಆಡಿ ತೋರಿಸುತ್ತಿದ್ದಾನೆ. ನಾವದರ ಪ್ರೇಕ್ಷಕರಾಗಿರೋಣ, ಮುಂದಿನ ದೃಶ್ಯಗಳಲ್ಲಿ ಏನೇನು ಅದ್ಭುತಗಳಡಗಿವೆಯೆಂದು ನಿರೀಕ್ಷಣೆಯನ್ನು ತಾಳುವ."

ಅಂಧನ ಮಾತು ಮುಗಿಯಿತು. ಸುಂದರ ವನಿತೆಯ ವದನಾರವಿಂದದಲ್ಲಿ ಮಂದಹಾಸವು ಪ್ರಫುಲ್ಲಿತವಾಯಿತು. ಅವಳು ಆ ವಸ್ತ್ರಾಲಂಕಾರಗಳನ್ನು ಒಳಗೆ ತೆಗೆದುಕೊಂಡು ಹೋಗಿ ಧರಿಸಿದಳು. ಮತ್ತೆ ಅವಳು ಹೊರಗೆ ಕಾಣಿಸಿಕೊಂಡಾಗ ಅವಳು ಸೌಂದರ್ಯ ರಾಶಿಯೇ ಮೂರ್ತಿವೆತ್ತ ಮಂಗಳಮಯ ದೇವತೆಯಂತೆ ಅತುಳಕಾಂತಿಯಿಂದ ವಿರಾಜಿಸುತ್ತಿದ್ದಳು. ದಿವ್ಯ ವಸ್ತ್ರಾಲಂಕಾರಗಳಿಂದ ದೇದೀಪ್ಯಮಾನಳಾಗಿ ಲಾವಣ್ಯವನ್ನು ಹೊರಸೂಸುತ್ತಿದ್ದ ಅವಳ ನಿರತಿಶಯಾಚ್ವಲ್ಯ ಸ್ಫುರದ್ರೂಪವನ್ನು ಕಂಡು ನಾನು ಮುಗ್ಧನಾಗಿ ಹೋದೆ.

ಇರಲಿ ; ಆಗ ಅಂಧ ವೃದ್ಧನು ತನ್ನ ಕಥೆಯನ್ನು ತೊಡಗಿ "ಚಕ್ರವರ್ತಿ ಕುಮಾರಾ ! ಈ ದಿನ ಮಧ್ಯಾಹ್ನ ನಾನು ಆತ್ಮ ಕಥೆಯನ್ನು ಹೇಳುತ್ತಿದ್ದಂತೆ ನೀನು ನಿದ್ರಪರವಶನಾಗಿ ಹೋದೆ. ನಿನ್ನ ನಿದ್ರೆಯನ್ನು ಕೆಡಿಸಬಾರದೆಂದು ನಾನು ಸುಮ್ಮನಾದೆ."

"ಒಳ್ಳೆಯದು ತಂದೆ ! ಈಗ ಹೇಳಬಹುದಲ್ಲ ; ಕೇಳಲು ನಾನು ಸಿದ್ಧನಾಗಿದ್ದೇನೆ " ಎಂದೆ ನಾನು.

ವೃದ್ಧನು ಹೇಳತೊಡಗಿದನು :

"ಒಂದಾನೊಂದು ಕಾಲದಲ್ಲಿ ನಾನು ಈ ರಾಜ್ಯದ ಪ್ರಧಾನ ಮಂತ್ರಿಯಾಗಿದ್ದೆ. ನನ್ನ ಪೂರ್ವಜರು ಈ ಪ್ರಾಂತದಲ್ಲೆಲ್ಲ ಪ್ರಸಿದ್ಧಿಗೆ ಹೆಸರಾಂತವರು, ನಮ್ಮ ಕುಟುಂಬದ ಗೌರವಕ್ಕೆ ತಲೆಬಾಗದವರಿರಲಿಲ್ಲ. ನಮ್ಮ ದಾನ ಧರ್ಮಗಳನ್ನು ಈ ಸುತ್ತಿನವರೆಲ್ಲ ಬಲ್ಲರು. ಈ ತರುಣಿ ನನ್ನ ಏಕಮಾತ್ರ ಪುತ್ರಿ, ಅವಳು ಯೌವ್ವನದ ಹೊಸ್ತಿಲನ್ನು ಮುಟ್ಟಿದಾಗ ಅವಳ ಕಲ್ಯಾಣಮಯ ಲಾವಣ್ಯಾತಿಶಯವನ್ನೂ, ಗಂಭೀರವಾದ ಮಂದಗಮನವನ್ನೂ, ಘನತೆಯಿಂದ

ಕೂಡಿದ ನಡೆ ನುಡಿಗಳನ್ನೂ; ನ್ಯಾಯದಿಂದ ಕೂಡಿದ ರೀತಿನೀತಿಗಳನ್ನೂ ಕುರಿತು ಎಲ್ಲೆಲ್ಲೂ ಪ್ರಶಂಸನೀಯ ವ್ಯಾಖ್ಯಾನಗಳು ಕೇಳಿಬರುತ್ತಿದ್ದುವು. ಅವಳ ಗುಣಗಾನವನ್ನು ಕೇಳಿ—ಅವಳನ್ನು ನೋಡುವುದಕ್ಕೆ ಮುನ್ನಮೇ "ಈ ಲೋಕ ಸುಂದರಿಯನ್ನು ನಾನು ವಿವಾಹವಾಗಲೇಬೇಕು" ಎಂದು ಹಠತೊಟ್ಟು ಇಲ್ಲಿಯ ರಾಜಕುಮಾರನು ಅನ್ನ ನೀರುಗಳನ್ನು ತೊರೆದು ವಿರಹತಾಪದಿಂದ ಕೊರಗಿ ಕೃಶನಾದನು. ಈ ನಾಡಿನ ಅರಸನು, ಪ್ರಣಯಾಭಿಲಾಷಿಯಾದ ತನ್ನ ಕುಮಾರನು ದಿನೇ ದಿನೇ ಕೃಶನಾಗುತ್ತಿರುವುದನ್ನು ಕಂಡು, ಕಾತುರನಾಗಿ ನನ್ನನ್ನು ಸನ್ನಿಧಿಗೆ ಕರೆಸಿಕೊಂಡು, "ನವಮೋಹನಾಂಗಿಯೆಂದು ರಾಜ್ಯವೆಲ್ಲ ಮುಕ್ತಕಂಠದಿಂದ ಹೊಗಳುತ್ತಿರುವ ನಿನ್ನ ಕುವರಿಯನ್ನು ರಾಜಕುಮಾರನಿಗೆ ಕೊಟ್ಟು ವಿವಾಹ ಮಾಡು; ನೀನು ಬಯಸಿದ ಬಳುವಳಿಯನ್ನು ಕೊಡಲು ನಾನು ಸಿದ್ಧನಿದ್ದೇನೆ. ರಾಜಕುಮಾರನು ಈ ವಿರಹತಾಪದಿಂದ ಮುಕ್ತನಾಗು ವಂತೆ ಮಾಡು' ಎಂದು ಎಷ್ಟೋ ಒತ್ತಾಯಪಡಿಸಿದ, ಕೊನೆಗೆ ನಾನು ವಿವಾ ಹಕ್ಕೆ ಸಮ್ಮತಿಸಿದೆ. ಈ ತರುಣಿಯು ರಾಜಕುಮಾರನನ್ನು ವರಿಸತಕ್ಕುದು ಎಂದು ರಾಜ್ಯದಲ್ಲೆಲ್ಲ ನಿರೂಪವು ಹೊರಟಿತು.

ವಿವಾಹವು ನನ್ನದೇ ಆದ ಈ ಗೃಹದಲ್ಲೆ ಅತ್ಯಂತ ವಿಜೃಂಭಣೆಯಿಂದಲೂ ಶಾಸ್ತ್ರ ಸಮ್ಮತವಾಗಿಯೂ ನೆರೆವೇರಿತು. ನಾಡಿನ ಅರಸರೇ ಬೀಗರು ಎಂದ ಮೇಲೆ ವೈಭವಕ್ಕೇನು ಕಡಿಮೆ? ಕ್ಷಣಕಾಲದ ಮುನ್ನ ಚಿಂದಿ ಬಟ್ಟೆಯನ್ನು ಧರಿಸಿದ್ದ ಈಕೆ–ದೈವ ವಿಲಾಸವು ಸರಿಯಾಗಿದ್ದಿದ್ದರೆ–ಈ ರಾಜ್ಯದ ರಾಣಿಯಾಗಿ ಸಿಂಹಾಸನದ ಮೇಲೆ ತನ್ನ ಪತಿಯೊಡನೆ ವಿರಾಜಿಸುತ್ತಿದ್ದು—ಭಯ, ಭಕ್ತಿ, ಗೌರವಗಳಿಂದ ಕೂಡಿದ ಈ ನಾಡಿನ ಪ್ರಜೆಗಳ ಸೇವೆಯನ್ನು ಪಡೆಯಬೇಕಾ ಗಿತ್ತು. ಆದರೆ ಅದಕ್ಕೆ ಪ್ರತಿಯಾಗಿ ಅವಳೀಗ ತನ್ನ ಕೂಳಿಗೆ ಗತಿಯಿಲ್ಲದೆ, ಉಟ್ಟು ತೊಡಲು ಬಟ್ಟೆಗೆ ಗತಿಯಿಲ್ಲದೆ ಬಡತನದ ಬಲೆಯಲ್ಲಿ ಸಿಲುಕಿ ದುರ್ಭರ ಸಂಕಟಕ್ಕೊಳಗಾಗ ಬೇಕಾಯಿತು. ಅದಕ್ಕೆ ಅವಳಾಗಲಿ, ನಾನಾಗಲಿ ಕಾರಣ ರಲ್ಲ. ನಾವು ನಿರಪರಾಧಿಗಳು; ಪಾಪಲೇಶವನ್ನೂ ಅರಿಯದವರು. ಆದರೂ ಹೀಗೇಕಾಯಿತೆಂದು ನಿಮಗೆ ತೋರುತ್ತದೆಯಲ್ಲವೆ? ಕೇಳಿ, ಮುಂದಿನ ಕಥೆ ಯನ್ನು :

"ವಿವಾಹವು ಸಾಂಗೋಪಾಂಗವಾಗಿ ಈ ಗೃಹದಲ್ಲೇ ಮುಗಿದ ಮೇಲೆ ಸಕಲ ರಾಜಮರ್ಯಾದೆಗಳೊಂದಿಗೆ ಈಕೆಯನ್ನು ಮನೆ ತುಂಬಿಸಿಕೊಳ್ಳುವುದಕ್ಕಾಗಿ ಅರಮನೆಗೆ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಕರೆದುಕೊಂಡು ಹೋದರು. ನೂತನ ದಂಪತಿಗಳನ್ನು ನಿಷೇಕಕ್ಕಾಗಿ ದಿವ್ಯಾಲಂಕಾರಮಯವಾದ ಶಯ್ಯಾಗೃಹವನ್ನು ಸೇರಿಸಿ, ಕದವನ್ನು ಮುಚ್ಚಿ ಬಂಧುಮಿತ್ರರೆಲ್ಲರೂ ತಂತಮ್ಮ ನಿವೇಶನಗಳನ್ನು ಸೇರಿದರು. ಆ ವೇಳೆಗೆ ಸರಿರಾತ್ರಿಯು ಸಮೀಪಿಸಿತ್ತು. ರಾಜಕುಮಾರನು ತನ್ನ ಪ್ರೀತಿಯ ಸತಿಯನ್ನು ಕಲೆತು ಆನಂದಾಬ್ಧಿಯಲ್ಲಿ ಈಜಾಡಬೇಕೆಂದು ಹವಣಿಸುತ್ತಿದ್ದನು. ಆದರೆ ಅಷ್ಟರಲ್ಲೇ ಶಯ್ಯಾಗೃಹದಲ್ಲಿ ಏನೋ ಗಲಭೆಯುಂಟಾದಂತೆ ಹೊರಗಡೆ ಪಹರೆಯಿದ್ದ ಸಿಪಾಹಿಗಳಿಗೆ ಕೇಳಿಸಿತು ಅವರು ಶಯ್ಯಾಗೃಹದಬಳಿ ಹೋದರು, ಬಾಗಿಲು ತಟ್ಟಿದರು ; ಆದರೆ ತೆಗೆಯಲಿಲ್ಲ. ಒಳಗಡೆ ಅಗುಳಿಹಾಕಿತ್ತು, ವಿಧಿಯಿಲ್ಲದೆ ಬಲಪ್ರಯೋಗಮಾಡಿ ಸಿಪಾಯಿಗಳು ಬಾಗಿಲನ್ನು ತೆಗೆದರು. ಆಗ ಅವರು ಕಂಡ ದೃಶ್ಯವು ಅತಿಘೋರವೂ ಚಿಂತಾಜನಕವೂ ಆಗಿದ್ದಿತು. ಸಿಪಾಹಿಗಳ ಎದೆಯು ಝುಮ್ಮೆಂದಿತು. ರಾಜಕುಮಾರನ ತಲೆ ಕಡಿಯಲ್ಪಟ್ಟು ದೂರವಾಗಿ ಬಿದ್ದಿದೆ, ಅವನ ಮುಂಡವು ನೆಲದ ಮೇಲೆ ರಕ್ತದ ಹೊಳೆಯನ್ನು ಹರಿಸುತ್ತಿದೆ.

ಆ ರಕ್ತದ ಹೊಳೆಯಲ್ಲಿ ತಲೆಗೂದಲು ಕೆದರಿಕೊಂಡು ಈಜಾಡಿ ನೂತನ ವಧು ಎದೆ ಬಿರಿವಂತೆ ಪ್ರಲಾಪ ಮಾಡುತ್ತಿದ್ದಾಳೆ. ಈ ಕಠೋರ ದೃಶ್ಯವನ್ನು ಕಂಡು ಸಿಪಾಹಿಗಳು ಗಡಗಡನೆ ನಡುಗಿಹೋದರು. ಈ ಹೃದಯವಿದ್ರಾವಕ ಸಮಾಚಾರವು ರಾಜನ ಕಿವಿಯನ್ನು ಮುಟ್ಟಿತು. ಅವನು ಶೋಕ ಸಂತಪ್ತನಾಗಿ ಎದೆಯನ್ನು ಬಡಿದುಕೊಳ್ಳುತ್ತ ಶಯ್ಯಾಗೃಹದ ಬಳಿ ಬಂದು ಸೇರಿದನು. ನಿಮಿಷಾರ್ಧದಲ್ಲಿ ಈ ಕಠೋರ ದುರ್ಘಟನೆಯ ವದಂತಿಯು ಎಲ್ಲೆಲ್ಲೂ ಕಾಡ್ಗಿಚ್ಚಿನಂತೆ ಹಬ್ಬಿತು. ಮಂತ್ರಿ, ಸಭಾಸದರು, ಪುರಪ್ರಮುಖರು, ವರ್ತಕಮಂಡಳಿಯವರು, ಗಾಯಕರು, ನರ್ತಕಿಯರು, ಅರಮನೆಯ ಊಳಿಗದವರು ಎಲ್ಲರೂ ಶಯ್ಯಾಗೃಹದ ಬಳಿ ಬಂದು ತುಂಬಿಹೋದರು. ಆ ಚಿಂತಾಜನಕ ಕೊಲೆಯನ್ನು ಕಂಡು, ರಾಷ್ಟ್ರದ ಆಧಿಪತ್ಯಕ್ಕೆ ಮೀಸಲಾದ ಅಂಕುರವು ನಾಶಹೊಂದಿತೆಂದು, ಶೋಕಾಬ್ಧಿಯಲ್ಲಿ ಮುಳುಗಿದರು. ಆದರೆ ಯಾರೊಬ್ಬರೂ ಈ ವಿಚಿತ್ರ ಸಮಸ್ಯೆ

ಯನ್ನು ಬಿಡಿಸಲಾರದೆ ಹೋದರು. ರಾಜಕುಮಾರನೂ ಅವನ ನೂತನ ಪತ್ನಿಯೂ ಒಬ್ಬರನ್ನೊಬ್ಬರು ಅಖಂಡವಾಗಿ ಪ್ರೀತಿಸುತ್ತಿದ್ದರು. ಆದರೂ ಈ ಘೋರ ಕೊಲೆಯು ನಡೆದುದು ಹೇಗೆ? ಬಾಗಿಲನ್ನು ಒಳಗಡೆಯಿಂದ ಭದ್ರ ಪಡಿಸಿತ್ತು; ಹೊರಗೆ ಪಹರೆಯವರು ಎಚ್ಚತ್ತೇ ಇದ್ದರು. ಶಯ್ಯಾಗೃಹದೊಳಗೆ ಒಂದು ನೊಣವೂ ಸುಳಿದು ಹೋಗುವಂತಿರಲಿಲ್ಲ. ಹಾಗಿದ್ದರೂ ಈ ಮಹತ್ತರ ಕ್ಲೇಶಕಾರಕ ಕೊಲೆಗೆ ಅವಕಾಶವೇನು? ನೂತನ ವಧುವು ತನ್ನ ಕರುಳು ಕಿತ್ತು ಹೋಗುವಂತೆ ತೋರಿಸುತ್ತಿದ್ದಳು. ಆ ಪ್ರಲಾಪವನ್ನು ಕೇಳಿ ಎಂತಹ ಕಠಿಣಾತ್ಮನ ಎದೆಯೂ ಕರಗಿ ನೀರಾಗಿ ಹೋಗಬೇಕು. ಆದರೂ ಅವಳೇ ಈ ಘೋರ ಕೃತ್ಯಕ್ಕೆ ಕಾರಣಳಾಗಿರಬಹುದೇ? ಶಯ್ಯಾಗೃಹವನ್ನು ಹೊಕ್ಕಾಗ ತನ್ನೊಡನೆ ರಹಸ್ಯವಾಗಿ ಕತ್ತಿಯನ್ನು ಹೊತ್ತು ತಂದಿರಬಹುದೇ? ಅವಳನ್ನು ಪ್ರೀತಿಸುವ ಉಪಪತಿಯು ಈ ಕೊಲೆಗೆ ಅವಳನ್ನು ಪ್ರೇರೇಪಿಸಿರಬಹುದೇ? ನೂರು ಜನರು ನೂರು :ವಿಧವಾಗಿ ಯೋಚಿಸಿ ನೋಡಿದರು. ಆದರೆ ಆ ಯೋಚನೆಗಳ ಎಳೆಗಳು ಸರಿಹೊಂದಲಿಲ್ಲ. ಊಹಿಸಿದ ಕಾರಣಗಳೆಲ್ಲ ನಂಬಲನರ್ಹವಾದುವೆಂದು ತೋರಿಬಂದುವು. ಹಾಗೂ ನೂತನ ಪತ್ನಿಯು ತನ್ನ ಪ್ರಿಯತಮನ ಕತ್ತನ್ನು ಕತ್ತರಿಸಿ ಹಾಕಿ ಅವನ ರಕ್ತದಲ್ಲಿ ಬಿದ್ದು ಹೊರಳಾಡುವುದು ನಿಜವೇ? ಸಹಜವೇ? ಎಂದು ಆ ವಾದವನ್ನು ತಳ್ಳಿಹಾಕಿದರು.

ಆದರೆ ಪುತ್ರಶೋಕದಿಂದ ಕಂಗೆಟ್ಟಿದ್ದ ರಾಜನ ತೀರ್ಮಾನವೇ ಬೇರೆ ತೆರನಾಗಿದ್ದಿತು. ಏನೇನೋ ಯೋಚಿಸಿ ಕೊನೆಗವನು ರಾಜಕುಮಾರನ ತಲೆಯು ಕಡಿದುಬಿದ್ದಂತೆ ಇವಳ ತಲೆಯನ್ನೂ ಹಾಗೆಯೇ ಕಡಿದುಹಾಕಿ ಎಂದು ಕಠೋರವಾದ ಆಜ್ಞೆಯನ್ನು ಹೊರಡಿಸಿದನು. ಆ ಆಜ್ಞೆಯು ಹೊರಟಿತೋ ಇಲ್ಲವೋ ತಕ್ಷಣವೇ ಸಿಪಾಯಿಗಳು ಆಮುನ್ನ ಕೇಳಿದ ಅದೇ ತೆರನಾದ ಕಿವಿ ತೂತುಬಿದ್ದು ಹೋಗುವಂತಹ ಭೀಕರವಾದ ಕೂಗು ಕೇಳಿ ಬಂತು. ಅದೆಲ್ಲಿಂದ ಬಂದಿತೆಂದು ಯಾರಿಗೂ ಗೊತ್ತಾಗಲಿಲ್ಲ. ಮತ್ತೊಮ್ಮೆ 'ಕಡಿದು ಹಾಕಿ ಅವಳ ತಲೆಯನ್ನು' ಎಂದ. ಒಬ್ಬ ಸಿಪಾಯಿಯು ಅವಳ ತಲೆಯನ್ನು ಕಡಿಯಲು ಕತ್ತಿಯನ್ನು ಮೇಲಕ್ಕೆತ್ತಿದ. ಆದರೆ ಅವನ ಭುಜಕ್ಕೆ ನೇರವಾಗಿ ಮೇಲೆದ್ದ ಅವನ ಕೈ ಹಾಗೆಯೇ ನಿಂತಿತು. ಅದನ್ನು ಯಾರೋ ಬಲವಾಗಿ

ಅದುಮಿ ಹಿಡಿದಂತಾಯಿತು. ಅವನು ಕೂಗಿಕೊಂಡ. ಆದರೆ ಸುತ್ತ ನೋಡಿದರೂ ಯಾರೂ ಇರಲಿಲ್ಲ. "ಯಾರೀ ಅಶರೀರಗಳು!" ಎಲ್ಲರಿಗೂ ಅದೇ ಆಶ್ಚರ್ಯ! ಇದ್ದಕ್ಕಿದ್ದಂತೆ ಸಿಪಾಯಿಯ ಕೈಯಲ್ಲಿದ್ದ ಕತ್ತಿಯು ಗಾಳಿಯಲ್ಲಿ ಹಾರಾಡತೊಡಗಿತು. ರಾಜನಾದಿಯಾಗಿ ಎಲ್ಲರೂ ಕೌತುಕದಿಂದ ನೋಡುತ್ತಿದ್ದಂತೆಯೇ ಕಣ್ಣುಮುಚ್ಚಿ ತೆರೆವಷ್ಟರಲ್ಲಿ ನಿರಾಧಾರವಾಗಿ ಹಾರಾಡುತ್ತಿದ್ದ ಆ ಕತ್ತಿ ಸಿಪಾಯಿಯ ತಲೆಯನ್ನು ಕತ್ತರಿಸಿ ರಾಜನ ಕಾಲ ಬಳಿ ಎಸೆಯಿತು. ಯಾರಿಗೂ ಇದರ ಅರ್ಥವೇ ಆಗಲಿಲ್ಲ. ಆಗ ಕತ್ತಿಯು ರಾಜನನ್ನು ಅಟ್ಟಿಸಿಕೊಂಡು ಹೋಯಿತು. ಅವನು ಅಲ್ಲಿ ನಿಲ್ಲಲಾರದೆ 'ಬದುಕಿದೆಯಾ ಬಡಜೀವವೇ?' ಎಂದು ಓಡಿಹೋಗಿ ಅರಮನೆಯಲ್ಲಿ ಅವಿತುಕೊಂಡ. ಭಯಗೊಂಡ ಉಳಿದವರೆಲ್ಲ ಕಾಲಿಗೆ ಬುದ್ಧಿ ಹೇಳಿದರು. ಅತ್ಯಲ್ಪಕಾಲದಲ್ಲಿ ಕೆಲ ಗಂಟೆಗಳ ಮುನ್ನ ಅತ್ಯಂತ ವೈಭವಭರಿತವಾಗಿದ್ದ ಆ ಶಯ್ಯಾಗೃಹವು ಈಗ ಸ್ಮಶಾನ ಸದೃಶವಾಗಿ ಶೂನ್ಯತೆಯ ಕವಚವನ್ನು ತೊಟ್ಟಿತು.

ಉಸಿರನ್ನು ಉಳಿಸಿಕೊಳ್ಳಲೋಸುಗ ಓಡಿಹೋದ ರಾಜನು 'ಆ ವಧುವನ್ನು ಅರಮನೆಯಿಂದ ಆಚೆ ತಳ್ಳಿಬಿಡಿ; ಅವಳು ಭೂತಳೋ, ಪ್ರೇತಳೋ, ಪಿಶಾಚಿಯೋ ಆಗಿರಬೇಕು. ಇಲ್ಲದಿದ್ದರೆ ಕತ್ತಿಯೆಂದರೇನು? ಗಾಳಿಯಲ್ಲಿ ತೂರಾಡುವುದೆಂದರೇನು? ಕೊರಳು ಕತ್ತರಿಸುವುದೆಂದರೇನು? ಅವಳೊಬ್ಬ ಮಾಯಗಾತಿ! ಸ್ವಲ್ಪ ಹೆಚ್ಚು ಕಡಿಮೆಯಾಗಿದ್ದರೆ ಆ ಕತ್ತಿಯು ಆ ತೆರನೆ ಕಲ್ಪನಾತೀತವಾಗಿ ನನ್ನನ್ನೂ ಅಟ್ಟಿ ಬಂದ ಕತ್ತಿಯು ನನ್ನ ಕೊರಳನ್ನು ತರಿದು ಬಿಡುತ್ತಿದ್ದಿತು' ಎಂದು ತಾನಿದ್ದಲ್ಲಿಂದಲೆ ಆಜ್ಞೆಯನ್ನು ಹೊರಡಿಸಿದನು.

ರಾಜಾಜ್ಞೆಯಂತೆ ನನ್ನ ಈ ಕುಮಾರಿಯನ್ನು ಸೇವಕಿಯರು ಕರೆತಂದು ನನ್ನ ಮನೆಯಲ್ಲಿ ಬಿಟ್ಟರು. ಅಂದಿನಿಂದ ಅವಳು ಇದುವರೆಗೆ ಇಲ್ಲಿಯೇ ಇದ್ದಾಳೆ. ಆ ದುರ್ದಿನದಂದು ಯಾರಿಂದಲೂ ಬಗೆಹರಿಸಲಾಗದ ಆ ದುರ್ಘಟನೆ ನಡೆದು ಹೋದಂದಿನಿಂದ – ಅದರ ವಿವರಗಳೆಲ್ಲ ನಾಡ ಮೂಲೆ ಮೂಲೆಗಳೆಲ್ಲ ಕಾಡ್ಗಿಚ್ಚಿನಂತೆ ಹಬ್ಬಿತು. ಈ ತೆರನಾಗಿ ರಾಜಕುಮಾರನು ಕೊಲೆಯುಂಡುದನ್ನು ಕಂಡು ಕೇಳಿದವರೆಲ್ಲರೂ ಅಂದಿನಿಂದ ನನ್ನ ಜನ್ಮ ಶತ್ರುಗಳಾದರು. ಈ ನಗರದಲ್ಲಿರುವವರಂತೂ ನಾನೋ ಅಥವಾ ಇವಳೋ, ನಮ್ಮಿಬ್ಬರಲ್ಲಿ ಒಬ್ಬರು

ರಾಜಕುಮಾರನ ಕೊಲೆಗೆ ನಿಜವಾದ ಕಾರಣರೆಂದೂ, ಆ ತೆರನಾದ ಕೊಲೆಗೆ ನಮ್ಮ ಯಾವುದೋ ಅವ್ಯಕ್ತವಾದ ಮಂತ್ರಶಕ್ತಿಯೇ ಕಾರಣವೆಂದೂ ನಂಬಿದರು. ಹಾಗೇ ನಂಬಿದ ಮೇಲಂತೂ ನನ್ನನ್ನು ಕಂಡಾಗ ನಾನೊಬ್ಬ ಮಂತ್ರವಾದಿಯೆಂದೂ, ಅವಳನ್ನು ಕಂಡಾಗ ಅವಳು ಸಾಕ್ಷಾತ್ ಮೃತ್ಯುದೇವತೆಯೆಂದೂ ಅವರು ಎಣಿಸುತ್ತ ಬಂದರು. ಅವರ ದೃಷ್ಟಿಯಲ್ಲಿ ನಾವು ಪರಮ ಪಾಪಿಗಳಾಗಿಯೂ, ಪಾಷಾಣಮಯರಾಗಿಯೂ, ಪ್ರಳಯಾಂತಕರಾಗಿಯೂ, ಪ್ರೇತಪಿಶಾಚಿಗಳಾಗಿಯೂ ಕಂಡುಬಂದೆವು. ನಮ್ಮನ್ನು ಈ ದುರ್ಗತಿಗೆ ತಂದೊಡ್ಡಿದ ಆ ಅಶೀರಶಕ್ತಿ ಯಾವುದೆಂದು ನಮಗೇ ತಿಳಿಯದು. ಏನೂ ಅರಿಯದ ನಮ್ಮಂತಹ ನಿರಪರಾಧಿಗಳನ್ನು ಇಡೀ ರಾಜ್ಯ ಶತ್ರುಗಳಂತೆ ಮಾಡಿದ ಆ ಅಶೀರ ಶಕ್ತಿ ಯಾವುದೋ–ಎಲ್ಲಿಂದ ಬಂದಿತೋ–ಏಕೆ ಬಂದಿತೋ ನಮಗೇ ಬಗೆಹರಿಯದ ಸಮಸ್ಯೆಯಾಗಿದೆ. ಈ ಪ್ರಪಂಚದಲ್ಲಿ ಎಷ್ಟೋ ಜನರು ವಿಧಿವಿಲಾಸದಿಂದ ದುರ್ದೆಸೆಗೆ ಗುರಿಯಾದುದುಂಟು. ಆದರೆ ನಮ್ಮಂತೆ ಕಾರಣವೇ ತಿಳಿಯದ ದುರ್ದೆಸೆಗೆ ಒಳಗಾದವರು ಅಪರೂಪ–ಯಾರೂ ಇಲ್ಲವೇ ಇಲ್ಲವೆನ್ನಬಹುದು.

'ರಾಜಕುಮಾರನ ಉತ್ತರಕ್ರಿಯೆಗಳೆಲ್ಲವೂ ಮುಗಿದುವು. ಸಲವತ್ತು ದಿವಸಗಳ ಕಾಲ ಶೋಕಪ್ರದರ್ಶನವೂ ಆಯಿತು. ಬಳಿಕ ರಾಜನು ಪ್ರಧಾನಿ ಪ್ರಮುಖರನ್ನು ಕುರಿತು 'ಮುಂದೇನು ಮಾಡುವುದು ?' ಎಂದು ಕೇಳಿದನು. ಪ್ರಧಾನಿಯು 'ಆ ತಂದೆ ಮತ್ತು ಮಗಳು–ಇಬ್ಬರೂ ಮಂತ್ರವಾದಿಗಳು. ಅವರ ಮನೆಯನ್ನು ಸುತ್ತುವರಿದು ಅವರಿಬ್ಬರನ್ನೂ ಕೊಂದುಹಾಕಿ ಅವರ ಸ್ವತ್ತನ್ನು ರಾಜ್ಯದ ಭಂಡಾರಕ್ಕೆ ಸೇರಿಸಿಕೊಂಡು ಬಿಡಬೇಕು' ಎಂದು ಸಲಹೆ ನೀಡಿದನು. ಉಳಿದವರೆಲ್ಲರೂ 'ಅದೇ ಸರಿ' ಎಂದು ತಲೆದೂಗಿದರು. ರಾಜನೂ ಸಮ್ಮತಿಸಿದನು. ಸುಮಾರಾಗಿ ದೊಡ್ಡದಾದ ಒಂದು ಸೈನ್ಯವೇ ನಮ್ಮ ಮನೆಯನ್ನು ಸುತ್ತುವರಿಯಿತು. ಪ್ರಧಾನಿಯೂ, ಸೇನಾಧಿಪತಿಯೂ ಮುಂದಾಳುಗಳಾಗಿ ಬಂದರು. 'ಮನೆಯನ್ನು ಬಿಟ್ಟು ಹೊರಗೆ ಬನ್ನಿ' ಎಂದು ಪ್ರಧಾನಿ ಅರಚಿದನು. ಮನೆಯೊಳಗೆ ಬರಲು ಅವನಿಗಾಗಲಿ, ಸೇನಾಧಿಪತಿಗಾಗಲಿ, ಸೈನಿಕರಿಗಾಗಲಿ ಧೈರ್ಯವಿರಲಿಲ್ಲ. ಅರಮನೆಯಲ್ಲಿ ನಡೆದ ಆ ವಿಚಿತ್ರ ದುರ್ಘಟನೆಯನ್ನು ಅವರು ಕಣ್ಣಾರೆ ಕಂಡು ಭಯಗೊಂಡಿದ್ದರು. ಕೇವಲ ಪ್ರಧಾನಿಯ ಬಲವಂತಕ್ಕೆ

ಅವರೆಲ್ಲ ಅಲ್ಲಿಗೆ ಬಂದಿದ್ದುದು. 'ಹೊರಗೆ ಬನ್ನಿ ; ಇಲ್ಲದಿದ್ದರೆ ಸೈನಿಕರು ಒಳ ನುಗ್ಗುತ್ತಾರೆ' ಎಂದು ಪ್ರಧಾನಿ ಮತ್ತೆ ಗಟ್ಟಿಯಾಗಿ ಅರಚಿದ. ನಾವು ಹೊರಗೆ ಬರಲಿಲ್ಲ. ಬರಬೇಕಾದ ಪ್ರಮೇಯವೂ ಇರಲಿಲ್ಲ. ಆದರೆ ಭಗವಂತನನ್ನು ಕುರಿತು ಪ್ರಾರ್ಥನೆಯನ್ನು ಮಾತ್ರ ಮಾಡಿದೆವು :

'ಹೇ ದಯಾಳು ಭಗವಂತ! ಇದೇನು ನಿನ್ನ ವಿಚಿತ್ರ ಲೀಲೆ! ನಮ್ಮ ಯಾವ ತಪ್ಪಿಗೆ ನಮ್ಮನ್ನು ಇಂತಹ ಘೋರ ಶಿಕ್ಷೆಗೆ ಅಡಿಗಡಿಗೆ ಗುರಿಮಾಡುತ್ತಿದ್ದೀಯಪ್ಪ! ಈ ಕಿರಾತಕ ಸೈನಿಕರ ಕೈಯಲ್ಲಿ ನಮ್ಮನ್ನು ಸಿಲುಕಿಸಿ ಅದೇನು ನೋಟವನ್ನು ನೋಡುತ್ತ ನಲಿಯುವೆಯಪ್ಪ!' ಹೌದು! ನಮ್ಮ ಮೊರೆಯು ಆ ದಯಾಮಯ ಭಗವಂತನಿಗೆ ಕೇಳಿಸಿರಬೇಕು. ಅವನು ಆರ್ತತ್ರಾಣ ಪಾರಾಯಣನಲ್ಲವೆ? ಕರುಣಾಸಾಗರನಾದ ಪರಮಾರ್ಥನು ತನ್ನ ಅಶರೀರ ದೂತರನ್ನು ಬಾನಂಗಳದಲ್ಲಿ ಅಟ್ಟಿದನು. ನಾನು ಈ ಮನೆಯ ಮಹಡಿ ಕಿಟಕಿಯಿಂದ ನೋಡುತ್ತಿದ್ದೇನೆ. ನನ್ನ ಪಕ್ಕದಲ್ಲಿ ಈ ದೀನ ಕುವರಿಯೂ ನಿಂತು ನೋಡುತ್ತಿದ್ದಾಳೆ. ಆಗ ನಡೆದ ವಿಸ್ಮಯಜನಕ ಕೌತುಕವೇನು? ಅರಮನೆಯಲ್ಲಿ ಗಾಳಿಯಲ್ಲಿ ನಿರಾಧಾರವಾಗಿ ತೂರಿಬಂದಂತೆಯೇ ಒಂದು ಕತ್ತಿಯು ತೂರಿ ಬಂದು ಪ್ರಧಾನಿಯ ಕೊರಳನ್ನು ಕತ್ತರಿಸಿ ಎಸೆಯಿತು. ಬಳಿಕ ಸೇನಾಧಿಪತಿಯ ತಲೆಯೂ ಹಾರಿಹೋಯಿತು. ನಾಲ್ಕು ದಿಕ್ಕಿನಿಂದಲೂ ಪಟಪಟನೆ ಕಲ್ಲು ಗುಂಡುಗಳು ಸೈನಿಕರ ಮೇಲೆ ಬಿದ್ದು ಅನೇಕರನ್ನು ಕೊಂದು ಉಳಿದವರನ್ನು ಮೃತ್ಯುಶಯ್ಯೆಯಲ್ಲಿ ಮಲಗಿಸಿದುವು.

ಇಷ್ಟಾದರೂ ನಮ್ಮಿಬ್ಬರಿಗೂ ಅಶರೀರಗಳ ವಿಚಾರವು ಎಳ್ಳಷ್ಟೂ ತಿಳಿಯದು. ಸೈನಿಕರು ನಮ್ಮ ಮನೆ ಬಳಿ ಬರುವುದಕ್ಕೆ ಮುನ್ನ ಅವರು ಬರುವರೆಂದಾಗಲೀ ಬಂದ ಮೇಲೆ ಪ್ರಧಾನಿ ಸೇನಾಧಿಪತಿಗಳು ಆ ಬಗೆಯಾಗಿ ಅಶರೀರ ಹಸ್ತವು ಹಿಡಿದ ಕತ್ತಿಗೆ ಬಲಿಯಾಗುವರೆಂದಾಗಲಿ, ಸೈನಿಕ ತಂಡವು ಆ ತೆರನೆ ಕಲ್ಲುಗಳಿಂದ ಹೊಡೆತ ತಿಂದು ಕೆಳಗುರುಳಿ ಪ್ರಾಣ ಕಳೆದುಕೊಳ್ಳುವರೆಂದಾಗಲಿ ನಮಗೆ ತಿಳಿಯದು. ಇರಲಿ; ಇದೆಲ್ಲವೂ ಕ್ಷಣಾರ್ಧದಲ್ಲಿ ನಡೆದುಹೋದ ವಿಚಾರ. ಇದಕ್ಕೂ ಹೆಚ್ಚಿನ ಅತಿಶಯದ ಮತ್ತೊಂದು ಕೌತುಕವು ನಡೆಯಿತು. ಅದಾಗಿ, ಮರುಕ್ಷಣದಲ್ಲೇ ಸಾಧಾರಣವಾದ ಮಾನವಧ್ವನಿಗೆ ಸಹಸ್ರಪ್ರಮಾಣ

ದಲ್ಲಿ ಹೆಚ್ಚಿದ ಭಯಂಕರ ಧ್ವನಿಯೊಂದು. ‘ ಆ ನವ ಮೋಹನಾಂಗಿಯನ್ನು ಮುಟ್ಟುವವರಾರು ? ಅವಳನ್ನಾಗಲಿ ಅವಳ ತಂದೆಯನ್ನಾಗಲಿ ಮುಟ್ಟಿದಲ್ಲಿ ಅವರ ಕತ್ತು ತಕ್ಷಣವೇ ಕತ್ತಿಗೆ ಬಲಿಯಾಗುತ್ತದೆ....ಎಚ್ಚರಿಕೆ ! ಎಚ್ಚರಿಕೆ ! ಏಯ್ ! ಹೇಡಿ ರಾಜ ! ಒಮ್ಮೆ ಕತ್ತಿಯಿಂದ ತಪ್ಪಿಸಿಕೊಂಡು ಕೀಳು ಮಾನವನಂತೆ ಓಡಿಹೋಗಿ ಅಂತಃಪುರವನ್ನು ಹುದುಗಿಕೊಂಡೆ. ಮತ್ತೆ ಅದನ್ನೆಲ್ಲ ಮರೆತು ಪ್ರಧಾನಿಯ ಮಾತನ್ನು ಕೇಳಿ ಮೋಹನಾಂಗಿಯ ಮನೆಗೆ ಮುತ್ತಿಗೆ ಹಾಕಿ ಅವಳನ್ನೂ ಅವಳ ತಂದೆಯನ್ನೂ ಕೊಲೆಮಾಡಲು ಆಜ್ಞೆಯಿತ್ತೆ. ಫಲವೇನಾಯಿತು ? ನಿನ್ನವರೆಲ್ಲ ಕೊಲೆಯುಂಡು ಅವರ ಮನೆಯ ಮುಂದೆ ಬಿದ್ದಿದ್ದಾರೆ. ಈ ಸೂಚನೆಯನ್ನು ಉಲ್ಲಂಘಿಸಿ ಮೋಹನಾಂಗಿಯ ಗೊಡವೆಗೆ ಹೋಗುವುದಾದರೆ ನಿನ್ನ ಪರಿವಾರದವರಂತೆ ನೀನೂ ಹದ್ದು ಕಾಗೆಗಳಿಗೆ ಔತಣವಾದೀಯೆ–ಎಚ್ಚರಿಕೆ ! ಎಚ್ಚರಿಕೆ ! ಎಚ್ಚರಿಕೆ !’ ಎಂದು ಸಾರಿತು.

ಸಿಡಿಲಿನಂತೆ ಭಯಂಕರವಾದ ಆ ಅಮಾನುಷ ಲೋಕಾತಿರೇಕ ಧ್ವನಿಯನ್ನು ಕೇಳಿ ರಾಜನು ಗಡಗಡನೆ ನಡುಗಿದನು.

“ಅದೇ ಧ್ವನಿಯು ಮತ್ತೊಮ್ಮೆ ಕೂಗಿ ಹೇಳಿತು :”

‘ರಾಜ ! ತಿಳಿಯಿತೇ ? ಈ ಮಾತನ್ನು ಉಲ್ಲಂಘಿಸಿದರೆ ನಿನ್ನ ಮಗನಿಗಾದ ಗತಿಯೇ ನಿನಗೂ ಆದೀತು. ನೆನಪಿರಲಿ !’

“ರಾಜ ತತ್ತರಿಸಿ ಹೋದ. ಅವನು ತಕ್ಷಣ ತನ್ನ ರಾಜ್ಯದಲ್ಲೆಲ್ಲ ಒಂದು ನಿರೂಪವನ್ನು ಹೊರಡಿಸಿದ :

‘ಆ ನಿರ್ಭಾಗ್ಯ ತಂದೆ–ಮಗಳು ಇರುವ ಮನೆಯ ಬಳಿ ಯಾರೂ ಹೋಗಬಾರದು ; ಅವರೇನಾದರೂ ಹೇಳಬಯಸಿದರೆ ಅದಕ್ಕೆ ಕಿವಿಗೊಡಬಾರದು; ಅವರು ತಮ್ಮ ಮನೆಯಲ್ಲೆ ಇರಲಿ. ಅವರ ಗೋಜಿಗೆ ಯಾರೂ ಹೋಗಕೂಡದು.’

ರಾಜನ ನಿರೂಪವು ನಗರದಲ್ಲೆಲ್ಲ ಪ್ರಕಟವಾಯಿತು. ಆಗ ಕೆಲವರು ಸಮಯಸಾಧಕ ಮಾಟಗಾರರು, ಮಂತ್ರವಾದಿಗಳು, ಮಾಯಾವಿಗಳು, ಇಂದ್ರಜಾಲ, ಮಹೇಂದ್ರಜಾಲವನ್ನರಿತವರೆಂದು ಬಡಾಯಿ ಕೊಚ್ಚಿದ ಪ್ರಭೃತಿಗಳು ದೇಶವಿದೇಶಗಳಿಂದ ಬಂದು ರಾಜನ ದರ್ಶನವನ್ನು ಪಡೆದು ‘ನಾವು ಈ ಮಾಯೆಯನ್ನು ಹರಿದು ಚೆಲ್ಲುತ್ತೇವೆ. ಇವೆಲ್ಲ ಮಾಟಗಾರಿಕೆ ನಿಮ್ಮ ಕಣ್ಣಿಗೆ ಮಂಕು

ಬೂದಿ ಎರಚಿ, ಭೂತಪ್ರೇತಗಳನ್ನು ಆವಾಹನೆಗೊಳಿಸಿ ನಡೆಸುವ ಕೃತ್ಯಗಳು. ಅವುಗಳನ್ನೆಲ್ಲ ನಾವು ಓಡಿಸುತ್ತೇವೆ? ಎಂದೆಲ್ಲ ಹೇಳಿ ವೆಚ್ಚಕ್ಕೆಂದು ಅವನ ಭಂಡಾರದಿಂದ ಅಪಾರ ದ್ರವ್ಯವನ್ನು ಕರಗಿಸಿದರು. ಕೊನೆಗೆ ಅವರ ಪ್ರಯತ್ನ ಗಳೆಲ್ಲ ವಿಫಲವಾದುವು. ಇಂತಹ ಮಂತ್ರವಾದಿಗಳಲ್ಲಿ ಮುಖಂಡರಾದ ನಾಲ್ಕು ಜನರು ಏನೋ ಮಂತ್ರಗಳನ್ನುಚ್ಚರಿಸುತ್ತ ನಮ್ಮ ಮನೆ ಮುಂದೆ ಬಂದರು. ಅವರ ಭರವಸೆಯನ್ನು ಪಡೆದು ಹೊಸ ಪ್ರಧಾನಿಯು ಅರಸನ ಆಜ್ಞೆಯಂತೆ ಅವರನ್ನು ಹಿಂಬಾಲಿಸಿ ಬಂದ. ನಾವು ಮತ್ತೆ ಮಹಡಿಯ ಮೇಲುಗಡೆ ನಿಂತು ಕಿಟಕಿಯಿಂದ ಇಣಿಕಿ ನೋಡಿದೆವು. ಮತ್ತೆ ಅದೇ ಕೌತುಕ! 'ಹೊರಗೆ ಬಾ ಭೂತ! ಹೊರಗೆ ಬಾ ಪ್ರೇತ!' ಎಂದು ಮಂತ್ರವಾದಿಗಳು ನಾಲ್ಕು ದಿಕ್ಕುಗಳ ಲ್ಲಿಯೂ ತಮ್ಮ ಬೆತ್ತದಿಂದ ನೆಲವನ್ನು ಬಡಿಯತೊಡಗಿದರು. ಆಗ ಆಕಾಶ ಮಾರ್ಗವಾಗಿ ಖಡ್ಗವನ್ನು ಹಿಡಿದ ಅಶರೀರ ಹಸ್ತವೊಂದು ಕೆಳಗಿಳಿದು ಬಂದು 'ಇದೋ ಬಂದೆ, ಇದೋ ಬಂದೆ' ಎಂದು ಅಬ್ಬರಿಸಿ ಆ ನಾಲ್ಕು ಜನ ಮಂತ್ರ ವಾದಿಗಳ ತಲೆಗಳನ್ನೂ ಕಡಿದು ನಾಲ್ಕು ದಿಕ್ಕಿಗೂ ಎಸೆಯಿತು. ಇದನ್ನು ಕಂಡ ಪ್ರಧಾನಿಯು ಹೆದರಿ ನಿಷ್ಪ್ರೇಕಾಯನಾಗಿ ಹೋದ. ಓಡಿ ಹೋಗಲು ಆ ಹೇಡಿಗೆ ತ್ರಾಣವಿಲ್ಲದಂತಾಯಿತು. ಅಶರೀರ ಹಸ್ತವು 'ಪ್ರಧಾನಿ! ಏಕೆ ಓಡಲಾರೆ? ಬರುವಾಗ ಇದ್ದ ಪೌರುಷವು ಈಗೆಲ್ಲಿ ಮಾಯವಾಯಿತು? ಹುಚ್ಚು ಅರಸನ ಆಣತಿಯನ್ನು ಪಾಲಿಸಬಯಸುವವರಿಗೆಲ್ಲ ಇದೇ ಗತಿ!' ಎನ್ನುತ್ತ ಅವನ ತಲೆ ಯನ್ನೂ ಕತ್ತರಿಸಿ ಎಸೆಯಿತು. ಇದಾದನಂತರ ರಾಜನು ತೆಪ್ಪಗಾದ. ಈಗ ನಮ್ಮ ಹತ್ತಿರ ಯಾರೂ ಸುಳಿಯುವುದಿಲ್ಲ.

"ಇದಾದ ಬಳಿಕ ನನ್ನ ಕುತೂಹಲವು ಕೆರಳಿತು. ಒಂದಾನೊಂದು ದಿನ ನಾನು ಈ ತರಳೆಯನ್ನು ನನ್ನ ಬಳಿಗೆ ಕರೆದು ಮಗು! ನಿಜವಾಗಿ ನಡೆದು ದೇನು ಹೇಳಮ್ಮ!' ಎಂದು ಕೇಳಿದೆ. ಅವಳು 'ತಂದೆ! ನಿನ್ನ ಬಳಿಯೂ ನನಗೆ ರಹಸ್ಯವೇ? ಆ ದಿನ ರಾತ್ರಿ ನಾವು ಶಯ್ಯಾಗೃಹವನ್ನು ಹೊಕ್ಕ ಮೇಲೆ ನೆರೆದವರೆಲ್ಲರೂ ಹೊರಟುಹೋದರು. ನಾನು ಬಾಗಿಲನ್ನು ಮುಚ್ಚಿ ಅಗುಳಿ ಹಾಕಿದ್ದೆ. ನಾನೂ ನನ್ನ ಪತಿಯೂ ಹಂಸತೂಲಿಕಾತಲ್ಪದ ಮೇಲೆ ಪವಡಿ ಸಿದೆವು. ವಾಡಿಕೆಯ ಪ್ರಕಾರ ನಾನು ಬಳಿಯಲ್ಲೇ ಇದ್ದ ಅತ್ತರನ್ನು ತೆಗೆದು

ಆತನ ಗಲ್ಲಕ್ಕೆ ಹಚ್ಚಿದೆ. ಬಳಿಕ ತಾಂಬೂಲವನ್ನು ಕೊಡಹೋದೆ. ಆಗ ಇದ್ದಕ್ಕಿದ್ದಂತೆ ನಮ್ಮ ಶಯ್ಯಾಗೃಹದ ತಾರಸಿಯಲ್ಲಿ ಒಂದು ಬಿರುಕು ಕಾಣಿಸಿಕೊಂಡಿತು. ಅದರೊಳಗೆ ದೂರಿ ನವರತ್ನಖಚಿತವಾದ ಒಂದು ಸಿಂಹಾಸನವು ಕೆಳಗಿಳಿಯಿತು. ಸಿಂಹಾಸನದಲ್ಲಿ ದೇವತಾಗಣಕ್ಕೆ ಸೇರಿದವನಂತೆ ತೋರಿದ. ಸ್ಫುರದ್ರೂಪಿಯಾದ ತರುಣನೊಬ್ಬನು ಮಂಡಿಸಿದ್ದನು. ಅವನ ಕಿಂಕರರಿರಬಹುದೆಂದು ತೋರುತ್ತದೆ—ಮನುಷ್ಯ ದೇಹವನ್ನೂ, ಮೇಕೆಯ ಕಾಲುಗಳನ್ನು ಧರಿಸಿದ ನಾಲ್ಕು ಜನ ವಿಕರಾಳ ಸ್ವರೂಪಿಗಳು ಕತ್ತಿಯನ್ನು ಹಿಡಿದು ಶಯ್ಯಾಗೃಹದೊಳಗೆ ಪ್ರವೇಶಿಸಿ ನನ್ನ ತೆಕ್ಕೆಯಲ್ಲಿ ಸುಖವಾಗಿ ತನ್ಮಯನಾಗಿದ್ದ ನನ್ನ ತರುಣ ಪತಿಯನ್ನು ಬಲವಂತದಿಂದ ಹಿಡಿದೆಳೆದು ನೆಲದ ಮೇಲೆ ಅಪ್ಪಳಿಸಿದರು. ಅಷ್ಟೇ ನನಗೆ ತಿಳಿದಿದ್ದು ; ಆ ವೇಳೆಗೆ ಭಯಾರ್ತಳಾದ ನಾನು ಮೂರ್ಛೆ ಹೋಗಿದ್ದೆ. ನಾನು ಮೂರ್ಛೆ ತಿಳಿದು ಎದ್ದೇಳುವ ವೇಳೆಗೆ ಆ ಸಿಂಹಾಸನ, ಆ ನಾಲ್ಕು ಜನ ವಿಕರಾಳ ಸ್ವರೂಪಿಗಳು ಎಲ್ಲವೂ ಮಾಯವಾಗಿತ್ತು. ಮೇಲೆ ನೋಡಿದೆ ತಾರಸಿಯ ಬಿರುಕು ಮಾಯವಾಗಿ ಎಂದಿನಂತಿತ್ತು. ಬಳಿಯಲ್ಲಿ ನೋಡಿದೆ, ನನ್ನ ಪತಿ ಇರಲಿಲ್ಲ........ನೆಲದ ಕಡೆ ದೃಷ್ಟಿ ಹೊರಳಿಸಿದೆ. ಆಗ ನನಗೆ ಭೀಕರದ ದೃಶ್ಯವು ಕಂಡಿತು. ಪತಿಯ ಶಿರಸ್ಸನ್ನು ತುಂಡರಿಸಿ ಎಸೆದಿತ್ತು. ರಕ್ತವು ನೆಲವನ್ನೆಲ್ಲಾ ತೋಯಿಸಿತ್ತು. ವಿಷಣ್ಣ ವದನಳಾಗಿ, ಈ ವಿಪರೀತ ಪರಿಸ್ಥಿತಿಯನ್ನು ಕಂಡು ಹೆದರಿ ಪತಿಯಮೇಲೆ ಬಿದ್ದು "ಹೋ" ಎಂದು ಅರಚಿ ರಕ್ತದಲ್ಲಿ ಹೊರಳಾಡಿ ಮತ್ತೆ ಮೂರ್ಛೆ ಹೋದೆ. ಹೊರಗೆ ಎಷ್ಟೋ ಹೊತ್ತು ಕದವನ್ನು ಬಡಿಯುತ್ತಿದ್ದಿರಬಹುದೆಂದು ತೋರುತ್ತದೆ, ನಾನು ಮೂರ್ಛೆ ತಿಳಿದೆದ್ದಾಗ ಶಯ್ಯಾಗೃಹದ ಬಾಗಿಲು ಮುರಿದಿತ್ತು, ನನ್ನೆದುರಿಗೆ ಪಹರೆಯ ಶಿಪಾಹಿಗಳು ! "ಇದೇನು ?" ಎಂದು ಕೇಳುವ ಭಯಭ್ರಾಂತಿ ಭಾವನಾಭರಿತ ದೃಷ್ಟಿಯಿಂದ ಅವರು ನನ್ನನ್ನು ನೋಡುತ್ತಾ---ನಾನು ಅದೇ ದೃಷ್ಟಿಯಿಂದ ಅವರನ್ನು ನೋಡುತ್ತಿದ್ದೇನೆ. ಇದಾದಬಳಿಕ ಮುಂದೆ ನಡೆದದ್ದೆಲ್ಲ ನಿನಗೇ ಗೊತ್ತಿದೆ."

"ಚಕ್ರವರ್ತಿ ಕುಮಾರಾ ! ಇದೇ ನಡೆದ ವಿಚಾರ, ಈಗ ಜನರು ನಮ್ಮೊಡನೆ ಸೇರುವುದಿಲ್ಲ ; ನಮ್ಮನ್ನು ಕಣ್ಣೆತ್ತಿಯೂ ನೋಡುವುದಿಲ್ಲ ; ನಾನು ಭಿಕ್ಷೆ

ಗೆಂದು ಹೋದಾಗ ಕನಿಕರದಿಂದ ಒಂದು ಕುರುಡು ಕವಡೆಯನ್ನೂ ಕೊಡುವುದಿಲ್ಲ. ಹೀಗೆ ವರ್ಷಗಳು ಉರುಳಿದುವು. ನನ್ನನ್ನು ಕಂಡವರೆಲ್ಲ ನಾನೊಂದು ವಿಷಕುಂಡವೆಂದು ದೂರ ದೂರ ಸರಿದು ಹೋಗುವುದನ್ನು ಕಂಡು ನನಗೆ ಬೇಸರವಾಯಿತು. ಇಷ್ಟು ನಿಸ್ಪೃಹನಾಗಿದ್ದೂ, ಇಷ್ಟು ಪಾಪ ವಿವರ್ಜಿತನಾಗಿದ್ದೂ ನನ್ನನ್ನು ನೋಡಿ ಈ ಜನರೇಕೆ ಹೀಗೆ ಅಸಹ್ಯದಿಂದ ದೂರ ಸರಿಯುವರೆಂದು ನನಗರ್ಥವಾಗಲಿಲ್ಲ, ಒಂದುದಿನ ರಾತ್ರಿ ಅತೀವ ಬೇಸರದಿಂದ ನಾನು ಭಗವಂತನದ ಮೊರೆಯಿಟ್ಟು ಕಣ್ಣೀರು ಸುರಿಸುತ್ತ ಬೇಡಿಕೊಂಡೆ: ದಯಾಮಯ! ನನ್ನನ್ನು ನೋಡಲು ಬಯಸದ, ನಿರಪರಾಧಿಯಾದ ನನ್ನಲ್ಲಿ ಕನಿಕರಗೊಳ್ಳದ ಈ ಬೆಂದೆದೆಯ ಕಠಿಣಾತ್ಮರನ್ನು ನಾನೇಕೆ ನೋಡಬೇಕು? ನಿನ್ನ ಅಪಾರ ಕರುಣೆಯಿಂದ ನನ್ನ ದೃಷ್ಟಿಯನ್ನು ಲಯಮಾಡು; ಆದರೆ ನಾನು ಹೋಗುವೆಡೆಯಲ್ಲಿ ನಾನೂರಿಕೊಂಡು ನಡೆವ ಕೋಲಿನಲ್ಲಿ ನಿನ್ನ ಅದ್ಭುತ ಶಕ್ತಿಯನ್ನು ತುಂಬಿ ನನ್ನನ್ನು ನಡೆಸು. ಆ ಭಾರವನ್ನು ನೀನು ಹೊರಲಾರದೆ ಹೋದರೆ ನನ್ನನ್ನು ಗುಳಿಗೆಗೆ ತಳ್ಳಿ ಮಣ್ಣು ಮುಚ್ಚಿಬಿಡು? ದೈವ ಮಾಯೆ! ಮರುದಿನ ಪ್ರಾತಃಕಾಲ ನಾನು ಏಳುವ ವೇಳೆಗೆ ನನಗೆ ಕಣ್ಣು ಕಾಣಿಸಲಿಲ್ಲ. ಗುಳಿಯಲ್ಲೇ ಕೈ ಹಾಕಿದೆ, ಊರುಗೋಲು ಸಿಕ್ಕಿತು, ಅದನ್ನು ಹಿಡಿದು ನಡೆದೆ; ನಂಬಿಕೆ ಬಂತು ವೇಗವಾಗಿ ನಡೆದೆ. ಯಾವ ಅಡಚಣೆಯೂ ಇರಲಿಲ್ಲ; ಜನಭರಿತವಾದ ಪೇಟಿಸ್ಥಳಕ್ಕೆ ಹೋದೆ; ನಾನು ಯಾವುದರ ಮೇಲೂ ಯಾರಮೇಲೂ ಢಿಕ್ಕಿ ಹೊಡೆಯಲಿಲ್ಲ. ನನಗೆ ಕಣ್ಣು ಕಾಣಿಸದೆಂದು ಯಾರಿಗೂ ಗೊತ್ತಿಲ್ಲ. ಈ ಮನೆಯಿಂದ ಪೇಟೆಯವರೆಗೆ ಎಷ್ಟೋ ಹಳ್ಳಕೊಳ್ಳಗಳಿವೆ, ಆದರೆ ನಡೆಸುವವನು ಒಬ್ಬ ಹೊಣೆಗಾರಿಕೆ ಹೊತ್ತಿದ್ದಾನೆ, ಅವನೇ ನನ್ನನ್ನು ನಡೆಸುತ್ತಿರುವುದು; ಅವನ ಆಸರೆಯಿಂದಲೇ ನಾನು ನಡೆಯುತ್ತಿರುವುದು.

"ಹೀಗೆ ಎಷ್ಟೋದಿವಸ ಕುರುಡು ಕವಡೆಯೂ ಸಿಕ್ಕದೆ ನಾನೂ ನನ್ನ ಮಗಳೂ ಹಸಿವನ್ನು ತಡೆಯಲಾರದೆ ಸಂಕಟದಿಂದ ನರಳಿದ್ದೇವೆ. ಆ ಕನಿಕರದ ಕನ್ನಿಕೆಗೆ ಮೈಮೇಲೆ ತೊಡಲು ಹರಿಯದ ಒಂದು ಬಟ್ಟೆಯಿಲ್ಲ. ಚಕ್ರವರ್ತಿ ಕುಮಾರಾ! ದೇವದೂತನಾಗಿ ನೀನು ಬಂದೆ! ಅವಳ ಮೈ ಪೀತಾಂಬರಗಳಿಂದ ಮುಚ್ಚಿತು. ಅವಳಿಗೆ ಅಷ್ಟಾಭರಣಗಳೂ ದೊರೆತವು. ಅವಳೀಗ ದೀನದರಿದ್ರ

ಕುಮಾರಿಯಲ್ಲ, ಅದೆಲ್ಲ ನಿನ್ನ ಅಭಿಮಾನ! ಭಗವಂತನ ದಯೆ! ಆದರೆ ಕುಮಾರಾ! ಅವಳ ವಿಚಾರವು ಈ ರೀತಿ ಬಗೆಹರಿಸಲಾರದ ಸಮಸ್ಯೆಯಾಗಿದೆ. ಯಕ್ಷರು, ಗಂಧರ್ವರು, ಕಿನ್ನರು, ಕಿಂಪುರುಷರು....ಯಾವುದೋ ಅಮಾನುಷ ಗುಂಪಿಗೆ ಸೇರಿದವರಿಂದ ಅವಳು ಅರಿಯಲಾಗದ, ಬಿಡಿಸಿಕೊಳ್ಳಲಾಗದ ಬಂಧ ನಕ್ಕೊಳಗಾಗಿದ್ದಾಳೆ. ಆ ಅವ್ಯಕ್ತ ಪ್ರಭಾವದಿಂದ ಬಿಡುಗಡೆ ಹೊಂದಿದರೆ ಅವಳು ನಿನ್ನವಳಾಗಬಹುದು, ನಿನಗಿಂತಲೂ ಅನುರೂಪನಾದ ವರನನ್ನು ಎಲ್ಲಿಂದ ತರಲಿ? ಆದರೆ ಕುಮಾರಾ! ತಿಳಿದೂ ತಿಳಿದು ನೀನು ಅವಳನ್ನು ಹೇಗೆ ಮದುವೆಯಾಗಬಲ್ಲೆ? ರಾಜಕುಮಾರನಿಗಾದ ಗತಿಯನ್ನು ನೆನೆಸಿಕೊಂಡರೆ ಅವಳನ್ನು ನಿನಗೆ ವಿವಾಹಮಾಡಿಕೊಡಲು ನನಗೆ ಸಮ್ಮತಿಯಿಲ್ಲ. ನಡೆದುದೆಲ್ಲ ವನ್ನೂ ಯೋಚಿಸಿದರೆ ಅವಳು ಈಗಿರುವ ಹಾಗೆಯೇ ಇದ್ದುಬಿಡುವುದು ಮೇಲು ಎಂದೆಣಿಸುತ್ತದೆ."

ಹೀಗೆಂದು ವೃದ್ಧನು ತನ್ನ ಕಥೆಯನ್ನು ಮುಗಿಸಿದನು.

× × × × ×

"ಮುಂದೇನು? ಮುಂದೇನು?" ನನ್ನ ಮತ್ತು ಮುಬಾರಕನ ಮನಸ್ಸಿನಲ್ಲಿ ಈ ಒಂದೇ ಯೋಚನೆ. ಅಂಥ ವೃದ್ಧನ ಕರುಣಾಜನಕ ಕಥೆಯನ್ನು ಕೇಳಿದ ಬಳಿಕವೂ ನಾನು ನನ್ನ ಪ್ರಣಯಾಭಿಲಾಷೆಯನ್ನು ತೊರೆಯಲಾಗಲಿಲ್ಲ. ನನ್ನ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲವೆದ್ದಿತು; ಅಂತೆಯೇ ಅಲ್ಲಿ ಸಂಶಯವೂ ಮೂಡಿತ್ತು. ಒಂದುವೇಳೆ ನಾನು ಹಠತೊಟ್ಟರೆ ತಂದೆಯು ತನ್ನ ಮಗಳನ್ನು ನನಗೆ ಕೊಟ್ಟು ವಿವಾಹ ಮಾಡಲು ಒಪ್ಪಬಹುದು, ಆದರೆ ಮುಬಾರಕನು ಅದಕ್ಕೆ ಸಮ್ಮತಿಸಲಾರನೆಂದೇ ಎಣಿಸುತ್ತೇನೆ. ಅವನು ಮೋಹನಾಂಗಿಯನ್ನು ಕರೆದುಕೊಂಡು ಹೋಗಿ ಜಿನ್ನರ ರಾಜನಾದ ಮಾಲಿಕ್ ಸಾದಿಕನಿಗೆ ಒಪ್ಪಿಸಿ ಬಿಡುವುದರಲ್ಲಿ ಸಂಶಯವಿಲ್ಲ. ಆಗ ನಾನು ಯೋಚಿಸಿಕೊಂಡೆ. ಒಮ್ಮೆ ಆ ಸರ್ವಾಂಗ ಸುಂದರಿಯು ನನ್ನ ಕೈವಶವಾದರೆ ಸಾಕು; ನಾನು ಹೇಗಾದರೂ ಹೆಣಗಾಡಿ, ಮುಬಾರಕನನ್ನು ಒಪ್ಪಿಸಿ ಅವಳನ್ನು ನಾನೇ ಪಡೆಯುತ್ತೇನೆ, ಮುಬಾರಕನು ನನಗೆ ಸಹಾಯಮಾಡಲು ಸಮ್ಮತಿಸಿಯೇ ಸಮ್ಮತಿಸುತ್ತಾನೆ. ಆದರೆ ಮತ್ತೆ ನನ್ನಲ್ಲಿ ಹೊಸದೊಂದು ಸಂಶಯವು ಮೂಡಿತು. ಒಂದು ಸಮಯ ಮುಬಾರಕನು ನನ್ನ ಬಯಕೆಯನ್ನು ಈಡೇರಿಸಲು ಸಮ್ಮತಿಸಿದನೆಂದೇ ಇಟ್ಟು

ಕೊಳ್ಳೋಣ. ಆದರೆ ಜಿನ್ನರ—ಸಾದಿಕ್ ! ಅವನು ನನ್ನನ್ನು ಜೀವಸಹಿತ ಬಿಟ್ಟಾನೇ ? ಈ ರಾಜಕುಮಾರನ ತಲೆಕಡಿದು ಹಾಕಿದವರು ಅವನ ಪಂಗಡ ದವರೇ ಇರಬೇಕು. ಅವರು ನನ್ನ ತಲೆಯನ್ನೂ ಕಡಿದು ಹಾಕಬಹುದು. ಛಿ! ಸಿಂಹಾಸನವನ್ನು ವಶಪಡಿಸಿಕೊಳ್ಳುವುದಕ್ಕೆ ಉಪಾಯವನ್ನು ಹುಡುಕಿ,ಸಹಾಯ ವನ್ನು ಪಡೆಯಲು ಬಂದು, ಹತ್ತುವರ್ಷಗಳಕಾಲ ಅನಂತವಾಗಿ ದುಡಿದು ಈಗ ತಲೆ ಕಡಿಸಿಕೊಳ್ಳುವುದೆ ? ತಲೆ ಕಡಿಸಿಕೊಳ್ಳುವುದಕ್ಕೆ ಕಣ್ಣು ಕಾಣದ ದೇಶಗಳಿ ಗೇಕೆ ಬರಬೇಕಾಗಿತ್ತು ? ಇಷ್ಟು ಕಷ್ಟ ನಷ್ಟಗಳನ್ನೂ ಏಕೆ ಅನುಭವಿಸ ಬೇಕಾ ಗಿತ್ತು ? ಅದೂ ಒಂದು ಕಡೆ ಇರಲಿ ; ತನ್ನ ಮಗನ ಗತಿ ಹಾಗಾದಮೇಲೆ ಈ ನಾಡ ಅರಸನು ಬೇರೊಬ್ಬನು ಬಂದು ಈ ಸುಂದರಿಯನ್ನು ಮದುವೆಯಾಗುವೆ ನೆಂದರೆ ಅವನನ್ನು ತೀರಿಸಿಯೇ ಬಿಡುತ್ತಾನೆ. ಹೇಳಿ ಕೇಳಿದ್ದನ್ನೆಲ್ಲ ಲೆಕ್ಕ ಹಾಕಿ ನೋಡಿದರೆ ತನ್ನ ಮಗನ ತಲೆಯನ್ನು ಯಾವುದೋ ಅಶರೀರ ಹಸ್ತವು ಕಡಿದು ಹಾಕಿತೆಂದು ತಿಳಿದಮೇಲೂ ಈ ನಿರಪರಾಧಿ ತರುಣಿಯ ತಲೆಯನ್ನೂ ಹಾಗೆಯೇ ಕಡಿದು ಹಾಕಬೇಕೆಂದು ಅಪ್ಪಣೆ ಮಾಡುತ್ತಿ ದ್ದನೇ ? ಹಾಗೆ ಅವಳ ತಲೆಯನ್ನು ಕಡಿಸಿ ಹಾಕಿದ ಮಾತ್ರದಿಂದ ಇವನ ಮಗನು ಎದ್ದು ಬರಲಾರನೆಂದು ತಿಳಿಯದೇ ಈ ಮೂಢನಿಗೆ ? ಇಂತಹ ಮೂರ್ಖ ಮತ್ತೆ ಪ್ರಧಾನಿಯನ್ನೂ, ಸೇನಾಧಿಪತಿಯನ್ನೂ, ಸೈನಿಕರನ್ನೂ, ಮತ್ತೊಬ್ಬ ಪ್ರಧಾನಿಯನ್ನೂ, ನಾಲ್ಕುಜನ ಮಂತ್ರವಾದಿಗಳನ್ನೂ ನಿಷ್ಫಲ ಕಾರ್ಯದ ಸಾಧನೆಗಾಗಿ ಕಳುಹಿಸಿ ಅವರೆಲ್ಲರ ಮೃತ್ಯುವಿಗೂ ಕಾರಣನಾದ. ಇಷ್ಟಾದರೂ ಈ ಮೂರ್ಖ—ಅತೀವ ಹೇಡಿ. ಇತರರನ್ನು ಬಲಿಪೀಠಕ್ಕೆ ತಳ್ಳಿ ತಾನು ಮರೆಯಲ್ಲಿ ಅಡಗಿ ಕುಳಿತುಕೊಳ್ಳುವವನು. ಇವನ ಒಂದೊಂದು ಕೃತ್ಯ ದಿಂದಲೂ ಇವನೆಷ್ಟು ಕ್ರೂರಿ–ಎಷ್ಟೊಂದು ವಿವೇಚನಾರಹಿತನಾದವನು ಎಂದು ವ್ಯಕ್ತವಾಗುತ್ತದೆ. ನಮ್ಮ ಚಿಕ್ಕಪ್ಪನಂತೆ ಇವನೂ ಕೃತ್ಯಮಿ ! ಅವನಂತೆ ಇವನೂ ಹೀನಮಾನವ ! ಈಗ ನಾನು ತರುಣಿಯನ್ನು ಇಲ್ಲೇ ವಿವಾಹವಾಗ ಬಯಸಿದರೆ ಇತ್ತಕಡೆ ಈ ಮೂರ್ಖ ರಾಜನ–ಅತ್ತಕಡೆ ಆ ಕೋಪಿಷ್ಠ ಸಾದಿಕ್ಕನ–ಇಬ್ಬರ ದುರಾಗ್ರಹಕ್ಕೂ ಪಾತ್ರನಾಗಬೇಕಾಗುತ್ತದೆ. ಹಾಯ್ ! ಹಾಯ್ ! ವಿಧಿಯು ಬೀಸಿರುವ ಬಲೆಯಿಂದ ನಾನು ಬಿಡಿಸಿಕೊಳ್ಳ ಬಹುದಾದರೂ ಹೇಗೆ ?

ಹೇಗೆ ?........ಹೇಗೆ ?........ಹೇಗೆ ?

ಈ ತೆರನಾದ ಆಲೋಚನೆಗಳಲ್ಲಿ ನಾನು ಮಗ್ನನಾಗಿದ್ದಂತೆಯೆ ಒಂದು ತಿಂಗಳು ಹೇಗೋ ಉರುಳಿ ನಾನು ಎರಡನೆಯ ತಿಂಗಳಲ್ಲಿ ಕಾಲಿಟ್ಟಿದ್ದೆ ಅವರೆ ಪ್ರತಿ ನಿತ್ಯವೂ ಆ ವೃದ್ಧನನ್ನು ನಿಸ್ಪೃಹವಾಗಿ ಸೇವಿಸುತ್ತ ಬಂದೆ. ಆತನ ಗುಣಾತಿಶಯಗಳನ್ನು ಮುಕ್ತಕಂಠದಿಂದ ಸ್ತೋತ್ರಮಾಡುತ್ತ ತರುಣಿಯನ್ನು ನನಗೆ ವಿವಾಹಮಾಡಿಕೊಡಬೇಕೆಂದು ಬಗೆಬಗೆಯಾಗಿ ಅವನನ್ನು ಬೇಡುತ್ತಿದ್ದೆ. ಕಾಲವು ಗತಿಸುತ್ತಿತ್ತು. ವೃದ್ಧನು ಇದ್ದಕಿದ್ದಂತೆ ವ್ಯಾಧಿಯಿಂದ ನರಳತೊಡಗಿದನು. ಅದು ಅವನ ಕೊನೆಯದಿನಗಳೆಂದು ಅವನು ತಿಳಿದುಕೊಂಡ. ಒಂದೆಡೆ ನನ್ನ ಎಡೆಬಿಡದ ಬೇಡಿಕೆ; ಮತ್ತೊಂದೆಡೆ ತಾನಳಿದಮೇಲೆ ತನ್ನ ತಬ್ಬಲಿ ತರಳೆಗೆ ಗತಿಯಾರೆಂಬ ಚಿಂತೆ! ನಾನು ಅವನ ವ್ಯಾಧಿ ಕಾಲದಲ್ಲಿ ಅವನ ಶುಶ್ರೂಷೆ ಮಾಡುತ್ತಲೇ ಬಂದೆ. ವೈದ್ಯರು ಹೇಳಿದ ಎಲ್ಲ ಔಷಧಿಗಳನ್ನೂ ನಾನವನಿಗೆ ತರಿಸಿಕೊಟ್ಟೆ. ನಾನೇ ತಯಾರಿಸಿದ ಊಟವನ್ನು ಅವನಿಗೆ ನನ್ನ ಕೈಯಾರೆ ಉಣಿಸಿದೆ.

ಇದನ್ನೆಲ್ಲ ಕಂಡು ಅವನ ಮನಸ್ಸು ನನ್ನತ್ತ ಒಲಿಯುತ್ತ ಬಂತು. ಅವನು ಹೇಳಿದ :

"ಚಕ್ರವರ್ತಿ ಕುಮಾರಾ! ನಿನ್ನಂತಹ ಸ್ಥಿತಪ್ರಜ್ಞನನ್ನು ಕಾಣುವುದು ವಿರಳ. ಹಿಡಿದ ಹಠವನ್ನು ನೀನೆಷ್ಟು ಸ್ಥಿರವಾಗಿ ಶಾಂತನಾಗಿ, ಪ್ರೀತಿ ಸೌಹಾರ್ದಗಳಿಂದ ಸಾಧಿಸುತ್ತಿರುವೆ? ನಿನ್ನ ಈ ಗುಣಗಳು ನಿಜವಾಗಿಯೂ ಚಕ್ರವರ್ತಿಯ ಲಕ್ಷಣಗಳು! ನಾನು ನಿನಗೆಷ್ಟೋ ಸಲ ಎಷ್ಟೋ ಬಗೆಯಲ್ಲಿ ಹೇಳಿದ್ದೇನೆ. ನನ್ನ ಕುಮಾರಿಯ ಹಸ್ತವನ್ನು ನೀನಾಶಿಸುವುದು ಅನ್ಯಾಯವಲ್ಲದಿದ್ದರೂ ಎಷ್ಟೊಂದು ಅಪಾಯಕರವೆಂದು, ಆದರೂ ನೀನು ನಿನ್ನ ಸಂಕಲ್ಪದಿಂದ ಚಲಿಸದೆ ಇದ್ದೀಯೆ. ನಿನ್ನ ಎದೆಯು ದಯೆಯಿಂದ ತುಂಬಿದುದು; ನಿನ್ನ ಧ್ಯೇಯವು ಸೇವೆಯನ್ನು ಅಪೇಕ್ಷಿಸುತ್ತದೆ. ನಿನ್ನ ಪ್ರಯತ್ನದಿಂದ ನೀನು ವಿಮುಖನಾಗಲಾರೆ ಎಂದು ನನಗನ್ನಿಸುತ್ತದೆ. ಹೇಳಿದುದನ್ನೆಲ್ಲ ಹೇಳಿಯಾಯಿತು. ನೀನು ಕೇಳುವಂತಿಲ್ಲ. ಹೇಗೂ ನಾನೀಗ ಮರಣೋನ್ಮುಖನಾಗಿದ್ದೇನೆ. ನಾನು ಗತಿಸಿದ ಬಳಿಕ ನನ್ನೀ ಕುಮಾರಿಯು ಅನಾಥಳಾಗುತ್ತಾಳೆ. ಆದುದರಿಂದ ಅವಳ–ನಿನ್ನ–ಹಣೆಯಲ್ಲಿ ಏನೇನು ಬರೆದಿದೆಯೋ ಹಾಗೆಯೇ ಆಗಿಕೊಂಡು ಹೋಗಲಿ. ಅದನ್ನು ತಪ್ಪಿಸಲು ನಾನೆಷ್ಟರವನು? ಆದರೆ ನಾನು ಹೇಳುವುದಿಷ್ಟೆ. ಅವಳನ್ನು ನೀನು ವಿವಾಹವಾಗಲು ನಾನು ಒಪ್ಪುವೆನಾದರೂ, ಆ ವಿವಾಹವು ಮುಟ್ಟಿಗೆ ನಾನು

ಜೀವದಿಂದಿರುವಾಗ ಬೇಡ. ಇನ್ನು ಕೆಲವೇ ದಿವಸಗಳಲ್ಲಿ ನಾನು ಸಾಯುತ್ತೇನೆ. ಆಗ ನೀನು ಅವಳನ್ನು ನಿನ್ನಿಷ್ಟದಂತೆ ಮದುವೆ ಮಾಡಿಕೊಳ್ಳಬಹುದು."

ವೃದ್ಧನಿಗೂ ನನಗೂ ನಡೆಯುತ್ತಿದ್ದ ಮಾತುಕತೆಗಳನ್ನು ಕೇಳಿ ಆ ಲಲನಾ ಮಣಿಯೂ ತನ್ನಲ್ಲಿ ಒಂದು ತೀರ್ಮಾನಕ್ಕೆ ಬಂದು ಅಂದು ರಾತ್ರಿಯೇ ತನ್ನ ತಂದೆಯ ಬಳಿ ಕುಳಿತು "ಅಪ್ಪ! ನಾನು ಆತನನ್ನು ವಿವಾಹ ಮಾಡಿಕೊಳ್ಳುತ್ತೇನೆ" ಎಂದು ಹೇಳಿದಳು. ಅದನ್ನು ವೃದ್ಧನಿಂದರಿತಮೇಲೆ ನನಗಾದ ಸಂತೋಷವನ್ನು ಹೇಗೆ ವರ್ಣಿಸಲಿ ?

ಇದು ನಡೆದ ಕೆಲದಿನಗಳಲ್ಲೇ ಆ ವೃದ್ಧನು ಸತ್ತುಹೋದನು. ಆತನ ದುರಂತ ಕಷ್ಟಗಳು ಮರಣದಿಂದ ಮುಕ್ತಾಯಗೊಂಡುವು. ಅಂತ್ಯಕ್ರಿಯೆಗಳು ಮುಗಿದ ನಾಲ್ಕನೆಯ ದಿವಸ ಮುಬಾರಕನು ಸುಂದರಾಂಗಿಯ ರಕ್ಷಣಭಾರವನ್ನು ತಾನೇ ಹೊತ್ತನು. ಅವನು ಅವಳನ್ನು ಅತ್ಯಂತ ಗುಪ್ತವಾಗಿರಿಸಿದನು. ಮುಬಾರಕನು ಅಡಿಗಡಿಗೆ ನನ್ನನ್ನು ಎಚ್ಚರಿಸುತ್ತಲೇ ಇದ್ದನು.

"ಹುಜೂರ್ ! ಅವಳು ಮಲ್ಲಿಕ್‌ಸಾದಿಕನಿಗೆ ಮೀಸಲಾದವಳು, ಎಚ್ಚರಿಕೆ! ಅವಳನ್ನು ನೀನು ನೋಡಲೂ ಕೂಡದು ; ಮುಟ್ಟಲೂ ಕೂಡದು. ಅವಳಿಗೆ ಕಳಂಕ ತಟ್ಟದಂತೆ ಅವಳನ್ನು ಸಾದಿಕನಿಗೆ ಕರೆತಂದು ಒಪ್ಪಿಸಲು ನೀನು ವಚನ ಬದ್ಧನಾಗಿದ್ದೀಯೆ. ಆ ವಚನವನ್ನು ಮರೆತು ಮೋಸ ಹೋಗದಿರು. ಹಾಗೇ ನಾದರೂ ನೀನು ಮರೆತುಗಿರತರೆ ನಾವು ಸಾದಿಕ್ಕನ ಆಕ್ರೋಶಕ್ಕೆ ಗುರಿಯಾಗ ಬೇಕಾಗುತ್ತದೆ. ಆಗ ಇದುವರೆಗೂ ಪಟ್ಟ ಪ್ರಯತ್ನಗಳೆಲ್ಲವೂ ನಿಷ್ಫಲವಾಗುತ್ತವೆ. ಆಗ ನೀನು ಸಿಂಹಾಸನವನ್ನೂ ಕಳೆದುಕೊಂಡು ನರಳಬೇಕಾಗುತ್ತದೆ— ಹುಜೂರ್ ! "

ಮುಬಾರಕನು ಈರೀತಿ ನನ್ನನ್ನು ಎಚ್ಚರಿಸುತ್ತಲೇ ಇದ್ದ. ಆದರೆ ಲಾವಣ್ಯಮಯಿಯನ್ನು ನೋಡದೆ ನಾನು ದಿನೇ ದಿನೇ ಹುಚ್ಚನಂತಾಗುತ್ತಿದೆ. ನನ್ನ ಬಯಕೆಯನ್ನೂ, ಅದನ್ನೀಡೇರಿಸಿಕೊಳ್ಳಲು ನಾನು ತೋರುತ್ತಿದ್ದ ಹಠ ವನ್ನೂ ಕಂಡು ಮುಬಾರಕನು ಅತ್ಯಂತ ಕೋಪಾವೇಶದಿಂದ ತುಂಬಿಹೋದನು. ಅವನಲ್ಲಿ ಅಷ್ಟೊಂದು ಕ್ರೋಧವನ್ನೂ ಅದಕ್ಕೆ ಮುನ್ನ ನಾನು ನೋಡಿರಲೇ ಇಲ್ಲ. ಆದರೆ ಅವನ ಕೋಪಕ್ಕೆ ಅರ್ಥವಿಲ್ಲದೆ ಇರಲಿಲ್ಲ. ಅವನು ಕೇಳಿದನು :

"ಹುಜೂರ್ ! ಮಲ್ಲಿಕ್‌ಸಾದಿಕ್ಕನು ಇಲ್ಲಿಂದ ಬಹಳ ದೂರದಲ್ಲಿದ್ದಾನೆಂದು ನೀನು ತಿಳಿದಿರುವೆಯೇನು? ಅವನ ಕಟ್ಟಪ್ಪಣೆಯನ್ನು ನಿನ್ನಿಷ್ಟಬಂದಂತೆ ಮೀರಿಸ

ಬಿಡಬಹುದೆಂದು ನಿನ್ನ ಅಭಿಪ್ರಾಯವೋ ? ನೆನೆಸಿದ ಮಾತ್ರಕ್ಕೆ ಅವನು ಇಲ್ಲಿ ಬಂದು ಇಳಿಯ ಬಲ್ಲನು. ನಾವು ಮಾನವ ಗಣದವರು ; ಅವನು ಯಕ್ಷಗಣದವನು. ನಮಗಿಲ್ಲದ ಶಕ್ತಿ ಅವನಿಗುಂಟು. ಈ ಅರಸಕುಮಾರನ ಮತ್ತು ಆ ಪ್ರಧಾನಿಗಳ, ಸೇನಾಧಿಪತಿಯ, ಸೈನಿಕರ, ಮಂತ್ರವಾದಿಗಳ ಪ್ರಾಣಗಳನ್ನು ನಿಮಿಷಮಾತ್ರದಲ್ಲಿ ಹಾರಿಸಿಬಿಟ್ಟ ಆ ಅಶರೀರ ಹಸ್ತದ ಶಕ್ತಿಯು ಯಾರದೆಂದು ಬಲ್ಲೆಯಾ ? ಅದೆಲ್ಲ ನೆನಪಿರಲಿ. ನಿಸ್ಪೃಹ ಸೇವೆಯಿಂದ ಸಾದಿಕ್ಕನು ಸಂತುಷ್ಟನಾಗುತ್ತಾನೆ. ಕೊನೆಗೆ ಈ ನಿನ್ನ ಸೇವೆಯನ್ನು ಅಭಿನಂದಿಸಿ ಈ ಮಾನಿನೀ ಮಣಿಯನ್ನೇ ಸಂತೋಷದಿಂದ ನಿನಗವನು ಒಪ್ಪಿಸಿ ಬಿಡಬಹುದು."

ಮುಬಾರಕನ ಮಾತುಗಳಲ್ಲಿ ವಿವೇಕವು ಅಡಗಿತ್ತೆಂದು ನಾನು ಕಟ್ಟಕಡೆಗೆ ಪರಿಪೂರ್ಣವಾಗಿ ಗ್ರಹಿಸಿದೆ. ಸುಂದರ ತರುಣಿಯನ್ನು ಕರೆದುಕೊಂಡು ಹೋಗಿ ಮಲ್ಲಿಕ್‌ಸಾದಿಕ್ಕನಿಗೆ ಒಪ್ಪಿಸಿ ಬಿಡುವುದೇ ನ್ಯಾಯಬದ್ಧವೂ, ಮಂಗಳಕರವೂ ಆದ ಮಾರ್ಗವೆಂದು ನಾನು ಒಪ್ಪಿದೆ. ಬಳಿಕ ನಾನು ಎರಡು ಒಂಟೆಗಳನ್ನು ಕೊಂಡುಕೊಂಡೆ. ಒಂದು ಒಂಟೆಯಮೇಲೆ ಸಾಮಾನುಗಳನ್ನು ಹೇರಿ ಮುಬಾರಕನ ವಶದಲ್ಲಿ ಕೊಟ್ಟೆ. ಇನ್ನೊಂದು ಒಂಟೆಯಮೇಲೆ ನಾನೂ ಸುಂದರಾಂಗಿಯೂ ಕುಳಿತೆವು. ಸಾದಿಕ್ಕನ ರಾಜ್ಯದಕಡೆ ನಾವು ಪ್ರಯಾಣ ಹೊರಟೆವು. ಬಹಳ ದೂರ ಪ್ರಯಾಣಮಾಡಿ ನಾವು ಆರು ತಿಂಗಳನಂತರ ಜಿನ್ನರ ರಾಜ್ಯವನ್ನು ಮುಟ್ಟಿದೆವು.

ಮಲ್ಲಿಕನ ರಾಜ್ಯದ ಗಡಿಯನ್ನು ಮುಟ್ಟುವ ವೇಳೆಗೆ ನಾವು ಬಹುವಾಗಿ ದಣಿದಿದ್ದೆವು. ಆ ರಾತ್ರಿ ನಾವು ಅಲ್ಲಿದ್ದು ಒಂದು ಮನೆಯಲ್ಲಿ ವಿಶ್ರಾಂತಿ ಪಡೆದೆವು. ಮರುದಿನ ಪ್ರಾತಃಕಾಲ ನಾವು ಎದ್ದಾಗ ಸುಂದರಿಯು ಕಣ್ಣೀರು ಸುರಿಸುತ್ತಿದ್ದಳು ಏನುಕಾರಣ ದುಃಖಿಸುತ್ತಿರುವಳೆಂದು ಮುಬಾರಕನು ಅವಳನ್ನು ಕೇಳಿದನು.

"ನನಗಾಗಿ, ನನ್ನ ತಂದೆಗಾಗಿ, ನಮ್ಮ ಬಡತನವನ್ನು ನೀಗಿಸುವುದಕ್ಕಾಗಿ, ಮುರಿದು ಬಿದ್ದ ನನ್ನ ಬಾಳರಥವನ್ನು ಸರಿಹೊಂದಿಸುವುದಕ್ಕಾಗಿ, ನೀವಿಬ್ಬರು ಕಳೆದ ಒಂದು ವರ್ಷದಿಂದ ಪಟ್ಟಪಾಡನ್ನು ನೆನೆಸಿಕೊಂಡು ನನ್ನ ಎದೆಯು ಕೃತಜ್ಞತೆಯಿಂದ ತುಂಬಿಹೋದಂತಾಗಿದೆ. ಅಪಾರ ಋಣವನ್ನು ನಾನಾವ ಬಗೆಯಲ್ಲಿ ತೀರಿಸಬಲ್ಲೆನೆಂದು ನನಗೆ ಬಗೆ ಹರಿಂಪದಾಗಿದೆ. ಅದಕ್ಕಾಗಿ ನಾನು ದುಃಖಿಸುತ್ತಿದ್ದೇನೆ. ಮೇಲ್ಪಟ್ಟು ವಿಚಿತ್ರ ರಹಸ್ಯದಿಂದ ಮುಚ್ಚಿಹೋದ ನನ್ನ ಬಾಳುವೆಯ ಪರಿಣಾಮವೆಂತಿರಬಹುದೋ ಎಂಬ ಅತೀವ ಯಾತನೆಯು ನನ್ನನ್ನು ಕಾಡುತ್ತಿದೆ" ಎಂದಳು ಆ ಆರ್ತೆ.

"ಇದಕ್ಕಾಗಿ ಮರುಗದಿರು ತಾಯಿ! ಕರುಣಾಳು ಭಗವಾನನು ಇನ್ನು ಮುಂದೆ ನಿನ್ನನ್ನು ಸುಖದ ಹಾದಿಯಲ್ಲೆ ನಡೆಸಿಕೊಂಡು ಹೋದಾನೆಂದು ನಾನು ದೃಢವಾಗಿ ನಂಬುತ್ತೇನೆ. ಇಷ್ಟುದೂರ ಸಂರಕ್ಷಿಸಿಕೊಂಡು ಬಂದ ದೇವೇಶನು ಈಗ ಕೈಬಿಟ್ಟು ತನ್ನ ಕೀರ್ತಿಯನ್ನು ಕೆಡಿಸಿಕೊಂಡಾನೇ?" ಎಂದು ಮುಬಾರಕನು ಅವಳನ್ನು ಸಂತೈಸಿದನು.

"ಮುಂದೇನು ಮುಬಾರಕ್?" ನಾನವನನ್ನು ಹೊರಗೆ ಕರೆದು ಕೇಳಿದೆ.

"ನಾನೊಂದು ಹೊಸ ಯೋಚನೆಯನ್ನು ಮಾಡಿದ್ದೇನೆ ಹುಜೂರ್! ಇದುವರೆಗೆ ನಿನ್ನ ವಚನದಂತೆ ನೀನು ಈ ಸುಂದರಿಯನ್ನು ಮುಟ್ಟಲಿಲ್ಲ. ನಿನ್ನ ಪ್ರತಿಜ್ಞೆಯಂತೆ ಅವಳನ್ನು ಜಿನ್ನರ ರಾಜನಿಗೆ ಒಪ್ಪಿಸಿಯೂ ಬಿಡುವೆ. ಆದುದರಿಂದ ನಿನ್ನಲ್ಲಿ ಕರ್ತವ್ಯಲೋಪವು ಏರ್ಪಡುವುದಿಲ್ಲ. ಮುಟ್ಟದೆ. ಅಪಹರಿಸದೆ, ಒಪ್ಪಿಸಿ ಬಿಡುವ ಮಾತು ಮುಗಿದಂತಾಗುತ್ತದೆ. ಆದರೆ ಹಾಗೆ ಒಪ್ಪಿಸಿದ ಈ ಸುಂದರಿಯನ್ನು ಮಲ್ಲಿಕನು ಮುಟ್ಟದೆಯೆ ಮತ್ತೆ ನಿನಗೊಪ್ಪಿಸುವ ಹಂಚಿಕೆಯನ್ನೇ ನಾನು ಹವಣಿಸುತ್ತಿರುವುದು!"

ಮುಬಾರಕನ ಮಾತು ಬಹಳ ಸ್ವಾರಸ್ಯವಾಗಿತ್ತು. ಅಂತೂ ಅವನು ಕೊನೆಗೆ ನನ್ನ ಪಕ್ಷವನ್ನೇ ವಹಿಸಲು ಸಿದ್ಧನಾದರೂ, ಜಿನ್ನರ ನಾಯಕನಿಗೆ ನಾನಿತ್ತ ವಚನವು ಮುರಿಯಬಾರದೆಂತಲೂ ರೂಪುಗೊಳಿಸುತ್ತಲೆ ಬಂದಿದ್ದ. ಇರಲಿ ಮುಬಾರಕನ ಈ ಹೊಸ ಹಂಚಿಕೆಯನ್ನು ಕೇಳಲು ನನಗೆ ಕುತೂಹಲವಾಯಿತು.

"ಮುಬಾರಕ್! ಸುಂದರಿಯನ್ನು ಮುಟ್ಟಲಿಲ್ಲ; ನಿಜ; ಮಲ್ಲಿಕ್ಕನಿಗೆ ಒಪ್ಪಿಸಿ ಬಿಡುತ್ತೇವೆ; ಸತ್ಯ. ನಮ್ಮ ವಚನವು ಪವಿತ್ರವಾಗಿ ಪಾಲಿಸಲ್ಪಟ್ಟಂತಾಯಿತು. ಆದರೆ, ನಿನ್ನ ಈ ಹೊಸ ಹಂಚಿಕೆಯೇನು? ಸುಂದರಿಯನ್ನು ಮತ್ತೆ ಪಡೆಯುವ ಬಗೆ?" ನಾನು ಕೇಳಿದೆ.

ಮುಬಾರಕನು ತನ್ನ ಹೊಸ ಹಂಚಿಕೆಯನ್ನು ವಿವರಿಸಿ ಹೇಳಿದನು :

"ಈ ಜಿನ್ನರು ಸುಗಂಧ ದ್ರವ್ಯಗಳನ್ನು ಮುಟ್ಟಗೆ ಆಶಿಸುತ್ತಾರೆ. ದುರ್ಗಂಧವನ್ನು ಕಂಡರೆ ಅವರಿಗಾಗದು. ಆದುದರಿಂದ ತನ್ನ ದೇಹದ ಕೆಲವು ಅಂಗಗಳಿಗೆ ದುರ್ಗಂಧವನ್ನು ಬಳಿದುಕೊಳ್ಳುವಂತೆ ಸುಂದರಿಗೆ ಹೇಳು. ನಾವು ಅವಳನ್ನು ಮಲ್ಲಿಕನ ಬಳಿ ಕರೆದುಕೊಂಡು ಹೋಗಿ ಒಪ್ಪಿಸುವಾಗ ಅವನು ಆ ದುರ್ಗಂಧವನ್ನು ಸಹಿಸಲಾರದೆ 'ಇವಳನ್ನು ಕರೆದುಕೊಂಡು ಆಚೆ ನಡೆ ಎನ್ನುತ್ತಾನೆ'

ಅಷ್ಟೇ ಸಾಕು. ಅವಳು ಆ ಮೇಲೆ ಚೆನ್ನಾಗಿ ಮೈಯುಜ್ಜಿ ಸ್ನಾನ ಮಾಡಿದರೆ ತೀರಿತು ; ಎಂದಿನಂತೆ ಸುಗಂಧಿನಿಯಾಗುತ್ತಾಳೆ. ಆಗ ಅವಳು ನಿನ್ನವಳೇ !"

ಮರುದಿನ ಬೆಳಿಗ್ಗೆ ಮುಬಾರಕನು ಸುಂದರಿಗೆ ಹೊಂಗೆಎಣ್ಣೆಯ ಮುಲಾಮನ್ನು ಕೊಟ್ಟನು. ಅವಳದನ್ನು ತನ್ನ ಕೈಕಾಲು ಕೊರಳುಗಳಿಗೆ ಸವರಿಕೊಂಡು ಉತ್ತಮ ಉಡುಪುಗಳನ್ನು ಧರಿಸಿದಳು. ನಾನು ಅವಳನ್ನು ಸಾದಿಕ್ಕನ ಬಳಿ ಕರೆದೊಯ್ದೆನು. ಅವನು ಸುಂದರಿಯ ರೂಪಾತಿಶಯವನ್ನು ಕಂಡು ಅತ್ಯಂತ ಸಂತೋಷಗೊಂಡನು. ಆದರೆ ಅವಳು ದೂರವಾಗಿದ್ದುದರಿಂದ ಸಾದಿಕ್ಕನು ದುರ್ಗಂಧವನ್ನು ಕಂಡು ಹಿಡಿಯಲಾಗಲಿಲ್ಲ. ನನ್ನ ಸ್ಥಿರ ಪ್ರಯತ್ನಕ್ಕೂ, ನಾನು ಗಳಿಸಿ ತಂದ ಫಲಕ್ಕೂ ಸಂತೋಷಗೊಂಡವನಾಗಿ ಸಾದಿಕ್ಕನು ನನ್ನನ್ನು ಹತ್ತಿರ ಕರೆದು, ತನ್ನ ಬಳಿ ಕುಳ್ಳಿರಿಸಿಕೊಂಡು, ನನ್ನ ಸಾಹಸ ಸತ್ಯಸಂಧತೆಗಳನ್ನೂ ಕೊಂಡಾಡುತ್ತ ಹೇಳಿದನು :

"ಇದುವರೆಗೂ ಯಾವನೊಬ್ಬನೂ ಮತ್ತೊಬ್ಬ ಮಾನವನಿಗೆ ಕೊಡದಿದ್ದ ಸನ್ಮಾನವನ್ನು ನಾನು ನಿನಗೆ ಕೊಡುತ್ತೇನೆ. ನಿನ್ನ ತಂದೆಯ ರಾಜ್ಯವು ಈಗ ನಿನ್ನ ಕರಗತವಾದಂತೆಯೆ ; ನೀನು ನನ್ನ ಕುಮಾರನಿದ್ದಂತೆ ! ನಿನ್ನ ಹಿತವನ್ನು ರಕ್ಷಿಸಲು ನಾನು ಬದ್ಧನಾಗಿದ್ದೇನೆ ಕುಮಾರಾ !"

ಈ ರೀತಿ ಸಾದಿಕ್ಕನು ನನ್ನನ್ನು ಪ್ರೇಮ ಪುರಸ್ಸರವಾಗಿ ಮಾತನಾಡಿಸುತ್ತ, ದೂರದಲ್ಲಿ ನಿಂತಿದ್ದ ಆ ಮಾನಿನಿಯನ್ನು ಹತ್ತಿರ ಬರುವಂತೆ ಕರೆದನು. ಅವಳು ಅವನ ಸಮೀಪಕ್ಕೆ ಬಂದಳು. ಆ ಘಳಿಗೆಯಲ್ಲೆ ನಾನೂ ಮುಬಾರಕನೂ ಸಾದಿಕ್ಕನನ್ನು ಏಕಾಂತದಲ್ಲಿ ಬಿಟ್ಟು ಹೊರಗೆ ಬಂದೆವು. ಆದರೆ ಹೊಂಗೆ ಎಣ್ಣೆ ಮುಲಾಮಿನ ಆ ದುರ್ಗಂಧವನ್ನು ಸಾದಿಕ್ಕನು ಸಹಿಸಲಾರದೆ ಹೋದ. ಅವನು ತಾನಿದ್ದ ಸ್ಥಳವನ್ನು ಬಿಟ್ಟು ಹೊರಗೆ ಓಡಿಬಂದವನೇ. ಮುಬಾರಕನನ್ನೂ ನನ್ನನ್ನೂ ತನ್ನ ಬಳಿ ಕರೆದ. ಈ ಕೃತ್ರಿಮಕ್ಕೆ ಮುಬಾರಕನೇ ಕಾರಣನೆಂದು ಸಾದಿಕ್ಕನು ಅವನನ್ನು ದುರುಗುಟ್ಟಿಕೊಂಡು ನೋಡುತ್ತ, ಅವನನ್ನು ಇನ್ನೇನು ಕೊಂದು ಹಾಕುವುದರಲ್ಲಿದ್ದನು. ಆದರೆ ಮುಬಾರಕನು ಏನೇನೋ ಹೇಳಿ ತಾನು ತಪ್ಪಿತಸ್ಥನಲ್ಲವೆಂದು ನಿರೂಪಿಸಿ ಜೀವಸಹಿತ ಉಳಿದ. ಬಳಿಕ ಸಾದಿಕ್ಕನು ಕೋಪಾವೇಶದಿಂದ ನನ್ನತ್ತ ತಿರುಗಿ,

"ದ್ರೋಹಿ! ಹಾಗಾದರೆ ಇದು ನಿನ್ನ ಕೆಲಸವೇ ಆಗಿರಬೇಕು. ನಿನ್ನ ಕೆಲಸವೇ! ನಾನು ಅಷ್ಟು ಬಗೆಯಲ್ಲಿ ಹೇಳಿದ್ದರೂ, ನೀನಷ್ಟು ಬಗೆಯಲ್ಲಿ ನನ್ನನ್ನು ನಂಬಿಸಿದ್ದರೂ, ಕೊನೆಗೂ ನೀನು ವಂಚನೆಯನ್ನೇ ಮಾಡಿದೆಯಲ್ಲವೆ ?" ಎಂದು ಘುಡುಘುಡಿಸಿ ನನ್ನನ್ನು ಧ್ವಂಸಮಾಡಿಬಿಡುವುದರಲ್ಲಿದ್ದನು. ಆದರೆ ಅಷ್ಟರಲ್ಲಿ ನಾನು ಎಚ್ಚೆತ್ತುಕೊಂಡೆ. ಸಾದಿಕ್ಕನು ನನ್ನನ್ನು ಕೊಲ್ಲುವುದಕ್ಕೆ ಮುಂಚೆ ನಾನೇ ಮುಬಾರಕನ ಸೊಂಟದಲ್ಲಿ ನೇತಾಡುತ್ತಿದ್ದ ಕತ್ತಿಯನು ಕೈಗೆಳೆದುಕೊಂಡು ಸಾದಿಕ್ಕನ ಎದೆಯಲ್ಲಿ ಇರಿದೆ. ಆ ಇರಿತದಿಂದ ಅವನು ಸಾಯಲಿಲ್ಲವಾದರೂ, ಒಂದು ಚೆಂಡಿನ ರೂಪವನ್ನು ತಾಳಿ ಮೇಲೆ ಗಾಳಿಯಲ್ಲಿ ಹಾರಿಹೋದ.

ಇದರೊಂದಿಗೆ ಸಾದಿಕ್ಕನ ಕಥೆಯು ಮುಗಿಯಿತೆಂದೂ, ಇನ್ನು ನಾನು ಸುಂದರ ತರುಣಿಯನ್ನು, ಮುಬಾರಕನನ್ನೂ ಕೂಡಿಕೊಂಡು ಹಿಂತಿರುಗಬಹು ದೆಂದೂ ಎಣಿಸಿದ್ದೆ. ಆದರೆ ವಿಧಿ ಶಾಸನವು ಬೇರೆ ತೆರನಾಗಿದ್ದಿತು. ಚೆಂಡಿನ ರೂಪದಲ್ಲಿ ಮೇಲೆ ಹಾರಿಹೋದ ಸಾದಿಕ್ಕನು ಮತ್ತೆ ಮಾನವ ರೂಪದಲ್ಲಿ ಕೆಳಗಿಳಿ ದವನೇ ಯಾವುದೋ ಅಸ್ಪಷ್ಟ ಮಂತ್ರಗಳನುಚ್ಚರಿಸಿ, ನನ್ನಮೇಲೆ ಬಲವಾಗಿ ಒದ್ದನು. ನಾನು ಸತ್ತು ಕೆಳಕ್ಕುರುಳುವಂತೆ ಉರುಳಿದೆ. ಹೀಗೆ ಜ್ಞಾನ ಶೂನ್ಯ ನಾಗಿ ನಾನೆಷ್ಟು ಹೊತ್ತು ಬಿದ್ದಿದ್ದೆನೋ ನನಗೆ ಗೊತ್ತಾಗಲಿಲ್ಲ. ಆದರೆ ನಾನು ಎಚ್ಚೆತ್ತುಕೊಂಡು ನೋಡಿದಾಗ ನಾನಿದ್ದುದು ಯಾವುದೋ ಅಪರಿಚಿತ ಪ್ರದೇಶ ವೆಂದು ನನಗೆ ಕಂಡು ಬಂದಿತು. ನನ್ನ ಬಳಿ ಮುಬಾರಕನಿರಲಿಲ್ಲ. ಆ ಸುಂದ ರಾಂಗಿಯನ್ನೂ ನಾನು ಕಳೆದುಕೊಂಡಂತಾಯಿತು. ಎಲ್ಲಿಕ್ಕೂ ಮಿಗಿಲಾದ ಕೋತಿಯೂ ನನಗೆ ಸಿಕ್ಕಲಿಲ್ಲ. ಕೋತಿಯು ಸಿಕ್ಕದೆ, ಸಂಖ್ಯೆಯು ಪರಿಪೂರ್ಣ ವಾಗದು. ಸಂಖ್ಯೆಯು ಪರಿಪೂರ್ಣವಾಗದೆ ನಲವತ್ತು ಸಾವಿರ ರಾಕ್ಷಸರ ಬೆಂಬಲವೂ ಸಿಕ್ಕದು, ಬೆಂಬಲವಿಲ್ಲದೆ ನನ್ನ ಸಿಂಹಾಸನವೂ ಈಗ ನನ್ನಿಂದ ಅತಿ ದೂರವಾಯಿತು. ನನ್ನೆಲ್ಲ ಆಶೆಗಳೂ ಗಾಳಿಗೆ ತೂರಿ ಹೋದಂತಾದುವು, ನಾನು ಹಠಹಿಡಿಯದಿದ್ದರೆ....ಆದಿಯಿಂದಲೂ ಮುಬಾರಕನ ಎಚ್ಚರಿಕೆಯನ್ನು ಪಾಲಿ ಸುತ್ತ ಬಂದಿದ್ದರೆ....ಅವನೇಕೆ ಆ ದುರ್ಗಂಧಲೇಪನದ ಹುಂಚಿಕೆಯನ್ನು ನನಗೆ ಸೂಚಿಸುತ್ತಿದ್ದನು. ನಾನು ಮುಬಾರಕನ ಮಾತನ್ನು ನಂಬಿ ನಡೆದಿದ್ದರೆ, ಸಾದಿಕ್ಕನು ತರುಣಿಯನ್ನೂ ಕೊಡುತ್ತಿದ್ದನೇನೋ, ಅವಳನ್ನು ಪಡೆದು, ಕೋತಿ

ಯನ್ನು ತೆಗೆದುಕೊಂಡು ಮುಬಾರಕನೊಡನೆ ರಾಜ್ಯಕ್ಕೆ ಹಿಂತಿರುಗಿದ್ದರೆ.... ಆಗ ನನ್ನ ವಿಜಯ, ನನ್ನ ಆನಂದ, ಹೇಗಿರುತ್ತಿತ್ತು! ಹೌದು; ನಾನು ಮೂರ್ಖ, ನನ್ನ ಮೂರ್ಖತನದಿಂದ ನನ್ನ ಬಾಳಿಲ್ಲ ಮಣ್ಣು ಗೂಡಿಹೋಯಿತು.

ಇಷ್ಟಾದಮೇಲೆ ಏಕಾಂಗಿಯಾದ ನಾನು ಏನುಮಾಡಬೇಕೆಂದು ತಿಳಿಯದೆ ತತ್ತಳಿಸುತ್ತ ಕಂಡಕಂಡ ಕಡೆ ಅಲೆದೆ, ಹೊತ್ತುಹೊತ್ತಿಗೆ ಆಹಾರವಿಲ್ಲ ; ನಿಲ್ಲಲು ನೆರಳಿಲ್ಲ ; ಆದರದಿಂದ ಬಾ ಎಂದು ಕರೆವವರಿಲ್ಲ ; ಮುಂದೇನು ಮಾಡಬೇಕೆಂದು ಗೊತ್ತಿಲ್ಲ.

ಕೊನೆಗೊಂದು ದಿನ ನಾನು ಒಂದು ಪರ್ವತಾಗ್ರವನ್ನೇರಿ ಅಲ್ಲಿಂದ ಕೆಳ ಗುರುಳಿ ಪ್ರಾಣವನ್ನು ಕಳೆದುಕೊಳ್ಳಲು ನಿಶ್ಚಯಿಸಿದೆ. ನನ್ನ ಸನ್ನಾಹವು ಸಂಪೂರ್ಣವಾಗಿತ್ತು. ಇನ್ನೇನು ನಾನು ಆ ಪರ್ವತಾಗ್ರದಿಂದ ಕೆಳಗೆ ಧುಮುಕ ಬೇಕು—ಒಂದು ಕಾಲನ್ನು ಎತ್ತಿದ್ದೇನೆ. ಅಷ್ಟರಲ್ಲಿ 'ತಾಳು ! ತಾಳು ! ' ಎಂದು ಕೂಗುತ್ತ ಜೂಲ್-ಫಕರ್ ಖಡ್ಗವನ್ನು ಧರಿಸಿ, ಮೋರೆಗೆ ಮುಸುಕು ಹಾಕಿದ ಉತ್ತಮಾಶ್ವನ್ನು ಹತ್ತಿ ನನ್ನ ಬಳಿ ಬಂದ ಆಲಿ—ದೇವದೂತನು ನನ್ನ ತೋಳನ್ನು ಹಿಡಿದು ಹಿಂದಕ್ಕೆಳೆದು ಹೇಳಿದನು :

"ಏತಕ್ಕಾಗಿ ನೀನು ನಿನ್ನ ಪವಿತ್ರ ಪ್ರಾಣವನ್ನು ಚೆಲ್ಲಿಕೊಡುವೆ ? ತನ್ನ ಪ್ರಕೃತಿಯಿಂದಲೂ, ತನ್ನನ್ನು ಸುತ್ತುವರಿದ ಸಂದರ್ಭಗಳಿಂದಲೂ, ಮಾನವನು ಎಷ್ಟೋ ಬಗೆಯ ಕಷ್ಟನಷ್ಟಗಳಿಗೆ ಗುರಿಯಾಗುತ್ತಾನೆ. ಆದರೆ ಅವನು ದೈವ ದಲ್ಲಿ ಅಚಲ ನಂಬಿಕೆಯನ್ನಿಡಬೇಕು. ಕಷ್ಟಗಳಿಗೆ ಹೆದರಿ ಪ್ರಾಣವನ್ನು ನೀಗಿ ಕೊಳ್ಳುವುದು ಹೇಡಿಗಳ ಕುರುಹು, ರೂಮ್‌ನಗರಕ್ಕೆ ಹೋಗು, ಅಲ್ಲಿ ನಿನ್ನಂ ತೆಯೇ ಇನ್ನೂ ಮೂವರು ನೊಂದು ಬೆಂದ ಫಕೀರರು ಕಾದಿರುವರು. ಅವ ರೊಡನೆ ಕಲೆತುಕೋ. ಅಲ್ಲಿ ನೀನು ರೂಮ್ ಸುಲ್ತಾನನ್ನೂ ಸಂಧಿಸುವೆ. ಅವನೂ ಒಂದು ಬಯಕೆಯನ್ನು ತಾಳಿದ್ದಾನೆ. ದೈವ ಕೃಪೆಯಿದೆ. ನಿಮ್ಮೆಲ್ಲರ ಕೋರಿಕೆಗಳೂ ಈಡೇರುತ್ತವೆ,ಅದರಂತೆ ನಾನೀಗ ನಿಮ್ಮೊಡನೆ ಬಂದು ಸೇರಿದ್ದೇನೆ. ಸರ್ವ ಶಕ್ತನಾದ ಕರುಣಾಳು ಭಗವಾನನು, ನಮ್ಮೆಲ್ಲರ ಬಯಕೆಗಳನ್ನೂ ಈಡೇರಿ ಸುವನೆಂದು ನಂಬೋಣ" ಹೀಗೆಂದು ನಾಲ್ಕನೆಯ ಫಕೀರನು ತನ್ನ ಕಥೆಯನ್ನು ಮುಗಿಸಿದನು.

## ೩೧

ಮರೆಯಲ್ಲಿ ಅಡಗಿದ್ದ ರೂಮ್ ಸುಲ್ತಾನನಾದ ಆಜಾದ್ ಭಕ್ತನು ಆ ನಾಲ್ಕು ಜನ ಫಕೀರರಿಗೂ ಕಾಣಿಸಿಕೊಂಡು ಹೇಳಿದನು :

"ಎಲೈ ಫಕೀರ ಮಹಾಶಯರೇ! ನಿಮ್ಮ ಸ್ವಾರಸ್ಯಮಯವೂ ಕರುಣಾ ಜನಕವೂ ಆದ ಕಥೆಯನ್ನು ನಾನು ಮರೆಯಲ್ಲಿ ಕುಳಿತು ಕೇಳಿದೆ. ಈಗ ನನಗೆ ಮುಂದಟ್ಟಾಯಿತು. ನಿಮ್ಮ ಬಯಕೆಗಳು ಈಡೇರುವಂತೆಯೇ ನನ್ನ ಬಯಕೆಯೂ ಈಡೇರಬಲ್ಲುದೆಂದು ನನ್ನ ನಂಬಿಕೆ. ನೀವೆಲ್ಲ ದಯೆಯಿಟ್ಟು ನನ್ನ ಅರಮನೆಯ ಹೊಸ್ತಿಲನ್ನು ತುಳಿದು ಅದನ್ನು ಪಾವನ ಮಾಡಬೇಕು. ನನ್ನ ಆತಿಥ್ಯವನ್ನು ಸ್ವೀಕರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಅತಿ ದೈನ್ಯದಿಂದ ಬೇಡುತ್ತೇನೆ."

ಫಕೀರರು ಅರಸನ ಆಹ್ವಾನವನ್ನು ಮನ್ನಿಸಿ ಅವನೊಡನೆ ಅವನ ಅರಮನೆಗೆ ತೆರಳಿ ಅವನ ಅಪಾರ ಪ್ರೀತಿ ಪುರಸ್ಸರವಾದ ಆತಿಥ್ಯವನ್ನು ಪಡೆದರು. ಆಜಾದ್ ಭಕ್ತನು ಅವರೆಲ್ಲರನ್ನೂ ತನ್ನ ವಿಶ್ರಾಂತಿ ಭವನಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಅವರು ಆಯಾಸ ಪರಿಹಾರಮಾಡಿಕೊಳ್ಳಬೇಕೆಂದು ಬೇಡಿದನು.

ಫಕೀರರು ವಿಶ್ರಾಂತಿ ಪಡೆದು ಮೇಲೇಳುವ ವೇಳೆಗೆ ಆಜಾದ್‌ಭಕ್ತನು ಅವರ ಬಳಿ ಬಂದು :

"ದೈವಕಟಾಕ್ಷ! ಇಷ್ಟು ದಿನವೂ ಹಾರೈಸಿ ಹಾರೈಸಿ ಬೇಸತ್ತಿದ್ದೆ. ನಮ್ಮ ರಾಜವಂಶವನ್ನು ಉದ್ಧರಿಸಬಲ್ಲ ಒಂದು ಗಂಡುಶಿಶು ನನ್ನ ರಾಣಿಯರಲ್ಲೊಬ್ಬರಿಗೆ ಈಗ ತಾನೆ ಜನಿಸಿದೆಯಂತೆ! ದಯಾಮಯನ ಸೇವಕರಾದ ನಿಮ್ಮ ನಾಲ್ವರ ದರ್ಶನವಾದ ವೇಳೆ ಅಷ್ಟೊಂದು ಪವಿತ್ರವಾದುದು. ನನ್ನ ಬಯಕೆ ಈಡೇರಿತು! ಇನ್ನು ನೊಂದು ನರಳಿದ ನಿಮ್ಮೊಬ್ಬೊಬ್ಬರ ಬಯಕೆಯೂ ಈಡೇರುವುದನ್ನು ಕಂಡು ನಾನು ಸಂತುಷ್ಟಿ ಹೊಂದಬೇಕು. ಆಗಲೇ ನನ್ನ ಮನಸ್ಸಿಗೆ ಸಂಪೂರ್ಣ

ನೆಮ್ಮದಿಯುಂಟಾಗಬೇಕಾದರೆ. ಈಗ ಪುಣ್ಯಮಯಿಗಳಾದ ನೀವು ನನ್ನ ಮೇಲೆ ಕೃಪೆಯಿಟ್ಟು ಜನಿಸಿದ ರಾಜಕುಮಾರನನ್ನು ಹರಸಬೇಕು" ಎಂದು ಬೇಡಿದನು.

ಸುಲ್ತಾನನ ಕೋರಿಕೆಯಂತೆ ನಾಲ್ವರು ಫಕೀರರೂ ಆತನನ್ನು ಹಿಂಬಾಲಿಸಿ ಸೂತಕಗೃಹದ ಕಡೆ ತೆರಳಿದರು. ಅಲ್ಲಿ ನೂತನವಾಗಿ ಜನಿಸಿದ ಆ ಶಿಶುವನ್ನು ದಾದಿಯು ಎತ್ತಿಕೊಂಡು ಬಂದು ಅವರ ಮುಂದೆ ಮೆತ್ತನೆಯ ಹಾಸಿಗೆಯ ಮೇಲೆ ಮಲಗಿಸಿದಳು. ನಾಲ್ವರು ಫಕೀರರೂ ಅದನ್ನು ಹರಸಿದರು. ರಾಜನು ತನ್ನ ಸಂತಾನಾಭಿವರ್ಧಕ ಆ ಕೋಮಲ ಶಿಶುವನ್ನು ಕಂಡು ಆನಂದಭರದಿಂದ ತುಂಬಿಹೋಗಿ ಜಗದೀಶನಿಗೆ ತನ್ನ ಕೃತಜ್ಞತೆಯನ್ನು ಮುಟ್ಟಿಸಿದನು.

ಮರುದಿನ ಪ್ರಾತಃಕಾಲ ಮಗುವಿಗೆ ಹಾಲು ಕುಡಿಸುವುದಕ್ಕಾಗಿ ದಾದಿ ನೋಡುತ್ತಾಳೆ. ಆದರೆ ಅಲ್ಲಿ ತೊಟ್ಟಿಲೂ ಇಲ್ಲ; ಮಗುವೂ ಇಲ್ಲ. ಇದ್ದಕ್ಕಿದ್ದಂತೆ ಮಗು ಮಾಯವಾಗಿ ಹೋದ ಆ ಶೋಕ ವಾರ್ತೆಯನ್ನು ಸುಲ್ತಾನನಿಗೆ ತಿಳುಹಿಸಿದರು. ಆತನು ಫಕೀರರಲ್ಲಿಗೆ ಬಂದು ಅವರಲ್ಲಿ ನಡೆದುದನ್ನು ಹೇಳಿ ಮುಂದೇನು ಮಾಡುವುದೆಂದು ಕೇಳಿದ. ಅವರೆಲ್ಲ ಸುಲ್ತಾನನನ್ನು ಹಿಂಬಾಲಿಸಿ ಮತ್ತೆ ಸೂತಿಕಾಗೃಹದ ಕಡೆ ಹೋದರು. ಐದು ಜನರೂ ಅಲ್ಲೇ ಕುಳಿತರು.

"ಈಗೇನು ಮಾಡುವುದು? ಮಗುವನ್ನು ಎಲ್ಲಿ ಹುಡುಕಿಸುವುದು?" ಸುಲ್ತಾನನು ಕಾತುರತೆಯಿಂದ ಕೇಳಿದ.

"ಮುಸುಕು ಹಾಕಿದ ಸವಾರ—'ರೂಮ್ ಸುಲ್ತಾನನ— ಮತ್ತು ನಿಮ್ಮ ನಾಲ್ವರ—ಬಯಕೆಗಳೂ ಈಡೇರುತ್ತವೆ. ದೈವಸಂಕಲ್ಪವು ಯಾವ ತೆರನೆ ಪ್ರಕಟವಾಗುತ್ತದೆ ಎಂಬುದನ್ನು ಕಾದು ನೋಡಿ' ಎಂದು ಎಚ್ಚರಿಸಿದ್ದಾನೆ. ಅದೇ ತೆರನೆ ಕಾದುನೋಡುವ" ಎಂದ ಒಬ್ಬ ಫಕೀರ!

"ನಾವು ಹೇಳುವುದೂ ಅದೇ!" ಎಂದರು ಉಳಿದ ಮೂವರೂ.

"ಈಗ ಮಾಡಬೇಕಾದುದು?" ಸುಲ್ತಾನನು ಕೇಳಿದ.

"ಮಾನವರು ಮಾಡಬೇಕಾದುದೇನು? ಸದಾ ಸೃಷ್ಟಿಕರ್ತನ ಗುಣಗಾನ ಮಾಡಿ, ಅವನ ದಯೆಯನ್ನು ಎದಿರುನೋಡುತ್ತಿರಬೇಕು; ಅಷ್ಟೇ; ಅದಕ್ಕಿಂತ ಅತಿಶಯವಾದ ಕರ್ತವ್ಯವೇನಿರುವುದು?" ಫಕೀರರು ಹೇಳಿದರು.

ಎಲ್ಲರೂ ಕುಳಿತು, ಖುರಾನನ್ನು ಪಠಿಸತೊಡಗಿದರು. ಪ್ರಾರ್ಥನೆಗಳು ಮುಗಿದುವು. ಎಲ್ಲರೂ ನಿರ್ಮಲಚಿತ್ತರಾಗಿ ಆಕಾಶದ ಕಡೆ ನೋಡುತ್ತ "ಯಾ ಅಲ್ಲಾ! ಯಾ ಅಲ್ಲಾ! ಅಲ್ಲಾ-ಹೋ-ಅಕ್ಬರ್!" ಎಂದು ಘೋಷಿಸು

ತ್ತಿದ್ದಾರೆ. ಇದ್ದಕಿದ್ದಂತೆ ಆ ಮಾಳಿಗೆಯು ಬಿರುಕು ಬಿಟ್ಟಿತು. ನಾಲ್ವರು ಗಂಧರ್ವಕನ್ನಿಕೆಯರು ಮಗುವಿನ ಸಹಿತ ತೊಟ್ಟಿಲನ್ನು ತಂದು ನೆಲದಮೇಲೆ ಇರಿಸಿ, ಸುಲ್ತಾನನಿಗೂ ಫಕೀರರಿಗೂ ನಮಸ್ಕರಿಸಿ, ಸುಲ್ತಾನನ ಕೈಯಲ್ಲಿ ಒಂದು ಓಲೆಯನ್ನಿಟ್ಟು ಅಂತರ್ಧಾನರಾದರು. ಸುಲ್ತಾನನು ಓಲೆಯನ್ನು ಬಿಚ್ಚಿ ಓದಿದನು. ಅದು ದೇವನಾಯಕನು ಬರೆದುದಾಗಿದ್ದಿತು. ಅದರ ಒಕ್ಕಣೆ ಈರೀತಿ ಇದ್ದಿತು:

"ಸುಲ್ತಾನ ಸಾಹೇಬ! ನಿನ್ನ ಮಗುವನ್ನು ಕರೆಸಿಕೊಂಡು ಅದಕ್ಕೆ ಮಜ್ಜನಸ್ನಾನಮಾಡಿಸಿ ಅದು ಚಿರಾಯುವಾಗಿ, ಜಗದ್ವಿಖ್ಯಾತವಾಗಿ, ಲೋಕವೂ, ಲೋಕನಾಯಕನೂ ಮೆಚ್ಚುವಂತೆ ಹರಸಿ ಕಳುಹಿಸಿದ್ದೇನೆ. ಈಗ ನಿನ್ನ ದೀರ್ಘ ಕಾಲದ ಬಯಕೆಯು ಈಡೇರಿದಂತಾಯಿತು. ಇನ್ನು ನಿನ್ನ ಬಳಿ ಬಂದು ಸೇರಿ ರುವ ಆ ನಾಲ್ವರು ಫಕೀರರು—ಅವರು ಪಟ್ಟ ಅನಂತ ಕಷ್ಟಗಳನ್ನು ಲೋಕ ನಾಯಕನು ಬಲ್ಲವನಾಗಿದ್ದಾನೆ. ಅವರ ಕಷ್ಟ ಸಹಿಷ್ಣುತೆಯನ್ನೂ ದೈವಭಕ್ತಿ ಯನ್ನೂ ಪರಿಕಿಸಲೆಂದೇ ಜಗದ್ವೀಶ್ವರನು ಅವರನ್ನು ಆ ತೆರನಾದ ಶೋಧನೆಗೆ ಗುರಿಮಾಡಿದ್ದು. ಅವರೆಲ್ಲ ನಾಳೆ ಅರುಣೋದಯಕ್ಕೆ ಮುಂಚೆ ಎದ್ದು ಮಜ್ಜನ ಸ್ನಾನವನ್ನು ಮಾಡಿ, ತಮ್ಮ ಫಕೀರ ವಸ್ತ್ರಗಳನ್ನು ತೊರೆದು ತಂತಮ್ಮ ಯೋಗ್ಯತೆ ಅಂತಸ್ತುಗಳನ್ನು ಸರಿಹೊಂದುವಂತೆ ಹೊಸ ಉಡುಪುಗಳನ್ನು ಧರಿಸಿ ಪ್ರಾತಃ ಕಾಲದ ವೇಳೆಗೆ ಪ್ರಾರ್ಥನೆಯನ್ನು ಪಠಿಸುತ್ತಿರಲಿ. ಆಗ ಅವರ ಇಷ್ಟಾರ್ಥಗಳು ಸಿದ್ಧಿಹೊಂದುತ್ತವೆ. ಹೀಗೆ ಅವರ ಬಯಕೆಗಳು ಈಡೇರಿದಮೇಲೆ ಅವರಿಗೆ ಬೇಕೆನಿಸುವ ಸಕಲ ಸೌಕರ್ಯಗಳನ್ನೂ ಮತ್ತು ಮರ್ಯಾದೆಗಳನ್ನೂ ಒದಗಿಸಿ ಕೊಟ್ಟು ಅವರನ್ನು ಅವರವರ ರಾಜ್ಯಗಳಿಗೆ ಬೀಳ್ಕೊಡು. ಎಂದೆಂದಿಗೂ ನಿಮ್ಮ ಭಗವದ್ಭಕ್ತಿಯು ಅಚ್ಚಳಿಯದಂತೆ ನಿಂತು ಲೋಕಕ್ಕೆ ಆದರ್ಶವಾಗಿ ಬೆಳಗಲಿ!"

× × × × × × ×

ಮರುದಿನ ಪ್ರಾತಃಕಾಲ ಸುಲ್ತಾನನ ಸಭಾಮಂಟಪದಲ್ಲಿ ಫಕೀರರು ಪ್ರಾರ್ಥನೆಯನ್ನು ಪಠಿಸುತ್ತ ಕುಳಿತಿದ್ದಾರೆ. ಸುಲ್ತಾನನು ಖುರಾನನ್ನು ಓದುತ್ತ ಕುಳಿತಿದ್ದಾನೆ. ಮತ್ತೊಂದೆಡೆ ಮೌಲ್ವಿಗಳೂ, ಮುಲ್ಲಾನರೂ ತಮ್ಮಷ್ಟಕ್ಕೆ ತಾವು ಪವಿತ್ರ ಪ್ರಾರ್ಥನೆಯನ್ನು ನಡೆಸುತ್ತಿದ್ದಾರೆ. ಪ್ರಧಾನಿಗಳು, ರಾಜ್ಯದ ಉನ್ನತ ಅಧಿಕಾರಿಗಳು, ಪಂಡಿತ ಶ್ರೇಷ್ಠರು, ಪ್ರಜಾನಾಯಕರು—ಎಲ್ಲರೂ

ಸಭೆಯಲ್ಲಿ ನೆರೆದಿದ್ದಾರೆ. ಮುಂದೊದಗುವ ಕೌತುಕವನ್ನು ಈಕ್ಷಿಸಲು ಕಾತುರತೆ ಯಿಂದಿದ್ದಾರೆ. ಆಗ ನಡೆದ ವಿಚಿತ್ರವೇನು ?

× × × × × × × ×

ಇದ್ದಕ್ಕಿದ್ದಂತೆ ಸಭಾಮಂಟಪದ ಮೇಲ್ಛಾವಣಿ ಕದಲಿದಂತಾಯಿತು. ದಿವ್ಯರತ್ನಖಚಿತ ಸಿಂಹಾಸನವೊಂದು ಸುಲ್ತಾನನ ಸಿಂಹಾಸನದ ಪಕ್ಕದಲ್ಲಿ ಇಳಿಯಿತು. ಅದರಲ್ಲಿದ್ದವನು ದೇವನಾಯಕ ! ಅವನನ್ನು ಕಂಡು ಸುಲ್ತಾನ ನಾದ ಆಜಾದ ಭಕ್ತನು ಅತ್ಯಾದರ ಗೌರವಗಳಿಂದ ಸ್ವಾಗತಿಸಿದನು. ಕುಶಲ ಪ್ರಶ್ನೆಗಳಾದಮೇಲೆ ದೇವನಾಯಕನು, "ಸುಲ್ತಾನ ಸಾಹೇಬ! ನಿನ್ನ ಕುಮಾರನು ಜನಿಸಿದ ಅದೇಕ್ಷಣಕ್ಕೆ ನನಗೊಬ್ಬ ಕುಮಾರಿಯು ಜನಿಸಿದಳು. ಅವಳನ್ನು ಮಾನವನೊಬ್ಬನಿಗೆ ಕೊಟ್ಟು ವಿವಾಹ ಮಾಡಬೇಕೆಂದೆಣಿಸಿದ್ದೇನೆ. ಆದುದರಿಂದ ಪ್ರಾಪ್ತವಯಸ್ಸಿಗೆ ಬಂದೊಡನೆ ನಿನ್ನ ಕುಮಾರನಿಗೂ ನನ್ನ ಕುಮಾರಿಗೂ ವಿವಾ ಹವು ನಡೆದು ನಿನ್ನ ನನ್ನ ಸ್ನೇಹ ಸಂಬಂಧಗಳು ಸಂತೋಷದಿಂದ ಅಭಿವರ್ಧಿಸಲಿ" ಎಂದು ಹೇಳಿದ.

"ನಿನ್ನ ಸೌಜನ್ಯಕ್ಕೆ ನಾನು ಚಿರಋಣಿ" ಎಂದ ಸುಲ್ತಾನ. ಬಳಿಕ ದೇವನಾಯಕನು "ಆ ನಾಲ್ವರು ಫಕೀರರು ಸಿಂಹಾಸನದ ಬಳಿ ಬರಲಿ" ಎಂದು ಆಜ್ಞಾಪಿಸಿದ. ಅವರು ಸಿಂಹಾಸನದ ಬಳಿ ಬಂದು ಅಲ್ಲಿ ಉಚಿತಾಸನದಲ್ಲಿ ಮಂಡಿಸಿದರು.

ಆಗ ದೇವನಾಯಕನು 'ಈಗ ನಾಲ್ಕನೆಯ ಫಕೀರನ ವಿಚಾರವನ್ನು ಮೊದಲು ತೆಗೆದುಕೊಳ್ಳುವ' ಎಂದು ಹೇಳಿ ತನ್ನ ಕೈಲಿದ್ದ ರಾಜದಂಡದಿಂದ ನೆಲವನ್ನು ಬಡಿದ. ನೆರೆದವರೆಲ್ಲ ಕುತೂಹಲದಿಂದ ಮುಂದೇನಾಗುವುದೋ ಎಂದು ಎದುರು ನೋಡುತ್ತಿದ್ದಂತೆಯೇ ಯಕ್ಷರಾಜನಾದ ಮಲ್ಲಿಕ್‌ಸಾದಿಕ್ಕನು ಎದುರಿಗೆ ಬಂದು ನಿಂತು ದೇವನಾಯಕನಿಗೆ ಕೈಮುಗಿದ :

"ಮಲ್ಲಿಕ್ ಸಾದಿಕ್ ! " ಎಂದು ದೇವನಾಯಕನು ಘರ್ಜಿಸಿದ.

"ಪ್ರಭು ! " ಎಂದ ಸಾದಿಕ್ಕನು ನಡುನಡುಗುತ್ತ.

"ಪ್ರಭು ! " ದೇವನಾಯಕನು ಘರ್ಜಿಸಿದ. "ನಾಚಿಕೆಯಾಗುವುದಿಲ್ಲವೆ ನಿನಗೆ? ನವತರುಣನಾದ ಈ ಫಕೀರ....ಏಕೆ-ಏಕೆ? ನಿನ್ನ ಆಪ್ತಮಿತ್ರನ ಪುತ್ರ.... ಚೀಣಾದೇಶಕ್ಕೆ ಒಡೆಯ....ಈತನನ್ನು ಸ್ವಾರ್ಥತೆಯಿಂದ ಏಳು ವರ್ಷ ದಣಿಸಿ-

ಅವನು ಕರೆತಂದ ನವಮೋಹನಾಂಗಿಯನ್ನು ಅವನಿಂದ ಅಪಹರಿಸಿ, ಅವನ ನಂಬುಗೆಯ ಸೇವಕ ಮುಬಾರಕನನ್ನು ಬಚ್ಚಿಟ್ಟೆ....ಈ ತರುಣನನ್ನು ತರುವಾಯ ನೀನೆಷ್ಟೊಂದು ಅಲೆಸಿದೆ ? ಏನೇನು ಕಷ್ಟನಷ್ಟಗಳಿಗೆ ಗುರಿಮಾಡಿದೆ ಬಲ್ಲೆಯಾ?"

"ಬಲ್ಲೆ ಪ್ರಭು !" ಯಕ್ಷರಾಜ ಕುಗ್ಗಿದ ಧ್ವನಿಯಿಂದ ಹೇಳಿದ.

"ಬಲ್ಲೆಯಲ್ಲವೆ ? ಹಾಗಾದರೆ ಆ ಮೋಹನಾಂಗಿ, ಮುಬಾರಕ, ನೀನೇ ಕೊಡಲೊಪ್ಪಿ ಕಡೆಗೆ ವಂಚಿಸಿದ ಆ ಕಡೆಯ ಕೋತಿ....ಎಲ್ಲಾ ಇಲ್ಲಿ ಬಂದು ನಿಲ್ಲಬೇಕು ; ಈಗಲೇ, ಈಕ್ಷಣದಲ್ಲೆ....ತಿಳಿಯಿತೆ ? "

"ತಿಳಿಯಿತು ಪ್ರಭು ! "

ಮರುಕ್ಷಣದಲ್ಲೆ ಮೋಹನಾಂಗಿ, ಮುಬಾರಕ, ಕೋತಿ ಎಲ್ಲಾ ಸಭೆಯಲ್ಲಿ ಸಿದ್ಧ ! ಚೀಣಾ ರಾಜಕುಮಾರನು ಅತಿಶಯಾನಂದದಿಂದ ಹಿಗ್ಗಿ 'ನಿನ್ನ ದಯೆಯಿಂದ ನನ್ನ ಬಯಕೆ ಈಡೇರಿತು ' ಎಂದ.

× × × × × ×

ಬಳಿಕ ದೇವನಾಯಕನು ಎರಡನೆಯ ಫಕೀರನ ವಿಚಾರವನ್ನೆತ್ತಿಕೊಂಡು ಮತ್ತೆ ನೆಲವನ್ನು ಬಡಿದ. ಒಬ್ಬ ಜಿನ್ನನು ದೇವನಾಯಕನೆದುರಿಗೆ ಬಂದು ನಿಂತು ತಲೆತಗ್ಗಿಸಿ ತನ್ನನ್ನು ಕೇಳುವುದಕ್ಕೆ ಮೊದಲೇ ದೇವನಾಯಕನನ್ನು ಕುರಿತು "ನನ್ನ ಮಹದಪರಾಧವನ್ನು ಮನ್ನಿಸಬೇಕು" ಎಂದು ಅಂಗಲಾಚಿ ಬೇಡಿದ.

"ಆಯಿತು ; ನಿಮ್‌ರೋಜ್ ರಾಜಕುಮಾರನು ಅನುರಕ್ತನಾಗಿದ್ದ ಆ ರಾಜಕುಮಾರಿಯನ್ನು ಕರೆತಂದು ಬಿಡು''

''ಆಗಲಿ ಎನ್ನುತ್ತ'' ಮರುಕ್ಷಣದಲ್ಲೆ ಅವಳನ್ನು ತಂದೊಪ್ಪಿಸಿದ–ಅವನು. ಬಳಿಕ ದೇವನಾಯಕನು ಎರಡನೆಯ ಫಕೀರನನ್ನು ಕುರಿತು "ನೀನೀ ನಿಮ್‌ರೋಜ್ ರಾಜಕುಮಾರನಿಗೆ ಈ ರಾಜಕುಮಾರಿಯನ್ನು ಕೊಂಡು ಹೋಗಿ ಒಪ್ಪಿಸಬೇಕಾಗಿಲ್ಲ. ಅವಳ ತಂದೆಯಾದ ಈ ಯಕ್ಷನೇ ಅವಳನ್ನು ಒಪ್ಪಿಸಿ ಬರುತ್ತಾನೆ. ನೀನು ಅನುರಕ್ತಳಾಗಿರುವ ಬಾಸ್ರಾರಾಣಿಯೊಂದಿಗೆ ವಿವಾಹಿತನಾಗಿ ಅವಳನ್ನು ಕರೆದುಕೊಂಡು ನಿನ್ನ ರಾಜ್ಯವನ್ನು ಸೇರಬಹುದು" ಎಂದನು.

"ನನ್ನ ಬಯಕೆ ಈಡೇರಿತು " ಎಂದ ಅವನು.

ಬಳಿಕ ಮೂರನೆಯ ಫಕೀರನ ವಿಚಾರಣೆಯಾಯಿತು. ದೇವನಾಯಕನು ತನ್ನ ದಂಡವನ್ನು ನೆಲದಮೇಲೆ ಬಡಿದಾಗ ಹೆದರಿದ ಯಕ್ಷ ತನ್ನ ಜೊತೆಯಲ್ಲಿ ಬಿಹ್‌ಜಾದಖಾನ–ಮತ್ತು ಫ್ರಾಂಕಾಯಿಸ್ ರಾಜಕುಮಾರಿ–ಇಬ್ಬರು ಕುದುರೆ ಯೊಂದಿಗೆ ಕರೆತಂದುಬಟ್ಟು "ಮನ್ನಿಸಬೇಕು. " ಎಂದು ಬೇಡಿದ.

"ನೀನು ಜಾಣ ! ಇರಲಿಹೋಗು" ಎಂದ ದೇವನಾಯಕ 'ನನ್ನ ಬಯಕೆ ಈಡೇರಿತು' ಎಂದ ಫಕೀರನಾಗಿದ್ದ ಪರ್ಷಿಯ ರಾಜಕುಮಾರ.

× × × × ×

ಬಳಿಕ ಮೊದಲನೆಯ ಫಕೀರನ ವಿಚಾರಣೆ ನಡೆಯಿತು. ದೇವನಾಯಕನು ಯಥಾಪ್ರಕಾರ ದಂಡವನ್ನು ನೇಲದಮೇಲೆ ಬಡಿದನು ; ಆಗ ಮಂತ್ರವಾದಿ ಯಕ್ಷನು ಪ್ರತ್ಯಕ್ಷನಾದ.

"ಈ ಯೇಮಾನ್ ವರ್ತಕನ ಪ್ರೀತಿಪಾತ್ರಳಾದ ಡಮಾಸ್ಕಸ್ ರಾಜ ಕುಮಾರಿ ಎಲ್ಲಿ ? "

"ಇದೋ ಕರೆತಂದೆ" ಎನ್ನುತ್ತ ಅಂತರ್ಧಾನನಾದ ಯಕ್ಷನು ಹತ್ತುನಿಮಿಷ ಗಳನಂತರ ಆ ಕನ್ನಿಕೆಯನ್ನು ತಂದು ದೇವನಾಯಕನಿಗೆ ಒಪ್ಪಿಸಿದ.

"ನನ್ನ ಬಯಕೆಯೂ ಈಡೇರಿತು ; ದೈವಚಿತ್ತ" ಎಂದ ಏಮಾನ್ ವರ್ತಕ —ಅರ್ಥಾತ್ ಮೊದಲನೆಯ ಫಕೀರ.

ಬಳಿಕ ದೇವನಾಯಕನು ನಿರ್ಮ್ರೋಜ್ ರಾಜಕುಮಾರಿಯನ್ನು ಕರೆತರಿಸಿ ಅವಳನ್ನು ಬಿಹ್‌ಜಾದ್‌ಖಾನನಿಗೆ ಮದುವೆ ಮಾಡಿಸಿದನು. ದೇವನಾಯಕನು ಅಲ್ಲಿಂದ ಬೀಳ್ಕೊಂಡು ಅಂತರ್ಧಾನನಾದನು. ಮತ್ತೊಂದು ಘಳಿಗೆಯಲ್ಲಿ ಪ್ರತಿ ಯೊಬ್ಬರೂ ತಮ್ಮ ತಮ್ಮ ಬಯಕೆಯು ಈಡೇರಿ, ತಮ್ಮ ಪ್ರಿಯಪತ್ನಿಯರನ್ನು ಕೂಡಿಕೊಂಡು, ಸುಲ್ತಾನನಿಂದ ಬೀಳ್ಕೊಂಡು ತಮ್ಮತಮ್ಮ ನಗರಗಳನ್ನು ಸೇರಿ ಕರುಣಾಳು ಪರಮಾತ್ಮನನ್ನು ಮನದಣಿಯ ಕೊಂಡಾಡುತ್ತ ಅತುಳಾನಂದ ಮಯ ಬಾಳುವೆಯನ್ನು ನಡೆಸುತ್ತ ಬಂದರು.

ಇದಲ್ಲವೆ ಪರಿಪೂರ್ಣ "ಫಲಪ್ರಾಪ್ತಿ !''

— ಮಂಗಳಂ. —

ಕಳಾನಿಧಿ ಮುದ್ರಣಾಲಯ, ಚಿಕ್ಕಪೇಟೆ, ಬೆಂಗಳೂರು ನಗರ.

## ನಮ್ಮ ಹೊಸ ಪ್ರಕಟನೆಗಳು

| | | | |
|---|---|---|---|
| 1. | ಭಜನಮಂಜರಿ (ದೇವರ ನಾಮಗಳು) | .... | 0–3–0 |
| | ಶ್ರೀ ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ.ಎ. ರವರ | | |
| 2. | ಫಲಪ್ರಾಪ್ತಿ (ಧಾರ್ಮಿಕ ಕಾದಂಬರಿ) | .... | 1–8–0 |
| | ಶ್ರೀ ಮೈ. ಸು. ಶೇಷಗಿರಿರಾವ್‌ರವರ | | |
| 3. | ಸುಲೋಚನೆ (ಸಾಮಾಜಿಕ ಕಾದಂಬರಿ) | .... | 0–6–0 |

## ನಮ್ಮಲ್ಲಿ ದೊರೆಯುವ ಇತರ ಪ್ರಕಟನೆಗಳು

| | | | |
|---|---|---|---|
| ಕಳುವಾದ ಆಭರಣ (ಪತ್ತೇದಾರಿ) | | .... | 0–8–0 |
| ಆತ್ಮಹತ್ಯೆ (ಪತ್ತೇದಾರಿ) | .... | .... | 0–12–0 |
| ತಬ್ಬಲಿ (ಸಾಮಾಜಿಕ) | .... | .... | 0–12–0 |
| ಕನ್ನಡ ಕಥಾವಳಿ (ಸಾಮಾಜಿಕ) | | .... | 0–8–0 |
| ಮೋಹಿನಿ ಸಾಮ್ರಾಜ್ಯ (ಸಾಮಾಜಿಕ) | | .... | 0–10–0 |
| ಆರಾತ್ರಿ (ಕಾಲ್ಪನಿಕ) | .... | .... | 1–0–0 |
| ಮಹಾಜಾಲ ವಿದ್ಯಾ | .... | .... | 2–0–0 |
| ಭೂಗೋಳದ ಕೈಪಿಡಿ | .... | .... | 1–4–0 |
| (ಹೈಸ್ಕೂಲ್ ಎಲ್ಲಾ ತರಗತಿಗಳಿಗೂ 30 ವರುಷದ ಪ್ರಶ್ನೆ ಪತ್ರಿಕೆಯೊಂದಿಗೆ) | | | |

## ಪ್ರಹಸನಗಳು

| | | | |
|---|---|---|---|
| ವರಪರೀಕ್ಷೆ | .... | .. . | 0–8–0 |
| ಸಂಬಂಧ ಸಮಸ್ಯೆ | .... | .... | 0–6–0 |
| ಮಂಗಳಗಂಡ | .... | .... | 0–5–0 |
| ಕೊಟ್ರಲ್ಲಾ ಕೈನಾ | .... | .... | 0–8–0 |
| ಪ್ರತಾಪ | .... | .... | 0–4–0 |
| ಮೇಟ್ರ್ರರಗಾಳಿಗ್ಗಿಂಡ | .... | .... | 0–6–0 |

## ಅಚ್ಚಿನಲ್ಲಿರುವ ಪ್ರಕಟನೆ

ಎಚ್. ನಾರಾಯಣ, ಬಿ.ಎ. ರವರ

| | | | |
|---|---|---|---|
| 1. | ಪುನರ್ಮಿಲನ (ಸಾಮಾಜಿಕ ಕಾದಂಬರಿ) | .... | 0–12–0 |
| | ಶ್ರೀ ಚೈತನ್ಯರವರ | | |
| 2. | ಶ್ರೀವರ್ಮಾ ಚಕ್ರಂ (ಸಾಮಾಜಿಕ ಕಾದಂಬರಿ) | .... | 0–6–0 |
| | ಶ್ರೀ ಎಚ್. ನರಸಿಂಹಯ್ಯರವರ | | |
| 3. | ಛಲದ ಚಂಡಿ (ಪತ್ತೇದಾರಿ) .... | .... | 0–10–0 |

ರಸವತ್ತಾದ ಘಟ್ಟಗಳಿಂದ ಕೂಡಿದ ಪಂಡಿತ ಪಾಮರರಿಗೆ

ಸಮಾನ ರಂಜನೆಯನ್ನೆಸೆವ

ಶ್ರೀ 'ಭಾರತಿ' ಯವರಿಂದ ರಚಿತವಾದ

# ಆ ರಾತ್ರಿ

(ಕಾಲ್ಪನಿಕ ಕಾದಂಬರಿ)

204 ಪುಟಗಳು .... ಬೆಲೆ: 1-0-0

— ವಿವರಗಳಿಗೆ —

**ಚಿತ್ರವಾಣಿ ಪ್ರಕಾಶನ**

732, ಚಿಕ್ಕಪೇಟೆ — — ಬೆಂಗಳೂರು-2.

